# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಮೋನಪ್ಪ, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ ಉಮೇಶ್, ಶ್ರೀಹರಿ, ವೆಂಕಟೇಶ್ ಭಟ್ ಎಡನೀರು, ಹರಿಣಿ, ವಿಜಯಾನಂದ, ವಾಗೀಶ*

*ಮುಖಚಿತ್ರ : ವರ್ಣಪಾರದರ್ಶಿಕೆ - ಕೆ. ಪಿ. ಸ್ವಾಮಿ*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಸಂಪಾದಕೀಯ

ಕಳೆದ ತಿಂಗಳ ಸಂಚಿಕೆಯನ್ನು ಅಂಚೆಗೆ ರವಾನಿಸಲು ಸಿದ್ಧತೆ ನಡೆಯುತ್ತಿದ್ದ ದಿನ (ಫೆ. ೨೭) ಗೋಧ್ರಾದಲ್ಲಿ ನರಹಂತಕರು ಎಸಗಿದ ಪಾತಕದ ಸುದ್ದಿ ಬರಲಾರಂಭಿಸಿತ್ತು. ಯಾವ ಮೃಗವೂ ಕಲ್ಪಿಸಿಕೊಳ್ಳಲಾರದಂತಹ ಕ್ರೌರ್ಯ, ಹಿಂಸೆ ಮತ್ತು ಅಮಾನುಷ ಹೀನತೆ ಆ ಬರ್ಬರ ದುಷ್ಕೃತ್ಯದಲ್ಲಿತ್ತು. ರೈಲಿನ ಬೋಗಿಯಲ್ಲಿ ಜೀವಂತ ಸುಟ್ಟುಹೋದ ಜನ ಗೋಧ್ರಾ ತಲುಪುವ ಮುನ್ನ ಹಿಂದಿನ ನಿಲ್ದಾಣಗಳಲ್ಲಿ ಎಂಥದೇ ಘೋರ ಅಪಚಾರಗಳಲ್ಲಿ ತೊಡಗಿ ಮುಸಲ್ಮಾನರ ಹೊಟ್ಟೆಗೆ ಬೆಂಕಿ ಇಟ್ಟಿದ್ದರೂ ಅವರನ್ನು ಬೋಗಿಯಲ್ಲಿ ಕೂಡಿಹಾಕಿ ಬೆಂಕಿ ಹಚ್ಚಿದ್ದು ಅತ್ಯಂತ ದುಸ್ಸಹನೀಯವಾದ, ಬೇಜವಾಬ್ದಾರಿತನದ, ಅಕ್ಷಮ್ಯ ಅಪರಾಧ. ಹಾಗೆ ಮಾಡಿದ ಜನರನ್ನು ಕೂಡಲೆ ಬಂಧಿಸಿ ಕ್ರಮ ಕೈಗೊಳ್ಳಬೇಕಾಗಿದ್ದುದು ಗುಜರಾತಿನ ಸರ್ಕಾರದ ಕರ್ತವ್ಯವಾಗಿತ್ತು. ಅದಕ್ಕೂ ಮುನ್ನ ದಿನನಿತ್ಯ ಅಯೋಧ್ಯೆಗೆ ಹೋಗುವವರು, ಬರುವವರು, ಎಸಗುತ್ತಿದ್ದ ದಾಂಧಲೆಗಳನ್ನು ತಡೆಗಟ್ಟಿ ಕೋಮು ವೈಮನಸ್ಯವನ್ನು ಎತ್ತಿಕಟ್ಟುವ ಪೈಶಾಚಿಕ ಕೃತ್ಯವನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕಾಗಿದ್ದ ಕರ್ತವ್ಯವೂ ಆ ಸರ್ಕಾರಕ್ಕಿತ್ತು. ಕೋಮು ದ್ವೇಷದ ಕಿಡಿಯನ್ನು ಜ್ವಾಲೆಯಾಗಿ ಬೆಳೆಸಿ ವಿಜೃಂಭಿಸಬೇಕೆಂಬ ವಿಕಟ ಆಕಾಂಕ್ಷೆ ನರೇಂದ್ರ ಮೋದಿಗೆ ಇಲ್ಲದಿದ್ದರೆ ಇದನ್ನೆಲ್ಲಾ ತಡೆಗಟ್ಟುವುದು ದುಸ್ತರವೇನೂ ಆಗುತ್ತಿರಲಿಲ್ಲ. ಮುಸಲ್ಮಾನರಿಗೆ ಬುದ್ಧಿ ಕಲಿಸಿ ಈ ನಮ್ಮ ಭವ್ಯ ರಾಷ್ಟ್ರವನ್ನು ಪ್ರೀತಿಸುವಂತೆ ಮಾಡುವ ಮಹಾನ್ ಆಶಯ ಈ ಆರೆಸ್ಸೆಸ್ ಪ್ರಚಾರಕನ ವಿಷತಲೆಯಲ್ಲಿ ಹೆಪ್ಪುಗಟ್ಟಿದ್ದುದು ಮುಂದಿನ ವಿಪತ್ಕಾರಿ ಅಧ್ಯಾಯಗಳಿಗೆ ಹಿನ್ನೆಲೆ. ಆದ್ದರಿಂದಲೇ, ಎಂದೋ ಜೈಲಿನಲ್ಲಿರಬೇಕಾಗಿದ್ದ ಕೇಂದ್ರದ ಗೃಹಮಂತ್ರಿ ಅದ್ವಾನಿ ಆರಂಭಿಸಿದ ರಥಯಾತ್ರೆಯ ಚರಿತ್ರೆ ನಮ್ಮ ದೇಶವನ್ನು ಇಂದಿನ ಕರುಣಾಜನಕ ಸ್ಥಿತಿಗೆ ಮುಟ್ಟಿಸಿದೆ. ಕೇವಲ ೭೨ ಗಂಟೆಗಳಲ್ಲಿ ಪರಿಸ್ಥಿತಿಯನ್ನು ಹತೋಟಿಗೆ ತಂದ ಕೀರ್ತಿ ಮೋದಿಯದು ಎಂದು ಆದ್ವಾನಿ ಪ್ರಶಂಸಾಪತ್ರ ನೀಡಿರುವುದಕ್ಕೆ ಈ ದೇಶ ಆತನಿಗೆ ಎಷ್ಟು ಛೀಮಾರಿ ಹಾಕಬೇಕೋ ಊಹೆಗೆ ನಿಲುಕುವುದಿಲ್ಲ. ಗೋಧ್ರಾ ನರಮೇಧ ನಡೆದು ಒಂದು ತಿಂಗಳಾಗಿದ್ದರೂ ಇನ್ನೂ ಗುಜರಾತಿನಲ್ಲಿ ಬೆಂಕಿ ಆರಿಲ್ಲ. ಇದು ಮೋದಿ ತಂದಿರುವ ಹತೋಟಿಗೆ ಅದ್ಭುತ ನಿದರ್ಶನ ! ಬೆಂಗಳೂರು ಸೇರಿದಂತೆ ನಮ್ಮ ರಾಜ್ಯದಲ್ಲಿ ಸಹ ಗುಜರಾತಿನ ಶಾಖ ಹಬ್ಬಿದೆ. ಗೋಧ್ರಾ- ಅಹಮ್ಮದಾಬಾದ್‌ಗಳಲ್ಲಿ ಹಿಂದು ಮುಸಲ್ಮಾನ ಯುವಕರು ಕತ್ತಿ ಝಳಪಿಸಿದರೆ ನಾವೇನು ಕಮ್ಮಿ ಪೌರುಷದವರೇ ಎನ್ನುವ ತಿಳಿಗೇಡಿತನ ವ್ಯಾಪಕವಾಗಿ ಹರಡಲು ಅದ್ವಾನಿ ತಂಡ ಕಳೆದ ಇಪ್ಪತ್ತು ವರ್ಷಗಳಿಂದ ನಡೆಸಿರುವ 'ರಾಷ್ಟ್ರೀಯ ಸಾಂಸ್ಕೃತಿಕ ಚಳುವಳಿ' ಒಂದು ಕಾರಣ. ಅದು ರಾಷ್ಟ್ರೀಯವೂ ಅಲ್ಲ, ಸಾಂಸ್ಕೃತಿಕವಂತೂ ಅಲ್ಲವೇ ಅಲ್ಲ. ಆದರೆ ಅದ್ವಾನಿಯಂತೆ ತಲೆ ಹುಳುಕು ಮಾಡಿಕೊಂಡಿರುವ ಮುಸಲ್ಮಾನ ಮುಲ್ಲಾಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಎರಡು ಅನಾಗರಿಕ ತಂಡಗಳೂ ಸೇರಿ ಚಪ್ಪಾಳೆ ಹೊಡೆದು ಕೇಕೆ ಹಾಕುತ್ತಿದ್ದಾರೆ, ಸಾವಿರ ಜೀವಗಳು ನಷ್ಟವಾಗಿವೆ, ಕೋಟಿಗಟ್ಟಲೆ ಸಂಪತ್ತು ನಾಶವಾಗಿದೆ, ನೂರಾರು ಮಕ್ಕಳ ಭವಿಷ್ಯ ಭಗ್ನವಾಗಿದೆ, ಕುಟುಂಬಗಳು ಕಮರಿಹೋಗಿವೆ, ವಿದ್ಯಾಭ್ಯಾಸ ಶೂನ್ಯವಾಗಿದೆ, ಇಡೀ ದೇಶ ತತ್ತರಿಸಿ ಹೋಗಿದೆ, ಪ್ರಪಂಚದ ಜನ ನಮ್ಮನ್ನು ನೋಡಿ ಮೂಗಿನ ಮೇಲೆ ಬೆರಳಿರಿಸಿಕೊಂಡಿದ್ದಾರೆ; ಆದರೆ ಪ್ರಧಾನಿ ವಾಜಪೇಯಿ ವಿಚಲಿತರಾಗಿಲ್ಲ. ಆತನ ಸ್ಥೈರ್ಯ ಅಮೋಘವಾದ್ದು; ಆದ್ದರಿಂದಲೇ ಅವರು ಮೋದಿ ಜೊತೆ ಸಂಧಾನ ನಡೆಸಿ ಈ ಕೂಡಲೆ ಗುಜರಾತಿನಲ್ಲಿ ಹೊಸ ಚುನಾವಣೆ ನಡೆಸಿ ತಮ್ಮ ಸಿಂಹಾಸನಕ್ಕೆ ವಜ್ರದ ಲೇಪ ತೊಡಿಸಲು ಹಾತೊರೆಯುತ್ತಿದ್ದಾರೆ. ನಮ್ಮ ದೇಶದ ಅಧಃಪತನ ಇದಕ್ಕಿಂತಲೂ ಕೀಳಾಗಿರಲು ಸಾಧ್ಯವೇ ಎಂಬ ದುಃಖದ ಅಲೆ ನಮ್ಮನ್ನಿನ್ನೂ ವಿಕ್ಷಿಪ್ತರನ್ನಾಗಿಸದಿರುವುದು ಒಂದು ವಿಸ್ಮಯ.

ಫೆಬ್ರವರಿ ೨೭ರ ಮತ್ತು ನಂತರದ ಗುಜರಾತ್ ಹತ್ಯೆಗಳನ್ನು ಪರಾಮರ್ಶೆ ಮಾಡಿಕೊಂಡು ಆರೆಸ್ಸೆಸ್ ಕೇಂದ್ರ ನಾಯಕತ್ವವು ಬೆಂಗಳೂರಿನಿಂದ ಒಂದು ಸಂದೇಶವನ್ನು ಹೊರಡಿಸಿದೆ. ಅದು ಆ ಸಂಘಟನೆಯ ಸಾವಿರ ಮಿದುಳುಗಳು ಸಮಾವೇಶಗೊಂಡು ನಡೆಸಿದ ಬೌದ್ಧಿಕ ಕಸರತ್ತಿನ ಫಲಿತಾಂಶ. ಅವರ ವಿಶ್ಲೇಷಣೆ, ತೀರ್ಮಾನ ಮತ್ತು ಭವಿಷ್ಯ ನುಡಿಗಳು ನಿಜಕ್ಕೂ ಅಚ್ಚರಿ ತರುವಂಥವಲ್ಲ; ಏಕೆಂದರೆ, ಅದು ಅವರು ಅರ್ಧ ಶತಮಾನದಿಂದ ಪ್ರತಿಪಾದಿಸುತ್ತಾ ಬಂದಿರುವ ಅಪಸಿದ್ಧಾಂತವೇ ಆಗಿದೆ. ಬೆಂಗಳೂರಿನ ಈಚಿನ ಅವರ ಹೇಳಿಕೆಯನ್ನು ಸೂಕ್ಷ್ಮವಾಗಿ ಗಮನಿಸುವ ಅಗತ್ಯವಿದೆ. ಅದರಲ್ಲಿರುವ ಮುಖ್ಯವಾದ ಅಂಶಗಳಿವು : (ಅ) ಗೋಧ್ರಾ ನರಮೇಧವನ್ನು ಪೂರ್ಣ ಪ್ರಮಾಣದಲ್ಲಿ ಖಂಡಿಸುವುದೆಂದರೆ ಅದರ ನಂತರದ ಗುಜರಾತಿನ ಹತ್ಯೆಗಳನ್ನು ಸ್ವಾಭಾವಿಕ ಪರಿಣಾಮವೆಂದು ಬಗೆಯುವುದು ಅವಶ್ಯಕ; (ಆ) ನರೇಂದ್ರ ಮೋದಿ ನಾಯಕತ್ವ ಪ್ರಶಂಸನೀಯ; (ಇ) ಅಯೋಧ್ಯೆಯಲ್ಲಿ ಶ್ರೀರಾಮ ಚಂದ್ರನ ಭಕ್ತವೃಂದಕ್ಕೆ ಯಾವ ಅಡ್ಡಿಯನ್ನೂ ಒಡ್ಡಬಾರದು; ಮತ್ತು ಬಹುಮುಖ್ಯವಾಗಿ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೯ ಏಪ್ರಿಲ್ ೨೦೦೨

ಪ್ರಧಾನ ಸಂಪಾದಕ

ಜಿ. ರಾಮಕೃಷ್ಣ

ಸಂಪಾದಕ ಮಂಡಲಿ

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

ವ್ಯವಸ್ಥಾಪಕರು

ಎಸ್. ಸುರೇಂದ್ರ
ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

**ನವಕರ್ನಾಟಕ ಪ್ರಿಂಟರ್ಸ್**
೧೯೬೭ ಮತ್ತು ೧೯೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೭೫೬

ಹೊಸತು ಕಚೇರಿಯ ವಿಳಾಸ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೦೩೫೮೧೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

(ಈ) ಮುಸಲ್ಮಾನರು ಭಾರತದಲ್ಲಿ ಹಿಂದುಗಳ ಪೋಷಣೆಯಲ್ಲಿ ಇರಬೇಕಾದ್ದು ಅನಿವಾರ್ಯವಾದ್ದರಿಂದ ಅವರ ಆಣತಿಯನ್ನು ಮೀರದೆ ವರ್ತಿಸುವುದು ಉಚಿತ.

ಈ ಮಾತುಗಳಲ್ಲಿ ಕೃತ್ರಿಮತೆ ಇಲ್ಲದಿರುವುದೊಂದೇ ಅದರ ಸದ್ಗುಣ ! ಅಂದರೆ, ನೇರವಾಗಿ ಆರೆಸ್ಸೆಸ್ ತನ್ನ ಎಂದಿನ ಆಕ್ರಮಣಶೀಲತೆಯನ್ನು ಪ್ರದರ್ಶಿಸಿ ಫ್ಯಾಸಿಸ್ಟ್ ಕಾರ್ಯಕ್ರಮವನ್ನು ದೇಶದ ಮುಂದೆ ಇರಿಸಿದೆ. ನರೇಂದ್ರ ಮೋದಿ ಒಬ್ಬ ಭೌತಶಾಸ್ತ್ರಜ್ಞನೋ ಅಲ್ಲವೋ ತಿಳಿಯದು. ಅಥವಾ ಮುರಳಿ ಮನೋಹರ ಜೋಷಿ ಆಗಾಗ್ಗೆ ಮನೆಪಾಠ ಹೇಳಿರಬಹುದು ! ಗೋಧ್ರಾ ನಂತರದ ಪಾತಕಗಳು ಕೇವಲ ಪ್ರಕೋಪದ ಅಭಿವ್ಯಕ್ತಿ ಎಂದು ಮೋದಿ ವ್ಯಾಖ್ಯಾನಿಸಿದ್ದಾರೆ: ಒಂದು ಕ್ರಿಯೆಗೆ ಇನ್ನೊಂದು ಪ್ರತಿಕ್ರಿಯೆ. ಇದು ನ್ಯೂಟನ್ನಿನ ನಿಯಮ. – ಕೊಲೆ ಮಾಡಿದವನನ್ನು ಹಿಡಿದು ಶಿಕ್ಷಿಸುವುದು ಕಾನೂನು ಮತ್ತು ಶಾಂತಿ ಪಾಲಿಸಬೇಕಾದ ಸರ್ಕಾರದ ಜವಾಬ್ದಾರಿ ಎಂಬ ಸಾಮಾನ್ಯ ತಿಳಿವಳಿಕೆಗೆ ಭಿನ್ನವಾಗಿ ಮೋದಿ-ಅಡ್ವಾನಿ-ಆರೆಸ್ಸೆಸ್ ಬೋಧಿಸುವುದೇನೆಂದರೆ ಒಂದು ಕೊಲೆಗೆ ಪ್ರತಿಯಾಗಿ ಹತ್ತು ಕೊಲೆ ಮಾಡಿದರೆ, ಮೊದಲು ಕೊಲೆ ಮಾಡಿದವನು ನಡುಗಿ ಶರಣಾಗುತ್ತಾನೆ, ಆಗ ಶಾಂತಿ ತಾನಾಗಿಯೇ ಮೂಡುತ್ತದೆ, ಎಂದು. ಗೋಧ್ರಾ ಪಾತಕಿಗಳನ್ನು ಹಿಡಿದು ಶಿಕ್ಷಿಸುವುದರ ಬದಲು ಮೋದಿ ಮಾಡಿಸಿದ್ದು ಇದನ್ನೇ: ತ್ರಿಶೂಲಧಾರಿಗಳು ಎಲ್ಲೆಂದರಲ್ಲಿ ಅನ್ಯಧರ್ಮೀಯರನ್ನು ಕೊಲ್ಲುವುದು, ಸುಡುವುದು, ಲೂಟಿಮಾಡುವುದು ಸಾಧ್ಯವಾಗುವಂತೆ ಅವರು ತಮ್ಮ ಸರ್ಕಾರದ ಯಂತ್ರವನ್ನು ನಿಷ್ಕ್ರಿಯಗೊಳಿಸಿದರು. ಸರ್ಕಾರದ ಸಚಿವರನೇಕರು ಬೀದಿಗಿಳಿದು ಯುವ ಪೀಳಿಗೆಗೆ ಮಾರ್ಗದರ್ಶನ ಮಾಡಿ ಎಲ್ಲಿ, ಯಾರನ್ನು, ಹೇಗೆ ಕೊಲೆ ಮಾಡಬೇಕೆಂದು ಉಪದೇಶಿಸಿದರು. ಇದು ಹೊಸ ನಮೂನೆಯ ಕಾನೂನು ಪಾಲನೆ : ಒಂದು ರೈಲಿನ ಬೋಗಿಯಲ್ಲಿ ಎಪ್ಪತ್ತು ಜನರನ್ನು ಸುಟ್ಟು ಭಸ್ಮ ಮಾಡಿದ್ದಕ್ಕೆ ಮೋದಿಯ ಸಾಂಸ್ಕೃತಿಕ ಉತ್ತರ ಒಂದು ಮುಸಲ್ಮಾನರ ಹಳ್ಳಿಯನ್ನು ಸುತ್ತುವರಿದು ಅದಕ್ಕೆ ಬೆಂಕಿಯಿಟ್ಟು ನೂರೈವತ್ತು ಜನಗಳನ್ನು ಸುಟ್ಟುಹಾಕುವುದು. ಖಾಸಗೀಕರಣದ ಅಮಲಿನಲ್ಲಿರುವ ನಮ್ಮ ದೇಶದಲ್ಲಿ ಕಾನೂನು ವ್ಯವಸ್ಥೆಯನ್ನು ಮೋದಿ ಖಾಸಗಿಯವರಿಗೆ ಬಿಟ್ಟುಕೊಟ್ಟರು ಎನ್ನೋಣವೆ ? ವಾಲ್ಮೀಕಿಯ ರಾಮಾಯಣದಲ್ಲಿ ವಾನರ ಸೇನೆಯು ಅತ್ಯುತ್ಸಾಹದಲ್ಲಿ ಕಾನನವನ್ನು ಧ್ವಂಸಗೊಳಿಸಿತು; ಮೋದಿಯ ಗುಜರಾತಿನಲ್ಲಿ ತಮ್ಮನ್ನು ತಾವು ರಾಮಭಕ್ತರೆಂದು ಕರೆದುಕೊಳ್ಳುವ ಸಮಾಜ ಕಂಟಕರು ನಗರಗಳನ್ನು ಮತ್ತು ಹಳ್ಳಿಗಳನ್ನು ನಾಶಗೊಳಿಸಿದರು. ವಾನರ ಸೇನೆಗೆ ಸೀತಾದೇವಿಯು ಲಂಕೆಯಲ್ಲಿದ್ದಾಳೆಂಬ ಸುದ್ದಿ ಸಂಭ್ರಮಕ್ಕೆ ಕಾರಣವಾಗಿತ್ತು; ಗುಜರಾತಿನ ಬಜರಂಗ ಸೇನೆಗೆ ಕೊಲ್ಲುವ ಸ್ವಾತಂತ್ರ್ಯ ನೀಡಲಾಗಿತ್ತೆಂಬುದು ಸಂಭ್ರಮಕ್ಕೆ ಕಾರಣವಾಯಿತು. ಫ್ಯಾಸಿಸ್ಟ್ ನಿರ್ವಹಣೆಯಲ್ಲಿ ರಾಜ್ಯಯಂತ್ರ ಮತ್ತು ಬಜರಂಗ ಸೇನೆ ನಡುವೆ ಸಮೀಕರಣ ಏರ್ಪಡುತ್ತದೆ. ಅದೇ ದುರಂತ. ಅದರ ಪ್ರತಿರೋಧಕ್ಕೆ ಜನಸಮುದಾಯ ಒಟ್ಟಾಗದಿದ್ದರೆ ಕಳಂಕ ಮತ್ತು ಕಂಟಕಗಳ ಸರಮಾಲೆ ದೇಶಕ್ಕೆ ಕಟ್ಟಿಟ್ಟ ಬುತ್ತಿ.

ಇದರಲ್ಲಿ ಇನ್ನೊಂದಂಶವನ್ನೂ ಗುರುತಿಸಬೇಕು: ಆರೆಸ್ಸೆಸ್ ನಾಯಕ ಶ್ರೀ. ವೈದ್ಯರ ಪ್ರಕಾರ ಧರ್ಮನಿರಪೇಕ್ಷತೆಯ ಮಾತನ್ನಾಡುವವರು ಗೋಧ್ರಾದ ಘಟನೆಯನ್ನು ಸರಿಯಾಗಿ ಖಂಡಿಸುವುದಿಲ್ಲ; ಅವರು ನಂತರದ ಹತ್ಯೆಗಳತ್ತ ಬೊಟ್ಟುಮಾಡಿ ತೋರಿಸುತ್ತಾರೆ. ಅವರಿಗೆ ಸಮಾಧಾನ ಹೇಳಲು ಅವರಿಗೊಂದು ಪ್ರಶ್ನೆ ಹಾಕಬೇಕು: ಗೋಧ್ರಾ ನರಮೇಧವನ್ನು ಖಂಡಿಸಲು ನಾವು ಏನು ಮಾಡಬೇಕು ? ಯಾರದೋ ತಲೆಗಳನ್ನು ತುಂಡರಿಸಬೇಕೆ ಅಥವಾ ಗೋಧ್ರಾ ಹಂತಕರನ್ನು ಹಿಡಿದು ಶಿಕ್ಷಿಸಬೇಕೆ ? ತಲೆಗಳನ್ನು ತುಂಡರಿಸಬೇಕೆಂಬ ಉತ್ತರ ಕೊಟ್ಟರೆ ಕಾಶ್ಮೀರದಲ್ಲಿ ಉಗ್ರರು ನಡೆಸುವ ಹತ್ಯೆಗಳನ್ನು ಸಮರ್ಥಿಸಿದಂತೆ ಆದೀತೆಂಬ ಭಯ ವೈದ್ಯರಿಗಿಲ್ಲ. ರಾಜ್ಯಯಂತ್ರದ ಬೆಂಗಾವಲಿನಲ್ಲಿ ನಡೆದ ಗುಜರಾತಿನ ಹತ್ಯೆಗಳಿಗೂ, ಹೊಲಸು ಮನಸ್ಸುಗಳು ಯೋಜಿಸಿದ ಗೋಧ್ರಾ ನರಮೇಧಕ್ಕೂ ಅವರಿಗೆ ವ್ಯತ್ಯಾಸ ಕಾಣುವುದಿಲ್ಲ. ಮಾನ್ಯ ವೈದ್ಯ ಅವರು ಪ್ರತಿನಿಧಿಸುವುದು ಭಾರತೀಯ ಸಂಸ್ಕೃತಿಯನ್ನೋ ಅಥವಾ ದೌರ್ಜನ್ಯದ ಉನ್ಮಾದವನ್ನೋ ಎಂಬುದನ್ನು ಸಾರ್ವಜನಿಕರು ಮನನ ಮಾಡಿಕೊಳ್ಳಬೇಕಾಗಿದೆ.

ಆರೆಸ್ಸೆಸ್ ನೀಡಿರುವ ಹೇಳಿಕೆಯ ಇನ್ನೊಂದು ಭಾಗವು ಹಿಂದು-ಮುಸಲ್ಮಾನರ ನಡುವೆ ಸಮಾನತೆ, ಸ್ನೇಹ, ಸೌಹಾರ್ದಗಳನ್ನು ಬಯಸದೆ ಯಜಮಾನ-ಸೇವಕ ಸಂಬಂಧಗಳನ್ನು ಬೆಳೆಸಬೇಕೆಂಬ ಆಕಾಂಕ್ಷೆಯನ್ನು ಪ್ರಕಟಪಡಿಸುತ್ತದೆ. ನಾನು-ಅವನು ಎಂಬ ಭೇದದ ಬದಲು 'ನಾವು' ಎಂಬ ನಿರೀಕ್ಷೆಯು ಫಲಿಸುವಂತೆ ಮಾಡಬೇಕೆಂಬ ಉತ್ಕಟ ಆಸೆ ಇಲ್ಲದಿದ್ದಾಗ ರಾಷ್ಟ್ರವು ಒಂದಾಗಿ ಉಳಿಯುವುದು ಸಾಧ್ಯವಿಲ್ಲವೆಂಬುದು ಒಂದು ಸಾಮಾನ್ಯ ಜ್ಞಾನ. ಒಂದು ಕೋಮಿನವರು ಇನ್ನೊಂದು ಕೋಮಿನವರಿಗಿಂತ ನಾಗರಿಕರಾಗಿ ಉನ್ನತ ಸ್ಥಾನದಲ್ಲಿರುವುದೆಂದರೆ ಅದು ಪ್ರಜಾಪ್ರಭುತ್ವದ ಲಕ್ಷಣವಲ್ಲ; ಅದು ಗುಲಾಮಿ ಪದ್ಧತಿಯ ತತ್ತ್ವ. ಇತಿಹಾಸದ ಪುಟಗಳಲ್ಲಿ ಮುಚ್ಚಿಹೋಗಿರುವ ಸಾಮಾಜಿಕ ದರ್ಜೆಗಳಿಗೆ ಹೊಸಜೀವ ತುಂಬಲು ಹೆಣಗುವುದು ಶ್ರೇಯಸ್ಕರವಲ್ಲ. ಆದರೆ ಶ್ರೀ. ವೈದ್ಯ ಮಾಡಹೊರಟಿರುವುದು ಅದನ್ನೇ. ''ನೀವು ಗೌರವದಿಂದ ಕ್ಷೇಮವಾಗಿ ಉಳಿಯ ಬೇಕಾದರೆ ನಮ್ಮನ್ನು ಒಲ್ಲೈಸಿ ನಮ್ಮ ಆಜ್ಞೆಯಂತೆ ವರ್ತಿಸಿ'' ಎಂಬುದು ನಾಗರಿಕ ಸಮಾಜ ತಂತ್ರವಲ್ಲ ಮತ್ತು ಅದು ಭಾರತದ ಸಂವಿಧಾನದ ಸೂತ್ರಗಳಿಗೆ ಹೊರತಾದುದು. ''ನನ್ನನ್ನು ನೋಡಿ ತಗ್ಗಿ ನಡೆ, ಇಲ್ಲದಿದ್ದರೆ ನಿನ್ನನ್ನು ಕೊಲ್ಲುತ್ತೇನೆ'' ಎಂಬುದು ಕೇವಲ ಸಾಂಸ್ಕೃತಿಕ ಭಯೋತ್ಪಾದನೆಯಲ್ಲ, ಅದು ನಾಗರಿಕ ಸಂಹಿತೆಯ ಉಲ್ಲಂಘನೆಯೂ ಹೌದು. ದಾವೂದ್ ಇಬ್ರಾಹಿಂ ಸಾಮಾಜಿಕ ನೈತಿಕತೆಗೂ ಇದಕ್ಕೂ ಯಾವ ವ್ಯತ್ಯಾಸವಿದೆ ? ನಮ್ಮ ದೇಶದ ಮುಂದಿರುವ ಆಯ್ಕೆ ಇದು : ಸಂವಿಧಾನದತ್ತವಾದ ಸಮಾನ ನಾಗರಿಕ ಹಕ್ಕುಗಳು, ಇಲ್ಲವೆ ವೈದ್ಯ-ದಾವೂದ್ ಪ್ರಕ್ರಿಯೆ.

ಒಂದು ದಶಕದ ಹಿಂದೆ ಅಡ್ವಾನಿ ಸಾರಥ್ಯದಲ್ಲಿ ಆರಂಭವಾದ ಕಿಚ್ಚು ಇಂದು ಇಡೀ ದೇಶವನ್ನು ಪ್ರಕ್ಷೋಭೆಯ ಅಂಚಿಗೆ ತಂದಿದೆ. ''ಇತಿಹಾಸದ ತಪ್ಪುಗಳನ್ನು ತಿದ್ದುತ್ತೇವೆ'' ಎಂದು ಹೊರಟವರು ಇಂದು ತಪ್ಪುಗಳ ಇತಿಹಾಸವನ್ನು ನಿರ್ಮಾಣ ಮಾಡುವ ಹಂತ ತಲುಪಿದ್ದಾರೆ. ಭಾರತೀಯ ಜನತಾ ಪಕ್ಷ ಮತ್ತು ಅದರ ಕೂಟ (ಆರೆಸ್ಸೆಸ್, ವಿಶ್ವ ಹಿಂದೂ ಪರಿಷತ್, ಬಜರಂಗ ದಳ, ಇತ್ಯಾದಿ) ಕಳೆದ ಹದಿನೈದು ವರ್ಷಗಳಿಂದ ರಾಷ್ಟ್ರದಲ್ಲಿ ಮತ್ತಾವ ಗಂಭೀರ ಸಮಸ್ಯೆಗಿಂತಲೂ ಹೆಚ್ಚಾಗಿ ಅಯೋಧ್ಯೆಯಲ್ಲಿ ಒಂದು ಮಂದಿರ ಕಟ್ಟಬೇಕೆಂಬುದನ್ನು ಪ್ರಮುಖ ಪ್ರಶ್ನೆಯನ್ನಾಗಿ ಮಾಡಿ ಉಪದ್ರವ ನೀಡುತ್ತಾ ಬಂದಿರುವುದು ಎಲ್ಲರಿಗೂ ತಿಳಿದಿದೆ. ಮಂದಿರ ಕಟ್ಟಿಬಿಟ್ಟರೆ ಅವರ ಕಾರ್ಯಕ್ರಮ ಮುಕ್ತಾಯವಾಗುವುದಿಲ್ಲ. ಆಮೇಲೆ ಇನ್ನೊಂದೆಡೆ ಇನ್ನೊಂದು ಮಸೀದಿ

ಉರುಳಿಸಬೇಕು, ಮಂದಿರ ವಿಸ್ತರಿಸಬೇಕು. ಹೀಗೆಯೇ ಸಾಗುತ್ತದೆ ಅವರ ಕಾರ್ಯಸೂಚಿ. ಅಭಿವೃದ್ಧಿ ಮೀಮಾಂಸೆಯಲ್ಲಿ ಅವರಿಗಿರುವುದು ಎರಡೇ ಸೂತ್ರಗಳು : ಅಮೆರಿಕಾದ ಅಹಂಕಾರಕ್ಕೆ ಮಣಿದು ದೇಶವನ್ನು ಆ ದೇಶದ ಪ್ರಭುಗಳ ಪಾದದಡಿ ಸಿಲುಕಿಸಿ ಕೃತಾರ್ಥರಾಗುವುದು ಮತ್ತು ಮಂದಿರಗಳ ಗುಂಗಿನಲ್ಲಿ ದೇಶವನ್ನು ಒಡೆದು ಮತಧರ್ಮದ ಮೇಲೋಗರವನ್ನು ಮಂದಿಗೆ ಉಣಿಸುವುದು. ಜನರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಅವುಗಳ ಪರಿಹಾರ ದೊರಕಿಸಿಕೊಡುತ್ತಾ ದೆಹಲಿಯಲ್ಲಿ ರಾಜ್ಯದ ಆಡಳಿತವನ್ನು ತಮ್ಮದನ್ನಾಗಿಸಿಕೊಂಡಿದ್ದರೆ ಭಾಜಪದ ವರ್ಚಸ್ಸು ಬೆಳೆಯಬಹುದಿತ್ತು. ಆದರೆ ಆ ಪಕ್ಷದ ಆರ್ಥಿಕ ನೀತಿಯು ಜನರ ಸಮಸ್ಯೆಗಳನ್ನು ಗೌಣವಾಗಿಸಿ ಬಂಡವಾಳದ ದರ್ಪವನ್ನು ಹಿಗ್ಗಿಸುವಂಥದು. ಆದ್ದರಿಂದ ಆರ್ಥಿಕ ಹೊರೆಯಿಂದ ಕಂಗಾಲಾದವರಿಗೆ ಭಾಜಪ ತೋರಿಸುವ ಶಮನದ ಹಾದಿ ರಾಮಮಂದಿರಕ್ಕೆ ಅವರನ್ನು ಕೊಂಡೊಯ್ಯುತ್ತದೆ. ಆದರೆ ಅಲ್ಲಿ ರಾಮನೂ ಇಲ್ಲ, ವಾಲ್ಮೀಕಿಯ ಜೀವನದರ್ಶನ ಮತ್ತು ಮೌಲ್ಯಗಳೂ ಇಲ್ಲ, ಅಲ್ಲಿರುವುದು ಅಬ್ಬರ, ಅನ್ಯಮತ ದ್ವೇಷ ಮತ್ತು ಹಿಂಸೆಯ ತಾಂಡವ. ''ನಮ್ಮನ್ನು ಅದಾರು ತಡೆಯುತ್ತಾರೋ ನೋಡಿಯೇಬಿಡೋಣ'' ಎಂಬ ಕಾನೂನುಭಂಗದ ಘೋಷಣೆಯೊಂದಿಗೆ ರಥಯಾತ್ರೆ ಮತ್ತು ಇಟ್ಟಿಗೆ ಮಹಾಯಾಗವನ್ನು ಅದ್ವಾನಿ ಉದ್ಘಾಟಿಸಿದಾಗಿನಿಂದ ದೇಶದ ಮುಂದೆ ಅಯೋಧ್ಯೆಯೇ ಅತಿಮುಖ್ಯ ಪ್ರಶ್ನೆಯಾಗಿದೆ. ಅದ್ವಾನಿ ಬಣ ಹಾಕಿಕೊಳ್ಳದ ಪ್ರಶ್ನೆಗಳು ಹಲವು. ಉದಾಹರಣೆಗೆ, ಅವರ ಆಳವಾದ ನಂಬಿಕೆಗೂ ಇತರರ ನಂಬಿಕೆಗೂ ಭಿನ್ನತೆ ಇದ್ದರೆ ಹೇಗೆ ಮುಂದುವರಿಯಬೇಕು ? ಅವರ ನಂಬಿಕೆ ಬೇರೆಯವರದಕ್ಕಿಂತ ಹೆಚ್ಚು ಶ್ರೇಷ್ಠವಾದುದೆಂದು ಏಕೆ ಬಗೆಯಬೇಕು ? ಎರಡನೆಯದಾಗಿ, ಒಂದು ನಂಬಿಕೆಗೂ ದೇಶದ ಸಂವಿಧಾನಕ್ಕೂ ವಿರೋಧ ಏರ್ಪಟ್ಟರೆ ಜನಸಮುದಾಯವು ಯಾವುದನ್ನು ಸ್ವೀಕರಿಸಬೇಕು ? ಮೂರನೆಯದಾಗಿ, ಈ ಭಾಜಪ ಪಂಡಿತರು ಪ್ರತಿಪಾದಿಸುವ ಇತಿಹಾಸವೇ ನೈಜವೆಂದು ಮಾನ್ಯ ಮಾಡಲು ಇತರರೆಲ್ಲಾ ಶುಂಠರಾಗಲು ತಯಾರಿರಬೇಕೆ ?

ಕಳೆದೆರಡು ತಿಂಗಳ ಅಯೋಧ್ಯೆ ಸಂದರ್ಭವನ್ನು ವಿವೇಚಿಸಿದರೆ ನಮ್ಮ ದೇಶವನ್ನು ಭಾಜಪ ಯಾವ ಪ್ರಪಾತಕ್ಕೆ ತಳ್ಳುತ್ತಿದೆಯೆಂಬ ಅರಿವು ಉಂಟಾಗುತ್ತದೆ. ಅರುಂಧತಿ ರಾಯ್ ಎಂಬಾಕೆಯನ್ನು ಜೈಲಿಗೆ ಕಳಿಸಿದ ಶ್ರೇಷ್ಠ ನ್ಯಾಯಾಲಯದ ಗೊಡವೆ ನಮಗೆ ಬೇಡವೇ ಬೇಡವೆಂದು ಉದ್ಘೋಷಿಸುವ ವಿಶ್ವ ಹಿಂದು ಪರಿಷತ್ತಿನ ಜೊತೆ ಸರಸ ಸಲ್ಲಾಪದಲ್ಲಿ ತನ್ನನ್ನು ತಾನು ಮರೆಯುವ ವಾಜಪೇಯಿ ಸರ್ಕಾರಕ್ಕೆ ಏನೆನ್ನಬೇಕು ? ನಮ್ಮ ದೇಶದಲ್ಲಿ ಶ್ರೇಷ್ಠ ನ್ಯಾಯಾಲಯದ ತೀರ್ಪಿನ ಅಂಗೀಕಾರದ ಬಗ್ಗೆ ಹಲವು ಪರ್ಯಾಯ ವಿಧಾನಗಳುಂಟೆ ? ''ನ್ಯಾಯಾಲಯ ಏನೇ ಹೇಳಲಿ, ನಾನು ಮಾಡುವುದೇ ಹೀಗೆ'' ಎಂದು ಹೇಳಲು ನಮ್ಮ ದೇಶದ ಪ್ರಜೆಗಳಲ್ಲಿ ಒಂದು ವಿಭಾಗಕ್ಕೆ ವಿಶೇಷ ಸೌಲಭ್ಯ ಕಲ್ಪಿಸಿಕೊಡುವುದು ಯಾವ ಕಾನೂನಿನಡಿಯಲ್ಲಿ ? ಹಾಗೆ ಅರಚುವ ಸಂಘಟನೆಯನ್ನು ವಿಚ್ಛಿದ್ರಕಾರಿ, ಕಾನೂನುಬಾಹಿರ ಸಂಸ್ಥೆಯೆಂದು ಪರಿಗಣಿಸಬೇಕೋ ಅಥವಾ ಮಹಾನ್ ಸಾಧುಸಂತರ ಸರ್ವಜ್ಞತ್ವದ ಪ್ರತಿನಿಧಿಯೆಂದೋ ? ನ್ಯಾಯಾಲಯದ ತೀರ್ಪಿನ ಮಾನ್ಯತೆಯ ಬಗ್ಗೆ ಸಂಧಾನಕ್ಕೆ ಎಲ್ಲಿ ಅವಕಾಶವಿದೆಯೋ ತಿಳಿಯದಾಗಿದೆ. ಬೇರೆ ಸಂಘಟನೆಗಳೂ ಅಂಥದೇ ವಾದ ಹೂಡಿದರೆ ದೇಶದಲ್ಲಿ ಅಂತರ್ಯುದ್ಧ ಶತಸ್ಸಿದ್ಧ ಎಂಬುದನ್ನು ಮರೆಯಬಾರದು. ಹಾಗೆ ಅಂತರ್ಯುದ್ಧ ಮಾಡುವುದಾದರೆ ಒಂದು ಮಂದಿರದ ಬಗ್ಗೆ ಮಾಡುವ ಬದಲು ನಮ್ಮ ರಾಷ್ಟ್ರದ ಸಾರ್ವಭೌಮತ್ವದ ರಕ್ಷಣೆಯ ಪರವಾಗಿ ಮಾಡುವುದು ಹೆಚ್ಚು ಅರ್ಥವತ್ತಾಗಿರುತ್ತದೆ.

ಕಾನೂನು, ಸಂವಿಧಾನ, ಸರ್ಕಾರದ ವಿಧಿ-ನಿಯಮಗಳು, ಯಾವುದನ್ನೂ ಲಕ್ಷಿಸದೆ ಏಕಪಕ್ಷೀಯವಾಗಿ ಮಾರ್ಚ್ ೧೫ರಂದು ಶಿಲಾನ್ಯಾಸವನ್ನು ಮಾಡುತ್ತೇವೆಂದು ವಿ.ಹಿಂ.ಪ. ಹೊರಟಾಗ ಅದಕ್ಕೆ ಸರ್ಕಾರವು ಸೊಪ್ಪುಹಾಕುವುದು ತನ್ನ ಮತ್ತು ರಾಷ್ಟ್ರದ ಶೀಲನಾಶಕ್ಕೆ ಹಾದಿಯನ್ನು ಸುಗಮಗೊಳಿಸಿದಂತೆಯೇ ಸರಿ. ಯಾರೋ ಸ್ವಾಮಿಗಳು ಸಂಧಾನ ನಡೆಸಿ ವಿಶ್ವ ಹಿಂದು ಪರಿಷತ್ತು ನ್ಯಾಯಾಲಯದ ತೀರ್ಪಿಗೆ ಬದ್ಧವಾಗಿರಲು ಒಪ್ಪಿದೆಯೆಂದು ಹೇಳುವುದು ಒಂದು ಸಾಧನೆಯೆಂದಾದರೆ ನಮ್ಮ ದೇಶದ ಭವಿಷ್ಯ ತೀರಾ ಮಸುಕಾಗಿಬಿಡುತ್ತದೆ. ಜೊತೆಗೆ, ಅಶೋಕ ಸಿಂಘಾಲರ ಪರಿಷತ್ತು ಒಂದು ಕಲ್ಲಿಗೆ ಪೂಜೆ ಮಾಡಲು ಸರ್ಕಾರ ಅಡ್ಡಿಯುಂಟು ಮಾಡಬೇಕಾಗಿಲ್ಲ, ನಿಜ. ಆದರೆ ಆ ಕಲ್ಲನ್ನು ಸರ್ಕಾರದ ಉಸ್ತುವಾರಿಗೆ ತೆಗೆದುಕೊಳ್ಳುವ ಪ್ರಮೇಯ ಬಹಳ ಪ್ರಶ್ನಾರ್ಹವಾದದ್ದು. ಕಾನೂನು ಕ್ರಮಕ್ಕೆ ವಿಮುಖವಾಗಿರುವ ಸಿಂಘಾಲ್ ಸೈನ್ಯವು ವಾಜಪೇಯಿ ಸರ್ಕಾರವನ್ನು ನಡೆಸುವ ಸೂತ್ರಧಾರನೆಂಬುದು ಇದರಿಂದ ಸ್ಪಷ್ಟವಾಗಿದೆ. ಈಗಾಗಲೇ ಪ್ರಸ್ತಾಪಿಸಿದ ಫ್ಯಾಸಿಸ್ಟ್ ದುರ್ವರ್ತನೆಗೆ ಇದು ಇನ್ನೊಂದು ನಿದರ್ಶನ.

ಜನರನ್ನು ಕೊಲ್ಲುವುದು, ಮನೆಗಳನ್ನು ಸುಡುವುದು, ಮಹಿಳೆಯರ ಮಾನಭಂಗ ಮಾಡುವುದು, ಮಾಧ್ಯಮಗಳಿಗೆ ಹುಕುಂ ನೀಡುವುದು ಮುಂತಾದ ಸ್ವೇಚ್ಛಾಚಾರಗಳಿಗೆ ನೇರವಾದ ಬೆಂಬಲವನ್ನು ಕೇಂದ್ರ ಸರ್ಕಾರ ಮತ್ತು ಗುಜರಾತ್ ಸರ್ಕಾರ ನೀಡಿರದಿದ್ದರೆ ವಿಶ್ವ ಹಿಂದು ಪರಿಷತ್ - ಬಜರಂಗ ದಳಗಳು ಈಗ ಬೆಳೆದಿರುವಷ್ಟು ದೊಡ್ಡ ಪಿಡುಗಾಗಿ ಬೆಳೆಯುತ್ತಿರಲಿಲ್ಲ. ಭುವನೇಶ್ವರದಲ್ಲಿ ವಿಶ್ವ ಹಿಂದೂ ಪರಿಷತ್ತಿನ ಕಾರ್ಯಕರ್ತರು ಶಾಸನಸಭೆಗೆ ನುಗ್ಗಿ ವಿಧ್ವಂಸದಲ್ಲಿ ತೊಡಗಿದ್ದು ಗೋಧ್ರಾ ನರಹಂತಕರ ಕುಕೃತ್ಯಕ್ಕೆ ಮತ್ತು ದೆಹಲಿಯಲ್ಲಿ ಪಾರ್ಲಿಮೆಂಟಿನ ಮೇಲೆ ನಡೆದಿದ್ದ ದಾಳಿಗೆ ಸಮಾನವಾದುದು. ಇದಕ್ಕೆ ಒಂದು ತತ್ಸಮ ಘಟನೆ ಬೇಕಾದರೆ ಹಿಟ್ಲರನ ನೇತೃತ್ವದಲ್ಲಿ ಗೋರಿಂಗ್ ಜರ್ಮನಿಯ ಪಾರ್ಲಿಮೆಂಟಾದ ರೈಚ್‌ಸ್ಟ್ಯಾಗ್‌ಗೆ ಬೆಂಕಿ ಹಚ್ಚಿದ್ದುದನ್ನು ಸ್ಮರಿಸಬಹುದು. ಅದರ ನಂತರದ ಹದಿನೈದು ವರ್ಷಗಳ ಜರ್ಮನಿಯ ಇತಿಹಾಸವನ್ನು ನಾವು ಮರೆಯದಿರೋಣ. ಮರೆತೆವಾದರೆ ನಮ್ಮ ದೇಶವನ್ನು ಫ್ಯಾಸಿಸ್ಟ್ ದುಷ್ಟಶಕ್ತಿಗಳಿಗೆ ಬಳುವಳಿಯಾಗಿ ನೀಡಿದಂತಾದೀತು. ಸಂಸ್ಕೃತಿಯ ಆರಾಧಕರು ಮತ್ತೊಮ್ಮೆ ಆ ಕಾಲದಲ್ಲಿ ಎತ್ತಲಾಗಿದ್ದ ಗಂಭೀರ ಪ್ರಶ್ನೆಯನ್ನೆದುರಿಸಬೇಕು. ಅಂದು ಕೇಳಲಾಗಿತ್ತು : ಸಂಸ್ಕೃತಿಯ ಯಾಜಮಾನ್ಯ ವಹಿಸಿರುವ ಮಾನ್ಯರೆ, ನೀವು ಯಾವ ಕಡೆಗಿದ್ದೀರಿ ?

ಇಂದು ನಾವು ಕೇಂದ್ರದ ವಾಜಪೇಯಿ ಸರ್ಕಾರವನ್ನು ಗಟ್ಟಿಯಾಗಿ ಕೇಳಬೇಕಾಗಿದೆ : ಮಾನ್ಯರೆ, ನೀವು ಯಾರ ಕಡೆಗಿದ್ದೀರಿ ? ಸಂವಿಧಾನದ ಚೌಕಟ್ಟಿನಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಮುನ್ನಡೆಗೋ ಅಥವಾ ವಿಶ್ವ ಹಿಂದು ಪರಿಷತ್ತು ಮುಂತಾದ ವಿವಿಧ ಮತಧರ್ಮಗಳ ಜಡ್ಡುಗಟ್ಟಿದ ಮತಾಂಧತೆಯ ಪ್ರೇರಣೆಯಿಂದ ನಡೆಯಬಹುದಾದ ಭೀಕರ ಅಂತರ್ಯುದ್ಧಕ್ಕೊ ?

ಭಾರತದ ಜನತೆಯ ಮಧ್ಯಪ್ರವೇಶವು ಸಂವಿಧಾನದ ಪರವಾಗಿಯೇ ಇರಬೇಕಾಗುತ್ತದೆ. ಅದನ್ನು ಬದಲಾಯಿಸಲು ಕೂಡ ಅವರಷ್ಟೇ ಬಾಧ್ಯರೇ ಹೊರತು ಯಾರೋ ಸ್ವಯಂಘೋಷಿತ ರಾಮಭಕ್ತರಲ್ಲ. ಶ್ರೀರಾಮಚಂದ್ರನನ್ನು ಈ ಮಟ್ಟದಲ್ಲಿ ಹೀಯಾಳಿಸಲು ಭಾರತದ ಜನ ಯಾರಿಗೂ ಅವಕಾಶ ಕೊಡಲಾರರು, ಕೊಡುವುದಿಲ್ಲ.

[signature]


ತಿಂಗಳ ಪತ್ರಿಕೆ

**ಹೊಸತು**

ನಮ್ಮುದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☏ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☏ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☏ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☏ : ೪೨೪೩೦೨



ಸೇಡಿಯಾಪು ಅವರ ಜೀವನದುದ್ದದ ಎಲ್ಲ ಸಾಧನೆಗಳನ್ನು ಸಮಗ್ರವಾಗಿ ಪರಿಶೀಲಿಸಿ ಮಥಿಸಿ ತೆಗೆದ ಬೆಣ್ಣೆಯಂತಿದೆ ಈ ಲೇಖನ. ಪರಂಪರೆ ಸಂಪ್ರದಾಯಕ್ಕಿರುವ ವ್ಯತ್ಯಾಸವೇನೆಂದು ಲೇಖಕರು ಕೇಳಿದ ಪ್ರಶ್ನೆಗೆ ಸೇಡಿಯಾಪುರವರು ಕೊಟ್ಟ ಉತ್ತರ ಅದ್ಭುತ! ಅದಕ್ಕೆ ಲೇಖಕರು ಕೊಟ್ಟಿರುವ ಉದಾಹರಣೆ ಹಿಮಾಲಯ-ಸಂಸ್ಕೃತಿ, ಗಂಗೆ - ಪರಂಪರೆ ಕಾಶಿ - ಸಂಪ್ರದಾಯ, ಗುರುವಿಗೆ ತಕ್ಕ ಶಿಷ್ಯರೆಂದು ಸಾರುತ್ತದೆ.

*ಮೈಸೂರು* — ***ಜಿ. ವೈದೇಹಿ***

**ಬೆಳಕಿನತ್ತ ಹೆಜ್ಜೆ ಇಟ್ಟ ಜಬೀನಾ**

ಈ ಹೊಸಬೆಳಕನ್ನು – ಜನ್ಮದತ್ತ ವೈಕಲ್ಯವನ್ನು ತ್ರಾಣವಾಗಿ ಪರಿವರ್ತಿಸಿಕೊಂಡು ಬದುಕನ್ನು ಎದುರಿಸಿದ ಛಲವನ್ನು- ಪರಿಚಯಿಸಿರುವ ನೇಮಿಚಂದ್ರರಿಗೆ ಅಭಿನಂದನೆಗಳು: ನೇಮದಿಂದ ಚಂದ್ರಕಾಂತಿ ಬೀರಿರುವರು! ಜಬೀನಾ ಭವಿಷ್ಯ ಉಜ್ವಲವಾಗಿದೆ.

*ಮೈಸೂರು* — ***ಜಿ. ಟಿ. ನಾರಾಯಣರಾವ್***

ಮಾರ್ಚ್ ತಿಂಗಳ ಸಂಚಿಕೆಯಲ್ಲಿ ನೇಮಿಚಂದ್ರರು ಬರೆದಿರುವ "ಬೆಳಕಿನತ್ತ ಹೆಜ್ಜೆ ಇಟ್ಟ ಜಬೀನಾ" ಲೇಖನ: ಅನಾಥ ಅಂಧ ಮಗುವೊಂದರ ಅಗಾಧ ಸಾಧನೆಯನ್ನು ನಾಡಿಗೆ ಪರಿಚಯಿಸಿದ್ದಕ್ಕೆ ಧನ್ಯವಾದಗಳು.

*ಹೊನ್ನಹಮ್ಮಿಗಿ* — ***ರವಿ ಸೋ. ದೇವರಡ್ಡಿ***

ಮಾರ್ಚ್ ೨೦೦೨ರ ಸಂಚಿಕೆ ತಲುಪಿದೆ. ಎಂದಿನಂತೆ ಲೇಖನಗಳು ಉತ್ಕೃಷ್ಟವಾಗಿವೆ.

*ಮೈಸೂರು* — ***ಸಿ. ನಾಗಣ್ಣ***

ಮುದ್ದು ಮಗುವಿನ ಚಿತ್ರ ತುಂಬಾ ಸೊಗಸಾಗಿ ಮೂಡಿಬಂದಿದೆ. ಆರ್.ವಿ. ಭಂಡಾರಿಯವರು ಪ್ರಸ್ತುತ ದೇಶದ ಭ್ರಷ್ಟಾಚಾರ, ಕುರ್ಚಿಗಾಗಿ ಯುದ್ಧಮಾಡುವ ರಾಜಕೀಯಪಕ್ಷ, ಸ್ವಾರ್ಥ ರಾಜಕೀಯ ನಾಯಕರಿಂದ ದೇಶ ದಿವಾಳಿಯಾಗುತ್ತಿದೆ ಎನ್ನುವ ಸಂದೇಶವನ್ನು "ವೈಷ್ಣವ ಮಾನಭಂಗ" ಬೀದಿನಾಟಕದಲ್ಲಿ ಪ್ರಸ್ತುತಪಡಿಸಿದ್ದಾರೆ.

ಹಡಗಲಿಯ ಬಿ.ಜಿ.ವಿ.ಎಸ್. ಗೆಳೆಯರು ಈ ಬೀದಿ ನಾಟಕವನ್ನು ಹಳ್ಳಿಹಳ್ಳಿಗಳಲ್ಲಿ ಪ್ರದರ್ಶಿಸಲು ಸಿದ್ಧತೆ ನಡೆಸಿದ್ದಾರೆ.

ಗಾರ್ಮೆಂಟ್ ಕೆಲಸಗಾರರ ಕುರಿತು ಮಾರ್ಮಿಕವಾಗಿ ತಿಳಿಸಿದ್ದೀರಿ.

*ಹೂವಿನ ಹಡಗಲಿ* — ***ಸುರೇಶ ಅಂಗಡಿ***

"ವೈಷ್ಣವ ಗರ್ವಭಂಗ" ನಾಟಕದಲ್ಲಿ 'ಭಾರತೀಯ ಭಜನಾ ಪಾರ್ಟಿ' ಎಂಬ ಮಾತೊಂದು ಬರುತ್ತದೆ. ಅದು ನನ್ನದಲ್ಲ, 'ಚಂಪಾ' ಅವರ ನುಡಿನಾಣ್ಯ. ಅದು ಇಲ್ಲಿ ಅರಿವಿಗೆ ಬರದೆ ಬಂದುಬಿಟ್ಟಿದೆ. ಆದ್ದರಿಂದ ಅವರ ಕ್ಷಮೆ ಕೋರುತ್ತೇನೆ.

*ಅರೆಅಂಗಡಿ* — ***ಆರ್. ವಿ. ಭಂಡಾರಿ***

ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ "ಕನ್ನಡ-ಕರ್ನಾಟಕ : ಇಂದಿನ ಸವಾಲುಗಳು" ಇತ್ತೀಚಿನ ಕನ್ನಡ ಸಾಹಿತ್ಯ ಸಮ್ಮೇಳನದ ಘೋಷಣೆಯ ಹಿನ್ನೆಲೆಯಲ್ಲಿ ಸಕಾಲಿಕ ಲೇಖನ. ಕನ್ನಡ ನಿಸ್ಸಂದೇಹವಾಗಿ ಸಾಹಿತ್ಯಿಕ ಭಾಷೆಯಾಗಿದೆ. ಲೇಖಕರೇ ಹೇಳುವಂತೆ ಜನಸಾಮಾನ್ಯರ ಭಾಷೆಯಾಗಿ ಆಧುನಿಕ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವಲ್ಲಿ ಇನ್ನೂ ಪ್ರಯತ್ನಗಳು ಆಗಬೇಕಿದೆ. ಹೈದ್ರಾಬಾದಿನ ನಿಜಾಮ ಸಹ 19ನೇ ಶತಮಾನದಲ್ಲಿಯೇ ಇಂಜನೀಯರಿಂಗ್, ಮೆಡಿಕಲ್ ಶಿಕ್ಷಣ, ಉನ್ನತ ಶಿಕ್ಷಣ ಉರ್ದುವಿನಲ್ಲಿ ಕೊಡಿಸಿದ್ದಿಲ್ಲವೇ ? ಕನ್ನಡಿಗರೂ ಕಲಿತಿದ್ದಿಲ್ಲವೆ ? ನಮ್ಮ ಇಚ್ಛಾಶಕ್ತಿ ಮತ್ತು ನಮ್ಮತನದ ಕೊರತೆ ಮುಖ್ಯ ಅಡ್ಡಿಯಾಗಿವೆ. ಮಾತು-ಕೃತಿ ನಡುವಿನ ಅಂತರ ಈ ಚರ್ಚೆ ಮುಂದುವರೆಸುತ್ತಿವೆ.

*ಸೇಡಂ* — ***ಅಣ್ಣಾಸಾಗರ್ ಬಿ. ಆರ್.***

ಮಾರ್ಚ್‌ನ "ಹೊಸತು"ವಿನಲ್ಲಿ ಅಗ್ಗದ ರಾಳು ಹಾಸ್ಯ ಪ್ರಚೋದಕ ಲೇಖನಗಳೆರಡನ್ನು ಕಂಡು ಬೇಸರವಾಗಿದೆ. ಯಾವುದೇ ಮತವನ್ನು ಲೇವಡಿ ಮಾಡಬಾರದು – ಅದರಲ್ಲೂ ತಾಳ್ಮೆಯುಳ್ಳ, ಪ್ರತಿಭಟಿಸದಿರುವವರ ಮತದ ಬಗ್ಗೆ ಅದು ಸಲ್ಲ. ನಿಮ್ಮ ಓದುಗರಲ್ಲೂ ಅನೇಕರಿಗೆ ಆ




ಎರಡು "ಹಾಸ್ಯಭರಿತ (?)" ಲೇಖನಗಳು ಬೇಸರ ಹುಟ್ಟಿಸಿರಬೇಕು. 'ಹೊಸತು'ವಿನಲ್ಲಿ ನನ್ನಂಥವರು ವಿಚಾರ ಪ್ರದ, ಶ್ರೇಷ್ಠಮಟ್ಟದ ಲೇಖನಗಳನ್ನು ನಿರೀಕ್ಷಿಸುತ್ತೇವೆ. ನಮ್ಮಂಥವರಿಗೆ ಆಶಾಭಂಗ ಮಾಡಬೇಡಿರೆಂದು ಪ್ರಾರ್ಥನೆ. ಆ ಎರಡು ಲೇಖನಗಳು : ಕನಕನ ಕಿಂಡಿ ಮತ್ತು ವೈಷ್ಣವ ಮಾನಭಂಗ. ನಿರ್ವಾಹವಿಲ್ಲದೆ ಹೆಸರಿಸಿರುತ್ತೇನೆ.

*ಸಾಗರ* — ***ಬ. ನಾ. ರಘುರಾಮ***

ಜನವರಿ ವಿಶೇಷ ಸಂಚಿಕೆಯಲ್ಲಿ 'ಮನ ಮುಟ್ಟಿದ ಆ ಕ್ಷಣ' ವಿಭಾಗಕ್ಕೆ ಕಳುಹಿಸಿದ ನನ್ನ ಒಂದು ಪುಟ್ಟ ಲೇಖನ 'ಅಪ್ಪಾಜಿಯ ಸೀನು' ತಾವು ಪ್ರಕಟಿಸಿದ್ದಕ್ಕೆ ನನ್ನ ಕೃತಜ್ಞತೆಗಳು. ನಮ್ಮಂತಹ ಚಿಕ್ಕ ಪ್ರತಿಭೆಗಳಿಗೆ ತಮ್ಮಂತಹ ದೊಡ್ಡವರ ಪ್ರೋತ್ಸಾಹವೇ ಶ್ರೀರಕ್ಷೆ. ಈ ಚಿಕ್ಕ ಪ್ರತಿಭೆಗಳಿಗೆ ತಮ್ಮ ಪ್ರೋತ್ಸಾಹವೇ ಗೆಲುವಿನ ಮೆಟ್ಟಿಲುಗಳು. ತಮ್ಮ ಪ್ರೋತ್ಸಾಹಕ್ಕೆ ಧನ್ಯವಾದಗಳು.

*ಜಮಖಂಡಿ* — ***ಕುಮಾರಿ ಕವಿತಾ ಕೋರಟಕರ***

ಮುದ್ದಾದ ಎಳೆಕಂದನ ಮುಖಪುಟದ ಹೊಸತು (ಮಾರ್ಚ್ ಸಂಚಿಕೆ) ನೋಡಿದೊಡನೆ ಖುಷಿ ನೀಡಿತು.

'ಈ ತಿಂಗಳು' ಕಾಲಂನಲ್ಲಿ ಜಿ. ರಾಮಕೃಷ್ಣ ಅವರು ಸಾಹಿತ್ಯ ಸಮ್ಮೇಳನ ನಡೆದ ದಾರಿಯನ್ನು ವಿವೇಚಿಸಿ, ಸೂಕ್ತ ಮಾರ್ಗದರ್ಶನ ನೀಡಿ, ಕನ್ನಡ ಸಾಹಿತ್ಯ ಸಮ್ಮೇಳನ - ಅರ್ಥವತ್ತಾಗುವ ಬಗೆಯನ್ನು ಚಿಂತಿಸಿದ್ದಾರೆ. ಸಂಪಾದಕೀಯದಲ್ಲಿ ಮಹಿಳೆಯರು ಕೇವಲ ಫಲಾನುಭವಿಗಳಲ್ಲ ಎಂಬುದನ್ನು ಎಚ್ಚರಿಸಿ ಡಾ|| ಎನ್. ಗಾಯತ್ರಿಯವರು ಮಹಿಳಾ ಆಯೋಗದ ಅಗತ್ಯತೆಯನ್ನು ತಿಳಿಸಿಕೊಟ್ಟಿದ್ದಾರೆ. 'ಪ್ರತಿಭಟನೆ' ಕತೆಯಲ್ಲಿ 'ಅಕ್ಕ'ನ ಮರುವ್ಯಾಖ್ಯಾನವನ್ನು ಮಾಡಿ, ಅಕ್ಕನ ಪ್ರಸ್ತುತತೆಯ ಕುರಿತು ಚಿಂತನೆ ಇದೆ. ಹೀಗೆ ಮಾರ್ಚ್ 'ಹೊಸತು' ತುಂಬಾ ಮುದ ನೀಡಿತು.

*ಬೆಂಗಳೂರು* — ***ಸುಜಾತ***

ಮಾರ್ಚ್ ಸಂಚಿಕೆಯಲ್ಲಿ ಪ್ರೊ|| ಶಿವರಾಮಯ್ಯನವರ 'ಕನಕನ ಕಿಂಡಿಯ ಮೂಲಕ ಕಂಡ ಮಾಧ್ವಮತ' ಲೇಖನದ ಬಗ್ಗೆ ಈ ಪತ್ರ. ಬನ್ನಂಜೆ ಗೋವಿಂದಾಚಾರ್ಯರ ಕನಕನ ಕಿಂಡಿಯ ಬಗೆಗಿನ ಅಭಿಪ್ರಾಯ ಗದ್ದಲ ಎಬ್ಬಿಸುವ, ಕಿಡಿಗೇಡಿತನದ ಪ್ರವೃತ್ತಿ ಎಂದು ಹಳಿಯುವ ಲೇಖಕರ ಲೇಖನವೂ ಅದೇ ಪ್ರವೃತ್ತಿಯನ್ನು ಪುಷ್ಕಲವಾಗಿ ತೋರಿಸುತ್ತಿದೆ. ಪ್ರೊಫೆಸರ್ ಒಬ್ಬರು ಸಂದಿಗ್ಧ ವಿಚಾರದ ಬಗ್ಗೆ ಸ್ಪಷ್ಟ ಆಧಾರಗಳನ್ನು ಸಂಬಂಧಪಟ್ಟವರಿಂದ ಅಪೇಕ್ಷಿಸಬೇಕೇ ಹೊರತು ಆಕ್ರೋಶವನ್ನು ಪ್ರದರ್ಶಿಸುತ್ತಾ ಹೋಗಬಾರದು. ಅದು ವಿಚಾರವಂತಿಕೆ ಆಗುವುದಿಲ್ಲ.

ಮಧ್ವಾಚಾರ್ಯರೊಬ್ಬರೇ ಭೇದದ ಪ್ರತಿಪಾದಕರಲ್ಲ. ದಯವಿಟ್ಟು ಭಾರತೀಯ ದರ್ಶನಗಳ ಪರಂಪರೆಯಲ್ಲಿ ಭೇದದ ನಿರಾಕರಣೆ ಪ್ರತಿಪಾದನೆಗಳ ಚರಿತ್ರೆಯನ್ನು ಗಮನಿಸಿ.

*ಮೈಸೂರು* — ***ಸಿ. ಎಚ್. ಶ್ರೀನಿವಾಸಮೂರ್ತಿ***

ಎಳೆಗಂದಮ್ಮನ ಆಕರ್ಷಕ ಮುಖಪುಟ ಹೊತ್ತು ಬಂದಿರುವ ಈ ಸಂಚಿಕೆ ನೋಡಲೇ ಸೊಗಸು.

ಗಾರ್ಮೆಂಟ್ ಮಹಿಳೆಯರು - ಪೀಣ್ಯ ಕ್ಷೇತ್ರದಲ್ಲಿನ ಕೈಗಾರಿಕೆಗಳಲ್ಲಿ ಅತ್ಯಂತ ಪ್ರಮುಖ ಉದ್ದಿಮೆಯ ಬಗ್ಗೆ ವಿಶ್ಲೇಷಣೆ ಪ್ರಬುದ್ಧವಾಗಿ ನಿರೂಪಿತ. ಈಗ ಬೆಂಗಳೂರು ಗಾರ್ಮೆಂಟ್ ಉದ್ದಿಮೆಗೆ ಆಗರವೆಂದೇ ಪ್ರಖ್ಯಾತ. ಸಹಸ್ರಾರು ಕಾರ್ಮಿಕರಿಗೆ ಇದು ಉದ್ಯೋಗ ನೀಡಿದೆಯಾದರೂ ಅಲ್ಲಿನ ಕೆಲಸಗಾರರಿಗೆ ಕಾರ್ಮಿಕ ಭದ್ರತಾ ಯೋಜನೆಗಳ ಭದ್ರತೆ/ವಿಸ್ತರಣೆಯಲ್ಲಿ ಇನ್ನೂ ಹಿಂದೆಯೇ ಉಳಿದಿದೆ ಎಂದರೆ ತಪ್ಪಾಗಲಾರದು.

"ಭಾರತದಲ್ಲಿ ಬಾಲರ ಬವಣೆ" - ದೇಶದಲ್ಲಿ ಚಿಣ್ಣರ ಬಗ್ಗೆ ಚಿಂತೆಯೇ ಹೊರತು ಚಿಂತನೆ, ಕಾನೂನು ಅನುಷ್ಠಾನ ಇವುಗಳಿಂದ ಲಕ್ಷಾಂತರ ಬಾಲಕ-ಬಾಲಕಿಯರು ವಂಚಿತರು. ಬಾಲಕರ ಶೋಷಣೆಯಂತು ಹೊಟೇಲ್ ಉದ್ದಿಮೆಯಲ್ಲಿ ಪ್ರಖ್ಯಾತ. ಅಂತೆಯೇ ಕಟ್ಟಡ ಕಾಮಗಾರಿಯಲ್ಲಿಯೂ ಸಹ.

ಸೊಗಸಾದ ಮುದ್ರಣ ಆಕರ್ಷಕ ಶೀರ್ಷಿಕೆಗಳಿಂದ ಮಾಸದಿಂದ ಮಾಸಕ್ಕೆ ಪ್ರವೃದ್ಧಮಾನದತ್ತ ಸಾಗಿದೆ – 'ಹೊಸತು.'

*ಬೆಂಗಳೂರು* — ***ನೆ.ಲ.ರಾಂ.***

ಮಾರ್ಚ್ ಸಂಚಿಕೆಯ ಡಾ|| ವಿರೂಪಾಕ್ಷಿ ಪೂಜಾರಹಳ್ಳಿಯವರ ಲೇಖನ 'ಆದರ್ಶ ಮತ್ತು ಶಿಕ್ಷೆ'ಯ ವಿಚಾರಧಾರೆ ವಿನೂತನ ವಿಶ್ಲೇಷಣೆಯ ಆಗರವೆಂದರೆ ತಪ್ಪಾಗಲಾರದು. ಹಲವು ವಲಯಗಳಿಂದ ಸ್ಫುಟಗೊಳ್ಳುವ ಇಲ್ಲಿನ ವಿಷಯಾವಲೋಕನದಲ್ಲಿ ಸೃಜನಾತ್ಮಕ ಶಿಸ್ತು ಹಾಗೂ ಅಚ್ಚುಕಟ್ಟುತನಗಳು ಎದ್ದುಕಾಣುತ್ತವೆ. ಜಾತಿ-ವರ್ಗಗಳ ಅಂತರ, ಸಮಯ ಸಂದರ್ಭಗಳ ಕಾಲಭೇದಗಳಿಂದ ಆದರ್ಶ-ಶಿಕ್ಷೆ ಎಂಬ ಪದಗಳು ಉಂಟುಮಾಡುವ ದ್ವಂದ್ವ ಗೊಂದಲಗಳ ಸೂಕ್ಷ್ಮ ಚಿತ್ರಣವನ್ನು ಈ ಲೇಖನದಲ್ಲಿ ಕಾಣಬಹುದಾಗಿದೆ.

*ಮಡಿಕೇರಿ* — ***ಲಕ್ಷ್ಮೀದೇವಿ ಎಲ್.***

# ಸಾರ್ವಜನಿಕ ಹಣಕಾಸಿಗೆ ದಮ್ಮಡಿ ಕಿಮ್ಮತ್ತಿಲ್ಲ

## ಕೇಂದ್ರ ಬಜೆಟ್‌ಗೆ ಒಂದು ಅಡಿಟಿಪ್ಪಣಿ

**ಕೆ. ಎಸ್. ಪಾರ್ಥಸಾರಥಿ**

*ಆಳುವ ವರ್ಗ ತನಗೆ ಬೇಕಾದ ರಾಜಕೀಯ ಪಕ್ಷವನ್ನು ಗದ್ದುಗೆಗೆ ಏರಿಸಿಕೊಳ್ಳುವುದು ಕಷ್ಟವಾದಂತೆಲ್ಲಾ ಸರ್ಕಾರದಿಂದ ಹೊರನಿಂತ, ಚುನಾವಣೆಯ ಆಗುಹೋಗುಗಳಿಂದ ಪ್ರಭಾವಿತವಾಗದ , ಅರ್ಥನೀತಿಯ ವ್ಯವಸ್ಥೆಯನ್ನು ನಿರ್ಮಿಸಿಕೊಳ್ಳುವ ಹಂಚಿಕೆ ಹೂಡುತ್ತದೆ. ಭಾಜಪ, ಕಾಂಗ್ರೆಸ್ ಹಾಗೂ ಕಲಬೆರಕೆಯ ಜನತಾ ಪಕ್ಷಗಳು ಆರ್ಥಿಕ ಉದಾರ ನೀತಿ, ವಿಶ್ವ ವಾಣಿಜ್ಯ ಸಂಸ್ಥೆ ಮುಂತಾದ ವಿಷಯಗಳ ಬಗ್ಗೆ ಸಹಸಮ್ಮತರಾಗಿರುವುದನ್ನು ಒಪ್ಪಿಕೊಂಡಿದ್ದಾರೆ. ಹೀಗಾಗಿ ಸರ್ಕಾರದ ಬಜೆಟ್‌ಗಳ ಬಗ್ಗೆ, ಅವುಗಳ ವ್ಯಾಪಕ ಪರಿಣಾಮದ ಬಗ್ಗೆ ಯಾರಿಗೂ ಏನೂ ಭ್ರಮೆ ಉಳಿದಿಲ್ಲ.*

ಯೋಜನಾಬದ್ಧ ಆರ್ಥಿಕ ಬೆಳವಣಿಗೆಯ ನೀತಿಯನ್ನು ಕೈಬಿಟ್ಟ ಮೇಲೆ ಆರ್ಥಿಕ ಮುಂಗಡ ಪತ್ರವು ಮಹತ್ವವನ್ನು ಕಳೆದುಕೊಂಡಿರುವುದು ಸ್ಪಷ್ಟವಾಗಿದೆ. ಅವರು ವಿಧಿಸುವ ಅಥವಾ ವಿನಾಯಿತಿ ನೀಡುವ ಕೆಲವು ಕರಭಾರದ ವಿಷಯ ಬಿಟ್ಟರೆ ಸರ್ಕಾರದ ಬಜೆಟ್ಟಿನಲ್ಲಿ ಅರ್ಥ ತಜ್ಞರಿಗೆ ಮೂಲಭೂತ ಆಸಕ್ತಿ ಬತ್ತಿಹೋಗಿದೆ. ಮಧ್ಯಮವರ್ಗದ ಮೇಲೆ ಕರಭಾರ ಹೆಚ್ಚಾಗಿದೆ, ಇದು ಜನಪ್ರಿಯವಲ್ಲ, ಅನುದಾನ ಕಡಿಮೆಯಾಯಿತು, ಯಾವುದೇ ಸುಂಕ ಹೆಚ್ಚಾಯಿತು ಎಂಬ ಚರ್ಚೆಗಳೆಲ್ಲಾ ಅರ್ಥಹೀನ. ಈ ಸರ್ಕಾರದಿಂದ ನಿರೀಕ್ಷಿಸಬಹುದಾದುದೇ ಇದೆಲ್ಲಾ. ಹೌದು, ಕೆಲವು ನೀತಿಗಳ ಕುರಿತ ಹೇಳಿಕೆಗಳಿವೆ. ಇವೆಲ್ಲಾ ಕೇವಲ ಪರಿಸ್ಥಿತಿಯ ಮೇಲಿನ ಹಾರಿಕೆಯ ಟಿಪ್ಪಣಿಗಳ ಸ್ವರೂಪದ್ದು. ಬಹುಕಾಲೀನ ಉದ್ದೇಶಿತ ಪರಿಣಾಮ ಉಂಟು ಮಾಡುವುದಕ್ಕಾಗಿ ಭರವಸೆಯಿಂದ ಮುಂದೊಡ್ಡುವ ನೀತಿಗಳು ಯಾವುವೂ ಈ ಬಜೆಟ್‌ನಲ್ಲಿ ಇಲ್ಲ. ಖಾಸಗೀಕರಣಗೊಳಿಸುವ ಧ್ಯೇಯದ ನೀತಿಗಳು ಬಹಳ ಹಿಂದೆಯೇ ಪ್ರಕಟಿತವಾಗಿದ್ದು, ಈಗ ಇವುಗಳು ತಮ್ಮ ಸ್ವರೂಪಕ್ಕೆ ತಕ್ಕಂತೆ ಮುಂದುವರಿಯುತ್ತಿದ್ದು, ಒಂದರ್ಥದಲ್ಲಿ **ಅರ್ಥ ಮಂತ್ರಿಯೊಬ್ಬರ ಅವಶ್ಯಕತೆಯೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ.** ಸರ್ಕಾರದ ಆಡಳಿತ ಯಂತ್ರ ಈಗಾಗಲೇ ಅಂಗೀಕೃತವಾದ ನೀತಿಗಳನ್ನು ಕಾರ್ಯಗತಗೊಳಿಸಲು ಸಮರ್ಥವಾಗಿದೆ. ಇಲ್ಲಿಯ ಅಧಿಕಾರಿಗಳು ವಿಶ್ವ ಬ್ಯಾಂಕಿನಲ್ಲೂ, ವಿಶ್ವ ವಾಣಿಜ್ಯ ಸಂಸ್ಥೆಯಲ್ಲೂ ಅಮೆರಿಕದ ವಿಶ್ವ ವಿದ್ಯಾಲಯಗಳಲ್ಲೂ ಪರಿಣತಿ ಪಡೆದವರು !

ಸರ್ಕಾರದ ಖರ್ಚು ಆದಾಯಕ್ಕಿಂತ ತೀರ ಹೆಚ್ಚಾಗಿದೆ. ಉದ್ಯೋಗಪತಿಗೆ ಇದರಿಂದ ನೇರವಾದ ಯಾವ ಶಾಖವೂ ತಟ್ಟಿಲ್ಲ. ಸರ್ಕಾರ ಮಧ್ಯಮವರ್ಗದಿಂದ ಕರ ಹೆಚ್ಚಿಸಿಯೋ, ಸಾರ್ವಜನಿಕ ಸಾಲವನ್ನು ಹೆಚ್ಚಿಸಿಯೋ ತನ್ನ ಸದ್ಯದ ಪರಿಸ್ಥಿತಿಯನ್ನು ತೂಗಿಸಿಕೊಳ್ಳುತ್ತದೆ. ಹಾಗೆ ಮಾಡದೆ, ಉದ್ಯೋಗಪತಿಗಳಿಂದ ವಸೂಲಾಗದ ಸಾಲದ, ಸುಂಕದ ಬಾಕಿಯನ್ನು ಬಲವಂತದಿಂದ ವಸೂಲು ಮಾಡುವ ಅಥವಾ ಅವರ ಲಾಭದ ಮೇಲೆ ಹೊಸ ಕರ ದರ ವಿಧಿಸಿ ವಸೂಲು ಮಾಡಿ ಬಜೆಟ್ಟನ್ನು ತೂಗಿಸಿಕೊಳ್ಳಲು ಹೊರಟಿಲ್ಲ. ಆದರೂ ಈ ಉದ್ಯೋಗಪತಿಗಳಿಗೆ ಇರುವ ದುಃಖ ಇನ್ನಷ್ಟು ಕರವಿನಾಯಿತಿ ತಮಗೆ ದಕ್ಕಿಲಿಲ್ಲವಲ್ಲ ಎಂಬುದೇ ಆಗಿದೆ ! ಸರ್ಕಾರದಿಂದ ಒಂದಿಷ್ಟು ಹೊಸ ತಿಂಡಿತಿನಿಸು ಸಿಕ್ಕೀತೇನೋ ಎಂಬ ಈ ಸಂಚು ಫಲಕಾರಿಯಾಗಿಲ್ಲ. ಕಾರಣ ಸರ್ಕಾರದ ಬೊಕ್ಕಸದಲ್ಲಿ ಇವರಿಗೆ ಕೊಡಲು ಏನೇನೂ ಉಳಿದಿಲ್ಲ. ಆರ್ಥಿಕ ಹಿಂಜರಿತವು ಇವರೆಲ್ಲರ ವಾರ್ಷಿಕ ಲಾಭವನ್ನೇನೂ ನಷ್ಟಕ್ಕೆ ತಿರುಗಿಸಿಲ್ಲ! ಇವರ ಎಂದಿನ ಲಾಭದಲ್ಲಿ ಕೆಲವೆಡೆ ಕೊರತೆಯಾಗಿದೆ, ಅಪಾರ ಲಾಭ ಈಗ ಒಂದಿಷ್ಟು ಕುಂದಿದೆ. ಇದಕ್ಕೆ ಕಾರಣ ಮಾರುಕಟ್ಟೆಯಲ್ಲಿ ಬೇಡಿಕೆಯಿಲ್ಲದೆ ವ್ಯಾಪಾರ ಕುಂದಿದೆ ಎನ್ನುವುದು ಒಂದು ವಾದವಾದರೆ, ಅತಿಲಾಭದ ನಿರೀಕ್ಷೆಯಲ್ಲಿ ಹೊಸ ಸಡಿಲಗೊಂಡ ನೀತಿಯ ಪ್ರಯೋಜನ ಪಡೆದು ಅಗತ್ಯ ಮೀರಿ ಕೈಗಾರಿಕೆಗಳು ತಮ್ಮ ಉತ್ಪಾದನಾ ಸಾಮರ್ಥ್ಯವನ್ನೂ, ಉತ್ಪಾದನೆಯನ್ನೂ ಹೆಚ್ಚಿಸಿಕೊಂಡಿದ್ದೇ ಕಾರಣವೆಂಬ ವಾದವೂ ಇದೆ. ಸ್ವಲ್ಪಮಟ್ಟಿಗೆ ಅಂತರರಾಷ್ಟ್ರೀಯವಾಗಿ ಆರ್ಥಿಕತೆ ಕುಂದಿರುವುದರ ನೆರಳೂ ಇದರ ಮೇಲೆ ಇರಬಹುದು. ಆದರೆ ಹೊಸ ಉದ್ಯಮ ಸೃಷ್ಟಿಸದೆ, ಇರುವ ಕಾರ್ಮಿಕರನ್ನು ಕಾನೂನುಬಾಹಿರವಾಗಿ ತೆಗೆದುಹಾಕಿ, ಪಡೆದ ಸಾರ್ವಜನಿಕ ಸಾಲ ಹಿಂತಿರುಗಿಸದೆ, ತೆರಬೇಕಾದ ಕರಗಳನ್ನು ಪಾವತಿ ಮಾಡದೆ ಹೀಗೆಲ್ಲಾ ತಮ್ಮ ಲಾಭ ಹೆಚ್ಚಿಸಿಕೊಳ್ಳುವ ನಮ್ಮ ನಾಡಿನ ಖಾಸಗಿ ವ್ಯವಸ್ಥೆಯಲ್ಲಿ ಸರಿಯಾದ ಆರ್ಥಿಕ ಪರಿಸ್ಥಿತಿಯ ಸೂಚಕ ಸಂಖ್ಯಾ ಮಾಹಿತಿಗಳು ದೊರೆಯುವುದೇ ಇಲ್ಲ. ಆದರೆ ಈ ವರ್ಷದ ಸಾರ್ವಜನಿಕ ಉದ್ಯಮಗಳ ಲಾಭ ಮತ್ತು ವಹಿವಾಟಿನ ಸೂಚಕಗಳು ಶ್ಲಾಘನೀಯವಾಗಿರುವುದು ಪ್ರಕಟವಾಗಿದೆ. ಖಾಸಗಿ ವಲಯದ ವಂಚಕರು ಇವುಗಳ ದುಃಸ್ಥಿತಿಯ ಮೇಲೆ ಕಥೆ ಕಟ್ಟಿದ್ದು ಈಗ ಬಹಿರಂಗವಾಗಿದೆ. ಸಾರ್ವಜನಿಕ ಹುದ್ದೆಗಳಲ್ಲಿ ನಷ್ಟಕ್ಕೆ ಬಹಳಮಟ್ಟಿಗೆ ಕಾರಣವಾಗಿರುವ ಕಲ್ಲಿದ್ದಲಿನ ಉದ್ದಿಮೆಯ ಪರಿಸ್ಥಿತಿಗೂ ಖಾಸಗಿಯವರೇ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಾರಣವೆಂದು ತಿಳಿದಾಗ ಮಾತ್ರ ಚಿತ್ರ ಸಂಪೂರ್ಣವಾಗುತ್ತದೆ. ಹೊಸ ಬಜೆಟ್‌ನಲ್ಲಿ ಒಂದಿಷ್ಟು ಡಿವಿಡೆಂಡ್ ಸುಂಕ ವಿಧಿಸಿ, ಹಣ ಸಂಗ್ರಹಿಸುವ ಅರ್ಥಮಂತ್ರಿಯವರ ಸರಳ ಸಲಹೆಗೆ ಪೆಟ್ಟು ಕೊಡುವಂತೆ ದೇಶದ ಅತಿ ದೊಡ್ಡ ಅತಿ ದೊಡ್ಡವರ ಕಂಪೆನಿಗಳೂ ಇನ್ನೂ ಅಂಗೀಕೃತವಾಗದ ಬಜೆಟ್ ಮಂಡನೆಯ ಮರುಘಳಿಗೆಯೇ ಲೆಕ್ಕ ಪತ್ರ ಸಿದ್ಧವಿಲ್ಲದಿದ್ದರೂ ಅತಿ ಹೆಚ್ಚು ಡಿವಿಡೆಂಡ್ ಘೋಷಿಸಿ, ಈ ವರ್ಷಾಂತ್ಯದೊಳಗೆ ಸರ್ಕಾರಕ್ಕೆ ಕೊಡಬೇಕಾಗುವ ಕರ ತಪ್ಪಿಸಿಕೊಳ್ಳಲು ಮುಂದಾಗಿದ್ದು, ಅರ್ಥಮಂತ್ರಿ, ಅವರ ಮರ್ಯಾದೆ ಕಳೆದದ್ದು, ಅನಂತರ ಮಹಾನ್ ಉದ್ಯೋಗಪತಿಗಳು ಹಿಂದೆ ಸರಿದದ್ದು ಇವುಗಳ ತಾತ್ಪರ್ಯ ಇಷ್ಟು: ಲೈಸೆನ್ಸ್ ಪರ್ಮಿಟ್ ರಾಜ್ಯದಲ್ಲಿ ಆ ವ್ಯವಸ್ಥೆಯನ್ನೇ ಬಂಡವಾಳವನ್ನಾಗಿಸಿಕೊಂಡು ಕೊಬ್ಬಿ ಬೆಳೆದ ಹಿರಿಯ ಕೈಗಾರಿಕೆಗಳು ಸರ್ಕಾರದ ಪರೋಕ್ಷ ಪ್ರತ್ಯಕ್ಷ ಸವಲತ್ತುಗಳಿಲ್ಲದೆ ಬದುಕಲಾರದಷ್ಟು ನರಪೇತಲವಾಗಿವೆ. ಉದಾರನೀತಿಯ ಅಂತಿಮ ಅಂಕ ಸಮೀಪವಾಗುತ್ತಿದ್ದಂತೆ ಭವಿಷ್ಯದ ಚಿಂತೆ ಇವರನ್ನು ಆವರಿಸಿದೆ. ದೇಶದೊಳಕ್ಕೆ ಧಾವಿಸಿ ಬರುವ ಕಡಿಮೆ ಬೆಲೆಯ ಅಧಿಕ ಗುಣಮಟ್ಟದ ಸರಕುಗಳ ಮುಂದೆ ಇವರು ತಮ್ಮ ಉತ್ಪಾದಕ ಘಟಕಗಳನ್ನು ಮುಚ್ಚಿಕೊಂಡು ಪರದೇಶೀ ಸರಕುಗಳ ಹಂಚಿಕೆದಾರರಾಗಬೇಕಾಗುತ್ತದೆ ಈಗ. ಈ ಘಟಕಗಳನ್ನು ಮುಚ್ಚಲು ಅನುಕೂಲವಾಗುವಂತೆ ಬಜೆಟ್‌ನಲ್ಲಿ ಕೈಗಾರಿಕಾ ವಿವಾದ ಪರಿಹಾರ ಮಸೂದೆಯನ್ನು ಪರಿಷ್ಕರಿಸುವ ನೀತಿ ಪ್ರಕಟವಾಗಿದೆ. ವಾರ್ಷಿಕ ಉತ್ಪಾದಕತೆಗೆ ಮಹತ್ತರ ಭಾಗವನ್ನು ಇಂದೂ ವ್ಯವಸಾಯ ಕ್ಷೇತ್ರವೇ ನೀಡುತ್ತಿದ್ದರೂ ಸರ್ಕಾರ ತನ್ನ ಕೆಂಗಣ್ಣನ್ನು ಆ ಕ್ಷೇತ್ರದ ಅನುದಾನದ ಕಡೆಗೆ ತಿರುಗಿಸಲು ಮುಂದಾಗಿದೆ. ತಿಳಿದೂ ತಿಳಿದೂ ಇಂಥ ನೀತಿಗಳನ್ನು ಮುಂದೊಡ್ಡುತ್ತಿರುವುದರ ಹಿಂದೆ ವಿಶ್ವ ವಾಣಿಜ್ಯ ಸಂಸ್ಥೆಯ, ಪಾಶ್ಚಿಮಾತ್ಯ ಬಂಡವಾಳದ, ಬಹುರಾಷ್ಟ್ರೀಯಗಳ ಒತ್ತಡ ಎಷ್ಟು ಎಂದು ಅರ್ಥೈಸಬಹುದು.

ಕೈಗಾರಿಕಾ ಕ್ಷೇತ್ರವನ್ನು ಸಂಪೂರ್ಣ ವಿದೇಶೀ ಬಂಡವಾಳದ ದಯೆಗೆ ತೆರೆದಾದ ಮೇಲೆ, ಈಗ ಈ ಬಜೆಟ್‌ನಲ್ಲಿ ವ್ಯವಸಾಯ ಕ್ಷೇತ್ರವನ್ನು ತೆರೆದಿಡುವ ನೀತಿಯ ಉಪಕ್ರಮವಾಗಿದೆ. ಪ್ರಕಟಿತ ನೀತಿಯ ಮುಖ್ಯ ಉದ್ದೇಶ ಶ್ರೀಮಂತ ಭೂಮಾಲಿಕ ರೈತರು ತಮ್ಮ ವ್ಯವಸಾಯವನ್ನು ತೀವ್ರ ಯಾಂತ್ರಿಕಗೊಳಿಸಲು, ತಮ್ಮ ಉತ್ಪಾದನೆಯನ್ನು ಕೈಗಾರಿಕಾ ಸರಕುಗಳಾಗಿ ಸಂಸ್ಕರಿಸಲು ಒತ್ತುನೀಡುವುದು. ಈ ಎರಡು ಕ್ರಮದಿಂದ ಉತ್ಪಾದನಾ ವೆಚ್ಚ ಕಡಿಮೆಯಾಗಿ ರಫ್ತು ಮಾರ್ಗವನ್ನು ಹಿಡಿಯಲು ಸಾಧ್ಯವಾಗಬಹುದೆಂಬ ನಿರೀಕ್ಷೆ. ಈ ಬಾರಿ ವ್ಯವಸಾಯ ಕ್ಷೇತ್ರದಲ್ಲಿ ಆದಾಯ ತೆರಿಗೆ ತರದಿರುವುದು ಗಮನಾರ್ಹ. ವ್ಯವಸಾಯವನ್ನು ಮುಂದುವರಿದ ರಾಷ್ಟ್ರಗಳಲ್ಲಿರುವಂತೆ ಬಂಡವಾಳ ಮಾರ್ಗದ, ಲಾಭ ಗಳಿಕೆ ದೃಷ್ಟಿಯ, ಸಮಾಜ ವಿಮುಖ ಹಾದಿಯತ್ತ ತಿರುಗಿಸುವುದು ಇದರ ಮರ್ಮ. ಗೊಬ್ಬರದ ಬೆಲೆ ಹೆಚ್ಚಿರುವುದರ ಪರಿಣಾಮ ಮಧ್ಯಮ ಮತ್ತು ಸಣ್ಣ ಹಿಡುವಳಿದಾರರ ಮೇಲೆ ಹೆಚ್ಚು ಆಗುತ್ತದೆ. ಬಜೆಟ್‌ನಲ್ಲಿ ಕೃಷಿ ಕಾರ್ಮಿಕರಿಗೆ, ಸಾಂಪ್ರದಾಯಿಕ ಕಾರ್ಮಿಕ ಸೇರ್ಪಡೆಗಳಿಂದ ಹೊರತಾಗಿರುವವರ ಸಹಾಯಕ್ಕೆಂದು ಒಂದು ವಿಮಾ ಯೋಜನೆಯೋ, ನಿರುದ್ಯೋಗ ಭತ್ಯೆಯಂಥದೋ ನೆರವಿನಿಂಗಿತವಿದೆ. ಆದರೆ ಇದು ಒಂದು ಕಣ್ಣೊರೆಸುವ ಅಶಕ್ತ ಪ್ರಯತ್ನವೆಂದು ಅದರ ಪ್ರಮಾಣಕ್ಕೆ ತಕ್ಕ ಹಣವನ್ನು ನಿಗದಿ ಮಾಡದೆ ಸ್ಪಷ್ಟಪಡಿಸಲಾಗಿದೆ.

ಹೊಸದೆನಿಸುವ ಇನ್ನೆರಡು ಕ್ರಮಗಳನ್ನು ಗಮನಿಸಬಹುದು. ಆರಿಸಿದ ನಗರಗಳಲ್ಲಿ ಮೂಲಭೂತ ಸೌಕರ್ಯಗಳನ್ನು ವೃದ್ಧಿಪಡಿಸಲು ರಾಜ್ಯಗಳಿಗೆ ಸಾಧನೆಯನ್ನು ಗಮನಿಸಿ ನೀಡುವ ಅನುದಾನ ಕ್ರಮ : ಈ ಸೌಕರ್ಯಗಳು ಬಂಡವಾಳ ಹೂಡಲು ವಿದೇಶಿ ಬಂಡವಾಳಿಗರು ಬಹುಶಃ ಹಾಕಿರುವ ಷರತ್ತುಗಳನ್ನು ಪರಿಪಾಲಿಸುವ ಕ್ರಮವಿರಬಹುದು. ಇದರಲ್ಲೂ ನಗರಗಳ

ಕೊಳಚೆಗೇರಿಗಳ ಮೇಲೆ ಒಂದಿಷ್ಟು ಗಮನಹರಿಸಿರುವುದನ್ನು ನೋಡಿದರೆ, ನಗರವನ್ನು 'ಸುಂದರ'ವಾಗಿಸುವ ಕ್ರಮವನ್ನೇ ಮೂಲಭೂತ ಸೌಕರ್ಯ ವೃದ್ಧಿಯ ಹೆಸರಿನಲ್ಲಿ ಕಾರ್ಯರೂಪಕ್ಕೆ ತಂದು, ಕೊಳಚೆಗೇರಿ ನಿವಾಸಿಗಳನ್ನು ಊರಿನಿಂದ ಹೊರಕ್ಕೆ ಅಟ್ಟುವ ಹುನ್ನಾರ ಇದ್ದರೆ ಆಶ್ಚರ್ಯವಿಲ್ಲ. ರಾಜ್ಯಗಳಿಗೆ ಎಂದಿನಂತೆ ನೀಡುವ ಹಣದ ರಾಶಿಯಲ್ಲದೆ ಪ್ರತ್ಯೇಕವಾಗಿ ಸುಮಾರು ೬೦೦೦ ಕೋಟಿ ರೂಪಾಯಿಗಳನ್ನು ಯಾವ ಯಾವ ರಾಜ್ಯಗಳು ಉದಾರೀಕರಣ ನೀತಿಯನ್ನು ಸಮರ್ಪಕವಾಗಿ ನಿರ್ವಹಿಸುವವೋ ಅಂಥವರಿಗೆ ಕೊಡುವ ಸೂಚನೆಯಿದೆ. ಸರ್ಕಾರಿ ನೌಕರರನ್ನು ಕಡಿಮೆ ಮಾಡುವುದು, ನಗರ ಆಸ್ತಿ ತೆರಿಗೆ ಹೆಚ್ಚಿಸುವುದು, ನಗರ ಭೂಕಾಯಿದೆ, ವ್ಯವಸಾಯ ಯೋಗ್ಯ ಜಮೀನಿನ ಪರಿವರ್ತನೆಯ ಕಾನೂನು ಮುಂತಾದವುಗಳನ್ನು ಸಂಪೂರ್ಣವಾಗಿ ಸಡಿಲಗೊಳಿಸುವುದು, ಬಜೆಟ್ ಕೊರತೆಯನ್ನು ಕಡಿಮೆ ಮಾಡುವುದು, ವಿದ್ಯುತ್ ಮುಂತಾದ ಸಾರ್ವಜನಿಕ ಉದ್ಯಮಯುಕ್ತ ಸೇವೆಗಳನ್ನು ಖಾಸಗೀಕರಣಗೊಳಿಸುವುದು ಮುಂತಾದುವೇ ಈ ಕ್ರಮಗಳು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಸಾರಿಯ ಬಜೆಟ್‌ನಲ್ಲಿ ಕೊರತೆಯನ್ನು ನೀಗಿಕೊಳ್ಳುವ ಪ್ರಯತ್ನದಲ್ಲಿ ೧೨೦೦೦ ಕೋಟಿಯಷ್ಟು ಕರವೃದ್ಧಿಯಾದರೂ, ಆಶ್ವಾಸನೆಯಲ್ಲಿ ಹಾಗೂ ದೇಶದ ಉಳಿತಾಯ ವೃದ್ಧಿಗೊಳಿಸುವಲ್ಲಿ ಯಾವ ಒಲವೂ ಇಲ್ಲ. ಉಳಿತಾಯಕ್ಕೆ ಬಡ್ಡಿದರವನ್ನು ಮತ್ತಷ್ಟು ಕಡಿಮೆ ಮಾಡಲಾಗಿದೆ; ಸಾಲಗಾರರ ಸಾಲವನ್ನು ಸುಲಭವಾಗಿ ಮನ್ನಾ ಮಾಡುವ ಹುನ್ನಾರವಿದೆ. ಕೇಂದ್ರ ಸರ್ಕಾರ ತನ್ನ ಪಾಲಿನ ಕರವಸೂಲಿಯನ್ನು ಸಮರ್ಪಕವಾಗಿ ನೆರವೇರಿಸದೆ ಹೋದರೆ ಅದರ ಪಾಲಿಗಾಗಿ ಕಾಯುತ್ತಿರುವ ರಾಜ್ಯ ಸರ್ಕಾರಗಳಿಗೆ ಅಪಾರ ನಷ್ಟವಾಗುತ್ತದೆ. ಕರ್ನಾಟಕಕ್ಕೆ ಕಳೆದ ವರ್ಷದ ಲೆಕ್ಕದಲ್ಲಿ ಈ ನಷ್ಟ ಸುಮಾರು ೬೦೦ ಕೋಟಿ ರೂಪಾಯಿಗಳು. ರಾಷ್ಟ್ರೀಯ ಅಂಚೆ ಕಛೇರಿ ಉಳಿತಾಯದ ಹಣವನ್ನು ಕೇಂದ್ರ ಮತ್ತು ರಾಜ್ಯ ಹಂಚಿಕೊಳ್ಳುತ್ತವೆ. ಇದು ಸಾರ್ವಜನಿಕ ಸಾಲದ ಸ್ವರೂಪದ್ದು. ಈ ಸಾರಿ ಈ ಖಾತೆಯ ಸಂಪೂರ್ಣ ಹಣವನ್ನು ರಾಜ್ಯ ಸರ್ಕಾರಗಳೇ ಇಟ್ಟುಕೊಳ್ಳಲಿ ಎಂದಿರುವುದು ಏನೋ ದೊಡ್ಡ ಉಪಕಾರ ಮಾಡುವ ಧೋರಣೆ ಎಂಬ ಭ್ರಮೆ ಅನಗತ್ಯ. ಮೊದಲಿಗೆ ಉಳಿತಾಯದ ಪ್ರಮಾಣವೇ ಕಡಿಮೆಯಾಗುತ್ತಿದೆ. ಈಗ ಕೇಂದ್ರದ ಸಾಲದ ಹೊರೆ ಕಡಿಮೆಯಾಗಿ, ರಾಜ್ಯದ ಹೊರೆ ಜಾಸ್ತಿಯಾಗುತ್ತದೆ. ಉಳಿತಾಯಕ್ಕೆ ನೀಡುವ ಬಡ್ಡಿಯ ದರವನ್ನು ಮಾರುಕಟ್ಟೆಯ ಏರುಪೇರಿಗೆ ಬಂಧಿಸಿದ ಹೊಸ ನೀತಿಯಿಂದ ಇನ್ನು ಮೇಲೆ ಸಾಧಾರಣ ಜನತೆ ಸರ್ಕಾರಗಳಿಂದ ಯಾವ ಸಹಾಯವನ್ನೂ ನಿರೀಕ್ಷಿಸುವಂತಿಲ್ಲ ಎಂಬ ಧೋರಣೆ ಸಂಪೂರ್ಣವಾದಂತಾಗುತ್ತದೆ.

ಬರುವ ಏಪ್ರಿಲ್‌ನಿಂದ ಪೆಟ್ರೋಲ್ ಉದ್ಯಮವೂ ಮಾರುಕಟ್ಟೆಯ ಏರುಪೇರಿನ ಬೆಲೆಯನ್ನು ಅವಲಂಬಿಸುತ್ತದೆ. ಬಡವರಿಗೆ ಸೀಮೆ ಎಣ್ಣೆ ಒದಗಿಸುವ ಜವಾಬ್ದಾರಿಯನ್ನೂ ಸರ್ಕಾರ ಕೈ ಬಿಡುತ್ತದೆ. ದೇಶದ ಪೆಟ್ರೋಲ್ ಉದ್ಯಮ, ದೂರಸಂಚಾರ ವ್ಯವಸ್ಥೆಯ ಮೇಲಿನ ಹಿಡಿತ ಖಾಸಗಿಯವರ ಕೈ ಸೇರುವ ಹುನ್ನಾರ ಜಯಪ್ರದವಾಗುತ್ತಿದೆ. ಸಾರ್ವಜನಿಕ ಉದ್ದಿಮೆಗಳ ಏಕಸ್ವಾಮ್ಯವನ್ನು ಟೀಕಿಸುತ್ತಿದ್ದವರು ಖಾಸಗಿ ಕ್ಷೇತ್ರದಲ್ಲಿ ಬೆಳೆಯುತ್ತಿರುವ ಏಕಸ್ವಾಮ್ಯದ ಬಗ್ಗೆ ಮೌನವಾಗಿರುವುದು ವಿಪರ್ಯಾಸ. ಇದಕ್ಕೆ ನಮ್ಮ ಅರ್ಥಶಾಸ್ತ್ರಜ್ಞರೂ ಹೊರತಲ್ಲ. ವಿಶ್ವದಲ್ಲೆಲ್ಲಾ ಬಹುರಾಷ್ಟ್ರೀಯಗಳ ಏಕಸ್ವಾಮ್ಯದ್ದೇ ಸಾರ್ವಭೌಮತ್ವ. ಎದುರಾಗಿ ಅವರ ಒಡ್ಡೋಲಗದಲ್ಲಿ ನಮ್ಮ ಪ್ರತಿನಿಧಿಗಳೂ ಒಂದಿಬ್ಬರು ಬೇಡವೇ ? ರಿಲೈಯನ್ಸ್ ಈಗ ಇದಕ್ಕೆ ಅರ್ಹವಾಗಿದೆ.

ಮುಕ್ತ ವ್ಯಾಪಾರದ ಸೋಗಿನಲ್ಲಿ ವಿಶ್ವ ವಾಣಿಜ್ಯ ಸಂಸ್ಥೆಯನ್ನು ಮುಂದಿಟ್ಟು ಪಾಶ್ಚಾತ್ಯ ಬಂಡವಳಿಗರು, ಅವರ ಅಧ್ವರ್ಯು ಅಮೆರಿಕ, ಈ ಸಂಸ್ಥೆಯ ನಿಯಮಗಳು ತನಗಲ್ಲವೆಂಬಂತೆ, ಈ ನಿಯಮಗಳನ್ನು ಮುರಿಯುತ್ತಿವೆ. ಉಕ್ಕಿನ ವ್ಯವಹಾರದಲ್ಲಿ ಇದು ಸ್ಪಷ್ಟ. ಹೊರಗಿನಿಂದ ಕಡಿಮೆ ದರದ, ಹೆಚ್ಚು ಗುಣಮಟ್ಟದ ಉಕ್ಕು ಆಮದಾಗಿ ತನ್ನ ಉದ್ದಿಮೆ ಹಾಳಾಗದಿರಲಿ ಎಂಬಂತೆ, ಅಮೆರಿಕ ಆಮದಿನ ಮೇಲೆ ಅತಿ ಹೆಚ್ಚು ಸುಂಕ ವಿಧಿಸಿದೆ. ಇದರ ಬಗ್ಗೆ ವಿವಾದ ಎಬ್ಬಿಸಿ ತೀರ್ಮಾನವಾಗುವ ವೇಳೆಗೆ ವಿವಿಧ ಮಾರ್ಗಗಳನ್ನು ಅನುಸರಿಸಿ, ಎರಡು ಮೂರು ವರ್ಷಗಳನ್ನೂ ಕಳೆಯಬಹುದು. ಅದರೊಳಗೆ ತನ್ನ ಉಕ್ಕಿನ ಘಟಕಗಳನ್ನು ಆಧುನೀಕರಣ ಗೊಳಿಸಿ ಉತ್ಪಾದಕತೆಯಲ್ಲಿ ವಿಚಕ್ಷಣೆ ಹೆಚ್ಚಿಸಿ ಪುನಃ ಚೇತರಿಸಿಕೊಳ್ಳಬಹುದು. ಇದರ ಪರಿಣಾಮವಾಗಿ ರಫ್ತು ಮಾಡುತ್ತಿದ್ದ ಇತರ ರಾಷ್ಟ್ರಗಳಲ್ಲಿ ಉದ್ಯಮ ಮುಚ್ಚಿಹೋದರೆ, ನಿರುದ್ಯೋಗ ಉಂಟಾದರೆ ಅದರ ಬಗ್ಗೆ ಅಮೆರಿಕಕ್ಕೆ ಒಂದಿಷ್ಟು ಎಗ್ಗಿಲ್ಲ. ಆದರೆ ನಮ್ಮ ಅರ್ಥ ಮಂತ್ರಿ ವಿಶ್ವವಾಣಿಜ್ಯಕ್ಕೆ ತಾನು ಇತ್ತ ವಚನಬದ್ಧತೆ ಬಹಳ ಪವಿತ್ರವಾದುದು ಎನ್ನುತ್ತಾರೆ !

ಬಂಡವಾಳ ಮತ್ತು ಲಾಭ, ಹಾಗೂ ಮಾರುಕಟ್ಟೆಯ ಪ್ರಚಾಲನೆಯೇ ನೀತಿಯಾದಾಗ, ದೇಶವೆಂಬ ಕಲ್ಪನೆಗೆ ಅಪಾಯ ಒದಗುವುದು ಆಶ್ಚರ್ಯವಲ್ಲ. ಈ ಬಜೆಟ್‌ನಲ್ಲಿ ಆರ್ಥಿಕ ಅಸಮಾನತೆ ಶೀಘ್ರಗತಿಯಲ್ಲಿ ವೃದ್ಧಿಯಾಗುವ ಎಲ್ಲ ಪ್ರಯತ್ನಗಳೂ ಅಡಗಿವೆ. ಶ್ರೀಮಂತ -ಬಡವರ ನಡುವೆ, ಸಾಮಾಜಿಕ ಗುಂಪುಗಳ ನಡುವೆ, ರಾಜ್ಯ-ರಾಜ್ಯಗಳ ನಡುವೆ, ಪ್ರದೇಶ- ಪ್ರದೇಶಗಳ ನಡುವೆ ಭಯಂಕರ ಸಾಮಾಜಿಕ ಆರ್ಥಿಕ ಕಂದರಗಳು ಬೆಳೆಯುತ್ತವೆ. ನಮ್ಮ ದೇಶದ ಮಟ್ಟಿಗೆ ಈಗ ''ಸಾರ್ವಜನಿಕ ಹಣಕಾಸು'' ಎಂಬ ಸಾಂಪ್ರದಾಯಿಕ ಅರ್ಥಶಾಸ್ತ್ರದ ಅಧ್ಯಾಯ ಸತ್ತಿದೆ ಎಂದು ಘೋಷಿಸಬಹುದು. ಈ ಬಜೆಟ್‌ಗೂ ಸಾಧಾರಣ ಜನತೆಗೂ ಅದರಿಂದ ಬೀಳುವ ಪ್ರಹಾರಗಳೇ ಸಂಬಂಧ. ನಮ್ಮ ಮಧ್ಯಮ ವರ್ಗಕ್ಕೆ ಇದು ತಿಳಿಯದೆ ಹೋಗುವುದು ಒಂದು ದುರಂತ.

ಈ ಬಗ್ಗೆ ಚಿಂತಿಸಲೂ ಅವಕಾಶವಿಲ್ಲದಂತೆ ಅಯೋಧ್ಯೆಯ ಹೆಸರಿನಲ್ಲಿ ಹೊಗೆ ಎಬ್ಬಿಸಿ, ಕಣ್ಣು ಮುಚ್ಚಿಸಿಬಿಟ್ಟರೆ ತೆರೆಯ ಮರೆಯಲ್ಲಿ ತಮ್ಮ ಕೆಲಸ ಮಾಡಿಕೊಳ್ಳಬಹುದಲ್ಲ! ಈ ಗಲಾಟೆಯಲ್ಲಿ ಬಜೆಟ್ ಬಗ್ಗೆ ಹೇಳಿಕೊಳ್ಳುವಂಥ ಚರ್ಚೆ ಏನೂ ನಡೆಯುತ್ತಿಲ್ಲದಿರುವುದು ಆಕಸ್ಮಿಕವಲ್ಲ. ಒಂದು ಕಡೆ ಹತಾಶ ಜನಸ್ತೋಮ, ಮತ್ತೊಂದು ಕಡೆ ಒಳಗೊಳಗೇ ಸಂತಸಕೂಟ ಏರ್ಪಡಿಸುತ್ತಿರುವ ವರ್ತಕ ವೃಂದ. ಇದಿಗೋ ! ಉದಾರವಾದಕ್ಕೆ ಮೂರು ಜಯಕಾರಗಳು. ಆದರೆ ಜನರಿಂದ ನೂರು ಧಿಕ್ಕಾರಗಳು.

**ಕೆ. ಎಸ್. ಪಾರ್ಥಸಾರಥಿ**
ಸಿ-೧, ನಾಗಾರ್ಜುನ ಎನ್‌ಕ್ಲೇವ್, ೨೬/ಅ, ೧೪ನೇ ಅಡ್ಡರಸ್ತೆ, ೧ನೇ ಘಟ್ಟ, ಜೆ. ಪಿ. ನಗರ, ಬೆಂಗಳೂರು-೭೮

# ವ್ಯಕ್ತಿಯ ವಿವರ

ನೀನೇನು ಮಾಡಬೇಕು ?
ಅರ್ಜಿ ಸಲ್ಲಿಸಿ ಅದರೊಂದಿಗೆ
ವ್ಯಕ್ತಿ ವಿವರ ಲಗತ್ತಿಸಬೇಕು.

ನಿನ್ನ ಜೀವನ ಎಷ್ಟೇ ದೀರ್ಘವಾಗಿದ್ದರೂ
ವ್ಯಕ್ತಿ ವಿವರ ಮಾತ್ರ ಚಿಕ್ಕದಿರಬೇಕು.
ಸಂಕ್ಷಿಪ್ತವಾಗಿರು, ವಿಷಯಗಳನ್ನಾರಿಸು
ಬಯಲನ್ನೇ ವಿಳಾಸವನ್ನಾಗಿ ಮಾರ್ಪಡಿಸು
ಅಸ್ಪಷ್ಟ ನೆನಪುಗಳನ್ನೇ, ನಿರ್ದಿಷ್ಟ ದಿನವಾಗಿಸು.
ನಿನ್ನ ಪ್ರೇಮ ಪ್ರಕರಣ ಎಷ್ಟೇ ಇದ್ದರೂ
ಮದುವೆಯಾಗಿದ್ದನ್ನು ಮಾತ್ರ ಹೆಸರಿಸು
ಮಕ್ಕಳ ಪೈಕಿ, ಹುಟ್ಟಿದವರನ್ನು ಮಾತ್ರ ನಮೂದಿಸು.

ನೀನು ಯಾರಿಗೆ ಗೊತ್ತು ಎನ್ನುವುದಕ್ಕಿಂತ
ಯಾರು ನಿನಗೆ ಗೊತ್ತು ಎನ್ನುವುದು ಮುಖ್ಯ
ಪ್ರಯಾಣ - ವಿದೇಶಕ್ಕೆ ಹೋಗಿದ್ದರೆ ಮಾತ್ರ
ಅಂಗ ಸಂಸ್ಥೆ - ಯಾವುದಕ್ಕೆ, ಏಕೆ ಎನ್ನುವುದಲ್ಲ
ಪ್ರಶಸ್ತಿಗಳು - ಯಾವುದಕ್ಕಾಗಿ ಎಂಬುದಲ್ಲ.



ದೂರದಿಂದ ನಿನ್ನ ಕಡೆಗೇ ನೀನು ನೋಡಿದೆಯೆಂದೂ
ನಿನ್ನೊಂದಿಗೇ ನೀನು ಮಾತನಾಡಿಲ್ಲ ಎಂದೂ ಬರೆ.
ನಿನ್ನ ಪ್ರೀತಿಯ ನಾಯಿ, ಬೆಕ್ಕು , ಹಕ್ಕಿಗಳನ್ನೂ
ಸ್ಮರಣಿಕೆ, ಮಿತ್ರರು, ಕನಸುಗಳನ್ನು ತೆಗೆದುಬಿಡು.

ಬೆಲೆಯನ್ನು ನಮೂದಿಸು, ಮೌಲ್ಯವನ್ನಲ್ಲ
ಸಂತೃಪ್ತಿಯಿಲ್ಲದಿದ್ದರೂ ಪದವಿಯನ್ನು
ಬೂಟಿನ ಆಕಾರವನ್ನು , ಎತ್ತಕಡೆ ಹೊರಟಿದೆಯೆಂಬುದನ್ನಲ್ಲ
ನೀನಾಗಿರುವುದನ್ನ ತಿಳಿಸು.

ಒಂದು ಕಿವಿ ಕಾಣುವ ಚಿತ್ರವನ್ನು ಲಗತ್ತಿಸು
ಬೇಕಾಗಿರುವುದು ಅದರ ಆಕಾರವೇ ಹೊರತು, ಏನು
ಕೇಳುವುದಿಲ್ಲ ಎನ್ನುವುದಲ್ಲ.
ಅದೇನು ಕೇಳುತ್ತದೆ ?
ಕಾಗದವನ್ನು 'ಚೂರು ಮಾಡುವ ಯಂತ್ರದ ಶಬ್ದ ಮಾತ್ರ.

ವಿಸ್ಲೊವಾ ಸಿಂಬರ್ಸ್ಕಾ
ಕನ್ನಡಕ್ಕೆ: ಎಂ. ಎಸ್. ರಘುನಾಥ್
ಹೆಚ್ಐಜಿ ೪೦, ೬ನೇ ಮುಖ್ಯ ರಸ್ತೆ, ಕೆಹೆಚ್‌ಬಿ ಕಾಲೋನಿ, ೨ನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.

# ಅನ್ತ್ಯಕ್ರಿಯೆ



ಕ್ಷಿತಿಜ ಬೀದರ್

ಕ್ರಿಯೆ ಪ್ರತಿಕ್ರಿಯೆ ಒಂದಕ್ಕೊಂದು ಪೂರಕ. ಇದು ಒಮ್ಮೊಮ್ಮೆ ಗೋಚರಿಸುವುದಿಲ್ಲ, ಮಿಂಚಿನ ನಂತರ ತಡವಾಗಿ ಗುಡುಗು ಕೇಳಿಸುವಂತೆ ಇಲ್ಲವೆ ಒಮ್ಮೊಮ್ಮೆ ತತ್‌ಕ್ಷಣವೇ ಕೂಡಾ..., ಅವರವರ ಬದುಕುವ ದಾರಿಗಳನ್ವಯ...!

''ನಿನ್ನ ಮೊದಲ ಹೆಂಡತಿ ಬೇರೊಬ್ಬನನ್ನು ಮದುವೆಯಾಗಿದ್ದಾಳಂತೆ...'' ಚಂದ್ರಪ್ಪ ಲೋಕಾಭಿರಾಮ ಮಾತಾಡುತ್ತಾ ಹೇಳಿದ. ಗೋಪಾಲಪ್ಪನ ಮುಖ ಝುರ್‌ನೇ ಇಳಿದುಹೋಯಿತು.

''ಮಕ್ಕಳನ್ನು ಹಡೆದಿದ್ದಾಳಂತೇನು...? ಹಾಗಾದರೆ ಅವಳು ಜಾರಿಣಿಯೇ ಸರಿ ಬಿಡು..''

''ನಿನ್ನ ದೃಷ್ಟಿಯಲ್ಲಿ ಹಾಗೆ ಇರಬಹುದು. ಗಂಡನೇ ಬಿಟ್ಟ ಮೇಲೆ ಅವಳಿಗೆ ಇನ್ನೆಲ್ಲಿ ಶೀಲದ ಪ್ರಶ್ನೆ... ತಾಯಿ ಮಗ ಸಂಬಂಧವೇ ಹರಿದುಕೊಂಡವಳಿಗೆ ಜಾರಿಣಿ ಎಂದು ಕರೆದರೆಷ್ಟು ಬಿಟ್ಟರೆಷ್ಟು...''

''ಪರ್‍ವಾ ಇಲ್ಲ ಕಣಪ್ಪ. ನೀನು ವಿಚಿತ್ರವಾಗಿ ಮಾತಾಡ್ತಿಯಲ್ಲ. ಗಂಡ ಬಿಟ್ಟರೂ ಮಗ ಅವಳಿಗೆ ಸಂಬಂಧಿಸಿಲ್ಲ ಅಂತಿಯಾ...?''

''ಸಂಬಂಧಿಸಿರಬಹುದು. ಆದರೆ ನಿನ್ನ ಹಠ ಸಾಧನೆಗೆ ಅವಳು ಕೊರಗಿ ಸಾಯಬೇಕಾಗಿತ್ತಾ...? ಪತಿವ್ರತೆ ಅನ್ನೋದು ಗಂಡಸಿನ ತೀರ್ಪು. ಹಾಗೆ ನಮ್ಮ ಆಲೋಚನೆಗಳು ಅಲ್ಲವೇ...? ಸ್ತ್ರೀ ಒಮ್ಮೆ ಮುಟ್ಟಿನಿಂದ ಹೊರಬಂದರೆ ನವೀಕರಿಸಿದಂತೆ. ದ್ರೌಪದಿ ಇದಕ್ಕೆ ಪುರಾವೆಯಲ್ಲವೇ....?'' ಸ್ನೇಹಿತ ತನ್ನ ತರ್ಕ ನಿವೇದಿಸಿದ. ಗೋಪಾಲಪ್ಪ ಮಾತು ಬೆಳೆಸಲು ಇಷ್ಟ ಪಡಲಿಲ್ಲ. ಬೆಳೆದ ಮಗನನ್ನು ಕಂಡು ಅವಳ ನೆನಪಿನಲ್ಲಿ ಒಂದು ನಿಟ್ಟುಸಿರು ಬಿಟ್ಟರೆ ಇನ್ನೊಂದು ಕ್ಷಣಕ್ಕೆ ಸಿಡಿದು ಬೀಳುತ್ತಿದ್ದರು.

ಅಣ್ಣ ಮದುವೆ ಮಾಡಿದ ಹೆಣ್ಣು ಎಂಬ ಕಾರಣಕ್ಕೆ ತಾತ್ಸಾರದಲ್ಲಿ ಜಗಳವಾಡಿ ಅಣ್ಣನಲ್ಲಿ ಪಾಲು ಪಡೆದು ಹೆಂಡತಿಗೆ ಹೊಡೆದು ಹೊರಗಟ್ಟಿದ್ದ. ಬದುಕಲು ಮಾನಸಿಕ ಸ್ಥೈರ್ಯವಿಲ್ಲದೆ ಮಗುವನ್ನು ಬಿಟ್ಟು ಆಕೆ ಹೊರಟುಹೋದದ್ದು ಸೋಜಿಗವೇ...! ಅಣ್ಣನ ಮನೆಯಲ್ಲಿಯೇ ಉಳಿದ ಮಗು... ಜವಾಬ್ದಾರಿ ಇಲ್ಲದೆ ಮನೆ ಬಿಟ್ಟು ಓಡಿದ ಗೋಪಾಲಪ್ಪ ವರ್ಷದ ಮೇಲೆ ಅನ್ಯಸ್ತ್ರೀಯೊಂದಿಗೆ ತಿರುಗಿ ಬಂದಿದ್ದ.

ಮಲತಾಯಿಯನ್ನು ಹುಡುಗ ಸ್ವೀಕರಿಸಲಿಲ್ಲ. ಭಾವನಾತ್ಮಕ ಸಂಬಂಧ ಏರ್ಪಡಲಿಲ್ಲ. ಇಪ್ಪತ್ತು ವರ್ಷ ಕಳೆದರೂ ಇವಳಿಗೆ ಮಕ್ಕಳಾಗಲಿಲ್ಲ. ಅದೇ ಕೊರಗಿನಲ್ಲಿ ಕೊನೆ ಉಸಿರು ಎಳೆದಳು. ಅವಳದು ನಿಲ್ಲದ ಗರ್ಭ, ಮಧುಮೇಹ ರೋಗ ಇರುವುದಕ್ಕೆ ಗರ್ಭಪಾತ ಎಂದರು. ಮತ್ತೆ ಕೆಲವರು ಮೊದಲ ಹೆಂಡತಿ ಶಾಪ ಎಂದರು. ತಾವೇ ಮಗನ ಮದುವೆ ನೆರವೇರಿಸಿದರು.

ವ್ಯಕ್ತಿಗೆ ಕಷ್ಟಗಳು ಎದುರಾಗುವುದು ಸರ್ವೇಸಾಮಾನ್ಯ. ಇದು ವ್ಯಕ್ತಿಯ ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸುತ್ತದೆ. ಕಷ್ಟದ ಅನುಭವ ತಿಳಿಯಪಡಿಸುವುದೇ ಇದರ ಉದ್ದೇಶ. ಸಂವೇದನೆಗಳಿಂದ ಅರಿವು ಉಂಟಾಗಿ ವ್ಯಕ್ತಿ ಮಾನವೀಯತೆಯನ್ನು ರೂಢಿಸಿಕೊಳ್ಳಲು ಸಹಾಯಕಾರಿಯಾಗುತ್ತದೆ. ತನಗೆ ಬಂದ ಕಷ್ಟ ಪರರಿಗೆ ಬಂದಾಗ ತನಗಾದ ಅನುಭವವನ್ನು ಕಲ್ಪಿಸಿ ಪರರಿಗೆ ಸಹಾಯ ಸಲ್ಲಿಸುವಂತಾಗುತ್ತದೆ. ಇಲ್ಲದಿದ್ದರೆ ಕಣ್ಣೆದುರಿನಲ್ಲಿಯೇ ವ್ಯಕ್ತಿಯೊಬ್ಬ ನೀರಿನಲ್ಲಿ ಮುಳುಗುತ್ತಿದ್ದರೂ ಬದುಕಿಸಬೇಕೆಂಬ ವಿಚಾರವೇ ಮೂಡುವುದಿಲ್ಲ.

ಅಣ್ಣನ ಮೇಲಿನ ಹಗೆಯಿಂದ ಅನುಭವಿಸಿದ ಕಷ್ಟ ಅವರ ಬದುಕಿಗೆ ನೀತಿಯ ಪಾಠವೇ ಆಯಿತು. ಸೊಸೆ ಮನೆ ಸೇರಿದಂತೆ ಮಗನ ಸ್ವಭಾವವೇ ಬದಲಾಯಿತು. ಅಪ್ಪ ಮಾಡಿದ ಅನ್ಯಾಯದಿಂದ ಚಿಂತಿತನಾದ. ಅಮ್ಮನ ಬಹಿಷ್ಕಾರದಲ್ಲಿ ಇಣುಕಿದ ಏಕಾಂಗಿತನ ಅವನಿಗರಿವಿಲ್ಲದೆ ಬದುಕಿನುದ್ದಕ್ಕೂ ಹರಿದು ಬಂತು. ತನ್ನ ವ್ಯಕಿತ್ತ್ವದಲ್ಲಿಯೇ ಬಿರುಕು ಕಂಡು ಅಪ್ಪನ ಹೀನ ಕೃತ್ಯವು ನೆನಪಿಗೆ ಬಂದು ಒಳಗೊಳಗೆ ದ್ವೇಷಿಸತೊಡಗಿದ. ಮಡದಿಗೂ ತಿಳಿಸಿ ಅವಳಿಂದಲೂ ಸಹಾನುಭೂತಿ ಪಡೆದ.

''ನಿಮ್ಮಪ್ಪನದು ಬರೀ ಒಣ ಪ್ರತಿಷ್ಠೆ. ನಾಲ್ಕು ಕಾಸು ಅನ್ಯಾಯ ಮಾರ್ಗದಲ್ಲಿ ಗಳಿಸಿ ತಾನೇ ಶ್ರೀಮಂತ ಎಂದು ಸಮಾಜದಲ್ಲಿ ಮೆರೆದರೆ ಆಯಿತೇ...? ತನ್ನ ಮಗನಿಗೆ ಆಗುತ್ತಿರುವ ನೋವಿನ ಕಲ್ಪನೆ ಇದೆಯೇ..? ಅಂಥ ಒಣ ರಾಜಕಾರಣ...'' ಎಂದು ಗಂಡನ ಧ್ವನಿಗೆ ತಾಳ ಹಾಕಿದಳು.

ಗೋಪಾಲಪ್ಪನ ಆರೋಗ್ಯ ದಿನೇ ದಿನೇ ಕ್ಷೀಣಿಸತೊಡಗಿತು. ಮಡದಿ ಸತ್ತನಂತರ ಅಂಟಿಕೊಂಡ ಕುಡಿತ ಅವನನ್ನು ಬಿಡಲಿಲ್ಲ. ದಿನಾಲು ಬಾರ್‌ಗೆ ಹೋಗುವುದು, ಚಂದ್ರಪ್ಪನೊಡನೆ ಕುಡಿಯುವುದು, ತೂರಾಡುತ್ತಾ ಮನೆಗೆ ಬಂದು ಮಲಗುವುದು, ಬೆಳಿಗ್ಗೆ

ತಲೆನೋವು, ಹೊಟ್ಟೆನೋವು ಎಂದು ನರಳುವುದು...

ಆ ದಿನ ಸವಿತಾ ಧೈರ್ಯ ತಂದುಕೊಂಡು ಗಂಡನ ಸ್ವಭಾವಕ್ಕೆ ಕಾರಣ ದೂರಿ ವಿಷ ಕಾರಿಯೇಬಿಟ್ಟಳು.

''...ಈಗ ದೊಡ್ಡವನಾಗಿದ್ದಾನಲ್ಲಮ್ಮ, ನಾನು ಯಾವುದಕ್ಕಾದರೂ ತಡೆದಿದ್ದೇನೆಯೇ...? ಎಲ್ಲದಕ್ಕೂ ನಾನೇ ಕಾರಣ ಎಂದು ಈಗಲೂ ದೂರಿದರೆ ಅದಕ್ಕೆ ಅರ್ಥವಿದೆಯೇ....?''

''ಅವರು ಮಾನಸಿಕವಾಗಿ ನರಳಲು ನೀವೇ ಕಾರಣವಂತೆ, ಎಲ್ಲಾ ನಿಮ್ಮಿಂದಲೇ ಆಗಿದ್ದು..'' ಸೊಸೆ ಆರೋಪದ ಪಟ್ಟಿಯನ್ನು ದೃಢಪಡಿಸಿದಳು. ಗೋಪಾಲಪ್ಪ ನಿಟ್ಟುಸಿರು ಬಿಟ್ಟು ಹಾಸಿಗೆಗೆ ಅಡ್ಡಾದರು.

ಬೆಳಿಗ್ಗೆ ಚಂದ್ರಪ್ಪ ಸತ್ತ ಸುದ್ದಿ ಕೇಳಿ ಗೋಪಾಲಪ್ಪ ಮಂಕಾದರು. ಹೂವಿನ ಹಾರದೊಂದಿಗೆ ಬಂದರು. ಚಂದ್ರಪ್ಪನ ಮಡದಿ ಗೋಳೋ ರಾಗ...

''ಎಲ್ಲಾ ನಿನ್ನಿಂದಲೇ... ನಮ್ಮೆಜಮಾನರಿಗೆ ಕುಡಿತ ಕಲಿಸಿ ಸಾಯಿಸಿಬಿಟ್ಟೆ... ದೇವರಂಥವರು ಬಿಟ್ಟು ಹೋದರಲ್ಲಾ...'' ಎದೆ ಬಡಿದುಕೊಂಡಳು.

ಮಂಚದ ಮೇಲೆ ಶವ, ಕುತ್ತಿಗೆವರೆಗೆ ಹೊದಿಸಿದ ಬಟ್ಟೆ, ಕಪ್ಪಿಟ್ಟ ಮುಖ, ಕೋಣೆ ತುಂಬಾ ಊದಿನ ಕಡ್ಡಿ ವಾಸನೆ...! ಗವಿ ಹೊಕ್ಕಂತೆ ಭಾಸ... ಗೋಪಾಲಪ್ಪ ಅವಳ ಮಾತಿಗೆ ಅಳುಕಿ ಮರುಮಾತಾಡದೆ ಒಂದು ಹೆಜ್ಜೆ ಹಿಂದೆ ಸರಿದ. ಬೆಳಗಿಸಿದ ಊದಿನ ಕಡ್ಡಿ ತಲೆಯ ಹಿಂದೆ ಇಟ್ಟ ಅಕ್ಕಿ ಬಟ್ಟಲಲ್ಲಿ ಚುಚ್ಚಿದ್ದರು. ಶವಕ್ಕೆ ಹಾರ ತೊಡಿಸಿ – ''ತಪ್ಪಾಯಿತು ಕಣೋ... ಇನ್ನೆಂದೂ ನಿನಗೆ ಕುಡಿಯಲು ಕರೆಯಲ್ಲಪ್ಪ...'' ಬೇಡಿಕೊಂಡರು. ಅಲ್ಲಿಯೇ ಮೂಲೆಯಲ್ಲಿ ಕುಸಿದು ಕುಳಿತರು. ಜನ ಬಂದು ಮುಖ ನೋಡಿ ಸ್ವಲ್ಪ ಹೊತ್ತು ಕುಳಿತು ಮೇಲೆದ್ದರು. ಶವ ಸಂಸ್ಕಾರಕ್ಕೆ ಜನ ಇಲ್ಲ. ಸಬೂಬು ಹೇಳಿ ಜಾರಿಕೊಳ್ಳುತ್ತಿರುವ ಪರಿಗೆ ಅಚ್ಚರಿಪಟ್ಟರು. ಚಂದ್ರಪ್ಪನ ಅಂತ್ಯಕ್ರಿಯೆ ಹೇಗೆ..? ಹೆಣಕ್ಕೆ ಮುಕ್ತಿ ನೀಡುವುದು ಯಾವಾಗ...? ಕುಡಿತಕ್ಕೆ ಸಂಗಾತಿಯಾದವನಿಗೆ ತಾನೇನು ಮಾಡಬಲ್ಲೆ...? ಅಪರಾಧಿ ಭಾವಕ್ಕೆ ಕುಬ್ಜನಾದ. ಚಂದ್ರಪ್ಪನ ಮಡದಿ ಹತ್ತಿರಕ್ಕೆ ಬಂದು ಕೈಜೋಡಿಸಿ ಕಂಬನಿ ತಂದಳು. ಮನಸ್ಸು ಕರಗಿ ಹೃದಯ ಹಗುರವಾಯಿತು. ಶವ ಎತ್ತಿ ಹೊರಗೆ ಇಟ್ಟು ಸ್ನಾನ ಮಾಡಿಸಿ ಶುಚಿಗೊಳಿಸಿದರು. ಮಸಕು ಬೆಳಕು. ಆಗಲೇ ಕರಾಳ ಛಾಯೆ. ತಾನೇ ಮುಂದೆ ನಿಂತು ಶವವನ್ನು ಮುಕ್ತಿವಾಹಿನಿಯಲ್ಲಿ ಸಾಗಿಸಿ ಚಿತಾಗಾರಕ್ಕೆ ತಂದರು.

''ನೀವು ದೇವರಂಥವರು, ವೃಥಾ ಶಪಿಸಿದೆ. ನಿಮ್ಮಿಂದಲೇ ನನ್ನ ಗಂಡನ ಅಂತ್ಯಸಂಸ್ಕಾರ ಕಾಣುವಂತಾಯಿತು. ನನ್ನ ತಪ್ಪನ್ನು ಕ್ಷಮಿಸಣ್ಣ..'' ಪುನಃ ಕಾಲಿಗೆ ಬೀಳಲು ಬಂದಳು. ಅವಳನ್ನು ಅಲ್ಲಿಯೇ ತಡೆದರು.

ಸ್ನೇಹಿತನ ಸಾವಿನ ಚಿಂತೆಯಲ್ಲಿ ಗೋಪಾಲಪ್ಪ ಹಾಸಿಗೆ ಹಿಡಿದರು. ಆರೈಕೆ ಮಾಡಿ ಸೋತ ಸವಿತಾ ಗಂಡನಿಗೆ ಪ್ರತ್ಯೇಕ ಮನೆಗಾಗಿ ಪೀಡಿಸಿದಳು.

''ನನಗೆ ನೋಡಿಕೊಳ್ಳಲು ಆಗಲ್ಲಾರಿ, ನೀವು ಏನಾದರೂ ಮಾಡಿಕೊಳ್ಳಿ. ನನಗೆ ಇವರನ್ನು ನೋಡಿಕೊಳ್ಳಲು ಆಗಲ್ಲ...''

''ಹಾಗೆಲ್ಲ ಹೇಳಬಾರದು ಸವಿತಾ. ಎಷ್ಟಾದರೂ ವಯಸ್ಸಾದವರು. ಆಕ್ರೋಶ ಕಾರುವ ನಾನೇ ಮೌನ ವಹಿಸಿಲ್ಲವೇ...? ಅವರನ್ನು ನೋಡಿಕೊಳ್ಳುವುದು ಮಗನಾದವನ ಕರ್ತವ್ಯ ಅಲ್ಲವೇ...? ಸ್ವಲ್ಪ ದಿವಸ ಮಾತ್ರ. ಆಮೇಲೆ ನಾನೇ ವೃದ್ಧಾಶ್ರಮಕ್ಕೆ ಸೇರಿಸಿ ಬರುತ್ತೇನೆ. ಆಯ್ತಿಲ್ಲೋ...?''

ಮಗನ ನಿಷ್ಕರುಣೆಯ ಮಾತುಗಳಿಗೆ ಬೆರಗಾದರು. ತಾನು ಸಾಕಿದ ಮಗನೇ...? ಇದೇನು ಹೀಗೆ ಮಾತಾಡುತ್ತಿದ್ದಾನೇ...? ಅಣ್ಣನ ಮನೆಯಲ್ಲಿ ಬೀಸುವ ಕಲ್ಲಿನಲ್ಲಿ ಹೊಟ್ಟೆಗಿಲ್ಲದೆ ಬಿದ್ದ ಹುಡುಗನನ್ನು ಎತ್ತಿ ತಂದು ಹಾಕಿ ಸಲಹಿದ್ದಕ್ಕೆ ಇಂಥ ಮಾತೇ...? ಸೋಜಿಗಪಟ್ಟರು. ತಮ್ಮ ಭವಿಷ್ಯದ ಚಿಂತೆಯಲ್ಲಿ ಇನ್ನೂ ನಿಶ್ಶಕ್ತರಾದರು. ಸ್ನೇಹಿತನ ಶವ ಸಂಸ್ಕಾರಕ್ಕೆ ಬರದ ಜನ, ತಾನೇ ಕೂಲಿಗಳನ್ನು ಕರೆತಂದ ಪ್ರಸಂಗವನ್ನು ನೆನೆದು ಮರುಗಿದರು.




ಕಣ್ಣಲ್ಲಿ ನೀರು ತಂದು ತಮ್ಮ ಸ್ಥಿತಿಗೆ ನಿಟ್ಟುಸಿರು ಬಿಟ್ಟರು.

ಮನುಷ್ಯನಿಗೆ ಸಾವಾದರೂ ಏಕೆ ಬರುತ್ತದೆಯೋ...? ಸತ್ತ ನಂತರ ಶರೀರ ಮಣ್ಣಾಗುತ್ತದೆ. ಸುಂದರ ಎಂದುಕೊಳ್ಳುವ ಚರ್ಮ ಮಣ್ಣಾಗಿಬಿಡುತ್ತದೆ. ನಶ್ವರ ಎಂದು ತಿಳಿದ ಮೇಲೂ ವ್ಯಕ್ತಿ ಏನೂ ಮಾಡದವನಾಗುತ್ತಾನೆ. ಜ್ಞಾನೋದಯದ ನಂತರವೂ ಶರೀರದ ನಿರುಪಯುಕ್ತ ಸ್ಥಿತಿಯ ಅನುಭವ ಎಂಥದ್ದು...? ಕಾಲಜ್ಞಾನ ತಿಳಿದು ನಡೆಯುವ ಪುರುಷರೆಂಥವರೋ...

ಏಕಾಂಗಿ ಭಾವದಲ್ಲಿ ಹುಚ್ಚನಂತೆ ಕಂಠಪೂರ್ತಿ ಕುಡಿದು ತೂರಾಡುತ್ತಾ ಮನೆಗೆ ಬರುವುದು ಸೊಸೆಗೆ ಸಹನೆಯಾಗದು.

''ದಿನಾಲು ನೀವು ಕುಡಿದು ಬಂದು ಹಾಸಿಗೆ ಹಿಡಿದು ವಾಂತಿ ಮಾಡಿಕೊಂಡರೆ ಬಾಚೋರು ಯಾರು...? ನಿಮ್ಮ ಹೆಂಡತಿ ಮಾಡೋ ಕೆಲಸ ನಾನು ಮಾಡಬೇಕಾ...?''

ಮಡದಿಯ ನೆನಪು ತರಿಸಿ ಅವರ ಹೊಟ್ಟೆ ಉರಿಸಿದಳು. ಗಂಡ ಹೆಂಡತಿಯ ಏಕಾಂತಕ್ಕೆ ಮುದುಕ ಕಂಟಕವಾಗಿಯೇ ಪರಿಣಮಿಸಿದನೆಂದು ಗೋಪಾಲಪ್ಪನ ಅಸ್ತಿತ್ವದ ಬಗ್ಗೆಯೇ ಜುಗುಪ್ಸೆಗೊಂಡಳು. ಶೇಖರ ಕೆಲಸಕ್ಕೆಂದು ಮನೆ ಬಿಟ್ಟರೆ ಬರುವುದು ರಾತ್ರಿ. ಅಲ್ಲಿಯವರೆಗೆ ಹಾಸಿಗೆ ಹಿಡಿದ ಗೋಪಾಲಪ್ಪ ಮಾನಸಿಕವಾಗಿ ಭಾರದ ವಸ್ತು...!

ಹಿಂಸೆಗೆ ಒಳಗಾಗಿ ಪೀಡೆ ತೊಲಗಿಸಿದರೆ ಸಾಕು ಎನ್ನುವ ಭಾವನೆ ಬೆಳೆಸಿಕೊಂಡಳು.

''ನನ್ನ ಹೆಂಡತಿಯ ಕಾಲುಗುಣವಾದರೂ ನಿನ್ನಲ್ಲಿದ್ದಿದ್ದರೆ ಹೀಗೆ ಮಾತಾಡ್ತಿದ್ದಿಯಾ...? ನನ್ನ ಮಗನೇ ವೈರಿಯಾದ ಮೇಲೆ ನೀನೇನು ಮಾಡ್ತಿಯಾ ಬಿಡು'' ಎಂದರು; ನಡುಗುವ ಧ್ವನಿಯಲ್ಲಿ. ಅವಳಿಗೆ ಮಾತು ಸಹನೆ ಆಗಲಿಲ್ಲ.

''ಮಗನಿಗೆ ನೋಡಿಕೊಳ್ಳುವ ಹಾಗೆ ನೋಡಿಕೊಂಡಿದ್ದರೆ ಅವರು ವೈರಿ ಆಗ್ತಿದ್ರಾ...? ಹಾಗೆ ನೋಡಿದರೆ ನೀವೇ ಅವರಿಗೆ ಶತ್ರುವಾಗಿದ್ದೀರಾ...'' ಹಲ್ಲು ಕಡಿದಳು.

ಗೋಪಾಲಪ್ಪ ಬೇಸರಿಸಿಕೊಂಡು ನೋವನ್ನು ನುಂಗಿ ಹೊರಗೆ ಹೆಜ್ಜೆ ಹಾಕಿದರು.

ಗಂಡನಿಲ್ಲದ ವೇಳೆಯಲ್ಲಿಯೇ ಗೋಪಾಲಪ್ಪನವರಿಗೆ ಸೊಸೆಯ ಮಾತಿನ ಬಾಣದಿರಿತ. ಮಗ ಬಂದನೆಂದರೆ ನಾಟಕದ ಮಾತುಗಳ ಸಿಂಚನ. ತಾನೇ ಮುಂದೆ ನಿಂತು ಮದುವೆ ಮಾಡಿಸಿ ದೂರುವುದು ಯಾರಿಗೆ...?

ಮಧ್ಯಾಹ್ನ ಊಟಕ್ಕೆ ಬಂದ ಗಂಡನಲ್ಲಿ ದೂರಿದಳು.

''ನೋಡಿ ನಿಮ್ಮಪ್ಪ ಕುಡಿಯುವ ಚಟ ಬಿಡುವ ಹಾಗಿಲ್ಲ. ಹಣ ಕೇಳಿದರು, ಇಲ್ಲ ಎಂದೆ. ಅದಕ್ಕೆ ನಿಮ್ಮ ಹಳೆಯ ಪಾಕೆಟ್ ರೇಡಿಯೋ ತೆಗೆದುಕೊಂಡು ಹೋದರು...''

''ಹೌದಾ... ಅವರೇ ಕೊಡಿಸಿದ್ದಲ್ವಾ...? ಅದಕ್ಕೆ ಇನ್ನೆಷ್ಟು ಹಣ ಬಂದೀತು. ಟಿ. ವಿ. ಬಂದ ಮೇಲೆ ನಾವೇನು ಅದನ್ನು ಉಪಯೋಗಿಸುತ್ತಿಲ್ಲವಲ್ಲಾ ಬಿಡು...''

''ಹೀಗೆ ಹೇಳಿದರೆ ಹೇಗೆ...? ನಾಳೆ ನನ್ನನ್ನು ಮಾರಲು ಹೇಸಲ್ಲ ನಿಮ್ಮಪ್ಪ...''

''ಸವಿತಾ'' ಚೀರಿದ. ಒಂದು ಕ್ಷಣ ಸ್ತಬ್ಧಳಾದಳು. ಅಳುವ ಮುಖ ಮಾಡಿ – ''ನಿಮ್ಮ ಒಳ್ಳೆಯದಕ್ಕೇ ಹೇಳಿದ್ದು ... ನಾನೇ ಹೊರಗಿನವಳಾದೆ. ಇದೇ ರೀತಿ ಮುಂದುವರೆದರೆ ನಿಮ್ಮಪ್ಪನಿಂದ ಮರ್ಯಾದೆ ಹೋಗೋದು ನಂದಲ್ಲ, ನಿಮ್ಮದು...'' ಬೆಡ್‌ರೂಮ್ ಹೊಕ್ಕು ಹಾಸಿಗೆಗೆ ಅಡ್ಡಾದಳು.

ವಯಸ್ಸಾದಂತೆ ಗೋಪಾಲಪ್ಪನವರ ಮನಸ್ಸು ಸ್ಥಿಮಿತದಲ್ಲಿ ಉಳಿಯದಂತಾಯಿತು. ಯಾರೇ ಏನೇ ಮಾತಾಡಲಿ, ಅದು ತನಗೆ ಸಂಬಂಧಿಸಿದ್ದು ಎಂಬ ಸಂದೇಹ ಬಂದು ಸುಮ್ಮನೆ ಕೋಪ ಮಾಡಿಕೊಂಡು ಹುಚ್ಚರಂತಾಡುವ ಸ್ವಭಾವ ಬೆಳೆಯಿತು. ಸದಾ ಚಂಚಲ ಮನಸ್ಥಿತಿ... ನಕ್ಕರೆ ಸಹನೆ ಇಲ್ಲ. ಹಠ ಸಾಧಿಸುವ ಪ್ರವೃತ್ತಿ.

''ನಾನು ಅಷ್ಟು ಹೊರೆಯಾದೆನಾ...? ಸರಿಯಾಗಿ ನೋಡಿಕೊಳ್ಳೋ ಮನಸ್ಸು ಇಲ್ವಾ...? ಅಷ್ಟು ಕಷ್ಟನಾ ನಿಮಗೆ...? ಬಿಟ್ಟಿ ತಿಂದು ಕೊಬ್ಬಿದಿಯಲ್ಲಮ್ಮಾ. ನಾನೇ ಆರಿಸಿ ಮಗನಿಗೆ ತಂದುಕೊಂಡ ಕೃತಜ್ಞತಾ ಭಾವವೂ ಇಲ್ಲದ ರಾಕ್ಷಸಿಯಾದೆಯಲ್ಲಾ ನೀನು...'' ಎಂದು ಎದೆಯ ನಂಜು ಕಾರೇಬಿಟ್ಟರು ಗೋಪಾಲಪ್ಪ. ಸೊಸೆಯ ಪಿತ್ತ ನೆತ್ತಿಗೇರಿತು. ಹೇಗೂ ಮಗ ಮನೆಯಲ್ಲಿಲ್ಲ.

''ಲೇ ಮುದುಕ, ಜಾಸ್ತಿ ಮಾತಾಡಬೇಡ. ಹಾಕಿದ್ದು ತಿಂದು ಬಿದ್ದುಕೋ. ಯಾಕೆ ಭೂಮಿ ಮೇಲೆ ಇನ್ನೂ ಭಾರವಾಗಿದ್ದೀಯಾ...? ಬಾಚಿ ಹಾಕಿ ನನಗೂ ಸಾಕಾಗಿದೆ, ನೀರು ಕಾಯಿಸಲು ಮನೆಯಲ್ಲಿ ಒಂದು ಕಟ್ಟಿಗೆ ತುಂಡೂ ಇಲ್ಲ, ಕಾಡಿನಿಂದ ಆದಾದರೂ ತಾ. ತಿಂದ ಅನ್ನ ಜೀರ್ಣವಾಗಲಿ...'' ಹಿಡಿ ಶಾಪ ಹಾಕಿದಳು.

ಇಷ್ಟೊಂದು ಬಹಿರಂಗವಾಗಿ ಮಾತಾಡಿದ್ದು ಇದೇ ಮೊದಲ ಸಲ. ಇದಕ್ಕೂ ಜಾಸ್ತಿ ಕೊಳಕಾಗಿ ಗಂಡ ಹೆಂಡತಿ ತಮ್ಮೊಳಗೆ ಮಾತಾಡಿಕೊಂಡಿದ್ದುಂಟು. ಆದರೆ ಮುದುಕನ ಮುಂದೆ ಭಾವನೆಗಳನ್ನು ತೋರ್ಪಡಿಸಿರಲಿಲ್ಲ. ಸೊಸೆಯ ಮಾತಿನಿಂದ ಗೋಪಾಲಪ್ಪ ತೀರಾ ವಿಚಲಿತರಾದರು. ಚಂಚಲಚಿತ್ತರಾದರು. ಚಪ್ಪಲಿಯಿಂದ ಹೊಡೆದಂತಾಯಿತು. ನೊಂದುಕೊಂಡು ಊರ ಹೊರಗೆ ಬಂದರು. ನೀರು ಕಾಯಿಸಲು ಕಟ್ಟಿಗೆ... ತಿಂದ ಅನ್ನ ಜೀರ್ಣವಾಗಬೇಕಲ್ಲಾ...? ಇವಳೆಷ್ಟು ದಿನದವಳು ಎಂದು ನಿಡುಸುಯ್ದು ಕಾಡಿನಲ್ಲಿ ಅಲೆದು ಕಟ್ಟಿಗೆ ಆರಿಸಿ ರಾಶಿ ಹಾಕಿದರು. ನಾಲ್ಕು ಅಡಿ ಎತ್ತರಕ್ಕೆ ಜೋಡಿಸಿದರು. ಸುಸ್ತಾಗಿ ಮನೆಗೆ ಬಂದರು.

''ಬಂತು ಪೀಡೆ, ಇಷ್ಟೊತ್ತು ನೆಮ್ಮದಿಯಾಗಿದ್ದೆ. ಎಲ್ಲಿ ಕಟ್ಟಿಗೆ...? ಮೈ ಬಗ್ಗಿದರಲ್ಲವೇ...?'' ಸೊಸೆಯ ಹರಿತ ಮಾತುಗಳು.

ಅವಳೆಡೆ ಕೆಂಗಣ್ಣು ಬೀರಿ ನಿಸ್ಸಹಾಯಕತೆಗೆ ಮರುಗಿ ತುಟಿ ಅವುಚಿಕೊಂಡು ಅಡಿಗೆ ಮನೆಗೆ ಹೋದರು. ನೀರು ಕುಡಿದರು. ಹಾಯಿ ಎನಿಸಿತು.

ಗಂಡನ ಆಗಮನಕ್ಕಾಗಿ ಕಾತರಿಸುತ್ತಾ ಸವಿತಾ ಬೆಡ್‌ರೂಮ್‌ನಲ್ಲಿದ್ದವಳು ಚಹಾ ನೆನಪಾಗಿ ಎದ್ದು ಹೊರಗೆ ಬಂದಳು. ಯಾರೂ ಕಾಣಲಿಲ್ಲ. ಅನುಮಾನದೊಂದಿಗೆ ಅಡಿಗೆ ಮನೆ ಶೋಧಿಸಿದಳು. ಸದ್ದು ಕೇಳಿ ಹೊರಬಂದಳು. ಶೇಖರ್ ದಣಿದು ಬಂದವನು 'ಉಸ್' ಎಂದು ಕಟ್ಟೆಯ ಮೇಲೆ ಕುಳಿತು –

''ಒಂದು ಲೋಟ ನೀರು ಕೊಡೆ'' ಎಂದ.

''ಟೀ ಬೇಡ್ವಾ...?'' ಎನ್ನುತ್ತಾ ಸವಿತಾ ಒಳಹೋಗಿ ನೀರು ತಂದುಕೊಟ್ಟಳು.

''ಆಮೇಲೆ ಕುಡಿತ್ತೀನಿ.''

''ನಿಮ್ಮಪ್ಪ ಎಂಥ ಕೆಲಸ ಮಾಡಿದ್ದಾರೆ ಗೊತ್ತಾ...? ನಾನು ಹೇಳ್ತಾ ಇದ್ದರೂ ನಿಮಗೆ ಸದರ, ನಾಚಿಕೆಯಾಗಬೇಕು...'' ಪೀಠಿಕೆ ಹಾಕಿದಳು.

ನೀರು ಕುಡಿಯುತ್ತಿದ್ದವನು ಅವಳ ಮಾತು ಕೇಳಿ ತಿರುಗಿ ನೋಡಿ –

''ಅದೇನು ನಿಂದು, ಏನಾದರೊಂದು ಗೊಣಗುತ್ತಾ ಇರ್ತೀಯಾ...?''

''ಇದ್ದದ್ದು ಇದ್ದ ಹಾಗೆ ಹೇಳಿದರೆ ಅಂತಾರಲ್ಲಾ, ಹಾಗಾಯಿತು ನಿಮ್ಮ ಕತೆ...''

''ಇರಲಿ ಅದೇನು ಹೇಳು ಸರಿಯಾಗಿ...''

''ನಿಮ್ಮಪ್ಪ ಇವತ್ತು ಏನೂ ಸಿಗದಕ್ಕೆ ಸೀಮೆ ಎಣ್ಣೆಯನ್ನೇ ಮಾರಿ ಕುಡಿಯಲು ಹೋಗಿದ್ದಾರೆ...''

''ಅದು ಹೇಗೆ ಹೇಳ್ತಿಯಾ...?''

''ಮನೆಯಲ್ಲಿಯೇ ಇದ್ದೇನಲ್ಲಾ, ಈ ಪಾಪಿ ಕಣ್ಣುಗಳಿಂದ ನೋಡಬೇಕಲ್ಲಾ... ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ ಎದುರು ಮನೆ ಪುಟ್ಟ ನೋಡಿದ್ದಾನೆ ಕೇಳಿ.''

ಶೇಖರ್ ಎದುರುಮನೆ ಪುಟ್ಟನಿಗೆ ಕೂಗಿ ಕರೆದು ವಿಚಾರಿಸಿದ.

''ಕಾಡಿನ ಕಡೆ ಹೋದರು ಅಂಕಲ್.''

ಹಾಗಾದರೆ ಕುಡಿಯಲಿಕ್ಕಂತು ಅಲ್ಲ. ಯಾರಿಗೋ ಸಹಾಯಕ್ಕಾಗಿ ಹೋಗಿರಬೇಕು. ಯೋಚಿಸುತ್ತಾ ಮೇಲೆದ್ದ. ಯಾರಿಗೂ ತಿಳಿಸದೆ ಕಾಡಿನ ಕಡೆ ಹೆಜ್ಜೆ ಹಾಕಿದ. ಜಿಜ್ಞಾಸೆಯಲ್ಲಿ ಅಷ್ಟು ದೂರ ನಡೆದುಬಂದದ್ದು ವ್ಯರ್ಥವಾಗಲಿಲ್ಲ. ನಾಲ್ಕು ಅಡಿ ಎತ್ತರದ ಕಟ್ಟಿಗೆ ರಾಶಿ ಕಂಡು ಸೋಜಿಗ ಪಟ್ಟ. ಮರೆಯಲ್ಲಿ ನಿಂತುಕೊಂಡ.

ಗೋಪಾಲಪ್ಪ ಕ್ಷಣ ಹೊತ್ತು ತಲೆಗೆ ಕೈಹಚ್ಚಿ ಕುಳಿತಿದ್ದು ಏನೋ ಜ್ಞಾಪಿಸಿಕೊಂಡವರಂತೆ ಎದ್ದು ಕಟ್ಟಿಗೆ ರಾಶಿಗೆ ಕೈಜೋಡಿಸಿ ವಂದಿಸಿದರು. ಎರಡು ಸುತ್ತು ಹಾಕಿ ಆಕಾಶದೆಡೆ ನೋಡಿ ಮಂತ್ರ ಪಠಿಸಿದರು. ಶೇಖರನಿಗೆ ಇನ್ನೂ ಅಚ್ಚರಿ. ಅಪ್ಪನ ಚಲನವಲನ ಅರ್ಥವೇ ಆಗಲಿಲ್ಲ. ಕಿಸೆಯಿಂದ ಗೋಪಾಲಪ್ಪ ಕಡ್ಡಿಪೆಟ್ಟಿಗೆ ಹೊರತೆಗೆದರು. ಈಗಾಗಲೇ ಚಟ್ಟದೊಳಗೆ ಯಾರದೋ ಹೆಣ ಇರಬೇಕೇನೋ ಎಂಬ ಅನುಮಾನ ಶೇಖರನಿಗೆ ಬಂತು. ಸಾಯಂಕಾಲದ ಮಬ್ಬು ಬೆಳಕಿನಲ್ಲಿ ಯಾವುದೂ ಸ್ಪಷ್ಟವಾಗಲಿಲ್ಲ. ಒಣಗಿದ ಕಟ್ಟಿಗೆ ರಾಶಿಗೆ ಬೆಂಕಿ ಭಗ್ಗನೇ ಹೊತ್ತಿಕೊಂಡಿತು. ಉರಿಯಿಂದ ಇಡೀ ವಾತಾವರಣ ರಂಗುರಂಗಾಯಿತು.

ಅದರ ಬಿಸಿ ಮರದ ಮರೆಯ ಶೇಖರನಿಗೂ ತಾಗಿತು. ನೋಡು ನೋಡುತ್ತಿದ್ದಂತೆ ಗೋಪಾಲಪ್ಪ ಕಾಲುಗಳಿಗೆ ಬಲವಾದ ಶಕ್ತಿ ತುಂಬಿ ಸಿದಿಗಿಯೊಳಗೆ ಹಾರಿದರು. ಮಹಾ ಜ್ವಾಲೆ ಆವರಿಸಿಕೊಳ್ಳಲು ತಡವೇ...? ಬೆರಗಾದ. 'ಅಪ್ಪಾ' ಎಂದು ಚೀರಿ ಓಡಿ ಬಂದು ಬದುಕಿಸಲು ಒದ್ದಾಡಿದ. ಹಾರುವುದನ್ನು ನಿರೀಕ್ಷಿಸಿರಲಿಲ್ಲ. 'ಅಪ್ಪಾ' ಎಂದು ವಿಚಿತ್ರವಾಗಿ ನರಳಿದ. ಜ್ವಾಲೆಯ ಹತ್ತಿರಕ್ಕೆ ಹೋಗಲಾಗಲಿಲ್ಲ. ಝುಳಕ್ಕೆ ಬೆವೆತ. ರೋದಿಸಿದ. ಪ್ರಲಾಪಿಸಿದ.

''ನಿನ್ನನ್ನು ಚೆನ್ನಾಗಿ ನೋಡಿಕೊಳ್ಳದ ಪಾಪಿ ಮಗ ನಾನು. ನಮ್ಮಿಂದ ನೀನು ಆತ್ಮಹತ್ಯೆ ಮಾಡಿಕೊಳ್ಳುವಂತಾಯಿತು. ಯಾರ ಸಹಾಯವೂ ಅಪೇಕ್ಷಿಸದೆ ನೀನೇ ಸಿದಿಗಿ ನಿರ್ಮಿಸಿ ಯಾರಿಗೂ ತೊಂದರೆ ನೀಡದೆ ಸಂಪ್ರದಾಯಬದ್ಧನಾಗಿ ಇಹದ ಜಾತ್ರೆ ಮುಗಿಸಿದೆಯಲ್ಲಾ... ನಿನ್ನ ಸ್ವಾವಲಂಬನ ಬುದ್ಧಿಗೆ ತಲೆ ತಗ್ಗಿಸುವಂತಾಯಿತಲ್ಲಾ ಅಪ್ಪಾ... ನಿನ್ನ ಅಂತ್ಯಕ್ರಿಯೆ ನೀನೇ ಮಾಡಿಕೊಂಡೆಯಲ್ಲಾ...''

ಬೇಯುತ್ತಿರುವ ಅಪ್ಪನ ಶರೀರವನ್ನೇ ದಿಟ್ಟಿಸುತ್ತಾ ಭ್ರಾಂತನಾದ.

ಮನುಷ್ಯನ ಜೀವಕ್ಕೆ ಎಷ್ಟೆಲ್ಲ ಕವಚಗಳು...! ಗುಣಗಳ ಮೊತ್ತದಿಂದಲೇ ವ್ಯಕ್ತಿತ್ವವನ್ನು ಆವರಣಗೊಳಿಸುವ ಬದುಕಿನ ಈ ವೈಚಿತ್ರ್ಯ ಬಯಲಲ್ಲಿಯೇ ಶೂನ್ಯವಾಗಿ ಕರಗಿ ಒಂದಾಗಿ ಮಾಯವಾಗಿಬಿಡುವ ಈ ಅಸ್ಥಿರ ಜೀವನ ಅರ್ಥಕ್ಕೆ ಸಿಗದು... ಎಷ್ಟೊಂದು ನಿಗೂಢ ಆದರೂ ಅರ್ಥ ಗರ್ಭಿತ... ಯೋಚಿಸಿದಷ್ಟು ಬದುಕಿನ ಸತ್ಯದ ಶೋಧದಲ್ಲಿ ತಿರುಳೇ ಅರ್ಥವಾಗದಂತಾಗಿ ಅಲ್ಲಿಯೇ ಕುಸಿದ.

ಬಸವರಾಜ್ ಮಠಪತಿ (ಕ್ಷಿತಿಜ ಬೀದರ್)
ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ
ಹೆಬ್ಬೂರು - ೫೭೨ ೧೨೦

## ಪ್ರಶ್ನೆ ಅಂದರೆ ಇದೇನಾ....



ತರಕಾರಿ ಮಾರುಕಟ್ಟೆ ಆಸುಪಾಸು
ನಡೆಯುತಿದ್ದಳು ಅಜ್ಜಿ
ಮೊಮ್ಮಗಳ ಕೈ ಹಿಡಿದು.
ಕೊಳೆತ ಟೊಮ್ಯಾಟೋ,
ಕೊಚ್ಚೆ, ಕೆಸರು,
ಮಳೆ ನಿಂತ ನೀರು ಸಿಡಿಸುತ
ಕುಪ್ಪಳಿಸಿದ ಹುಡುಗಿಗೆ
ಅಜ್ಜಿ ಗದರಿದರೆ ತಮಾಷೆ:
ಯಾಕೆ ಹಿಂಗೆ ಆಡ್ತಾಳೆ ಅಜ್ಜಿ ?
''ಇಲ್ಲೆಲ್ಲ ಬೇಡ.
ನಿಮ್ಮೂರ ಕೋಟೆಗೆ ಕರೆದೊಯ್ಯಿ''
ಅಂತ ಪೀಡಿಸಿದ್ದಕ್ಕೆ
ಕರೆದೊಯ್ದಳು ಅಜ್ಜಿ ಗುಡ್ಡಕೆ.

ಆಳೆತ್ತರ ಬಂಡೆ ನಡುವೆ
ರಕ್ಕಸಿಯ ಅಟ್ಟಹಾಸದಂಗೆ
ಕೇಳಿದ ತನ್ನದೆ ದನಿಗೆ
ನಿಟ್ಟುಬಿದ್ದು ಸುಗೆತೆ ಕೇಳಿದಳು:
''ಮಾಯವಾಯ್ತಲ್ಲ ಈ ಚಣ
ಮಾರು ದನಿ. ಹಂಗೆ
ಹತ್ತು ಹಲವು ದನಿಗಳು ಹೂತು ಹೋಗಿವೆಯಾ
ಈ ದಿಕ್ಕು ಆ ದಿಕ್ಕಿನಲಿ ?''
ಅಜ್ಜಿಯೂ ತನ್ನ ಅಜ್ಜಿಗೆ
ಕೇಳಿ ಕಾಡುತಿದ್ದ
ಪ್ರಶ್ನೆ ಇದೇನೇ.

ಆರ್. ಪವಿತ್ರ ಪ್ರಿಯಭಾಷಿಣಿ
೧೨೦-ಎ, ಫಿಲ್ಟರ್ ಹೌಸ್ ರಸ್ತೆ, ಚಿತ್ರದುರ್ಗ - ೫೭೭ ೫೦೧

# ಲಂಡನ್ ರಂಗಭೂಮಿ ಮತ್ತು ರಾಯಲ್ ನ್ಯಾಷನಲ್ ಥಿಯೇಟರ್

ಡಾ॥ ಕೆ. ಮರುಳಸಿದ್ದಪ್ಪ

ಲಂಡನ್ ರಂಗಭೂಮಿಗೆ ಮತ್ತು ರಂಗಮಂದಿರಗಳಿಗೆ ಕನಿಷ್ಠ ಐದು ಶತಮಾನಗಳ ಅವಿಚ್ಛಿನ್ನ ಇತಿಹಾಸವಿದೆ. ಷೇಕ್ಸ್‌ಪಿಯರ್ ಕಾಲದಲ್ಲೇ ಲಂಡನ್ ರಂಗಭೂಮಿ ಅತ್ಯುನ್ನತ ಸ್ಥಿತಿಯಲ್ಲಿತ್ತು. ಥೇಮ್ಸ್ ನದಿಯ ದಕ್ಷಿಣ ದಂಡೆಯಲ್ಲಿ ಈಗಲೂ ಅಸ್ತಿತ್ವದಲ್ಲಿರುವ ಗ್ಲೋಬ್ ಥಿಯೇಟರ್ ಪ್ರದೇಶದಲ್ಲಿಯೇ ಷೇಕ್ಸ್‌ಪಿಯರ್ ತನ್ನ ನಾಟಕಗಳನ್ನು ಪ್ರಯೋಗಿಸಿದ್ದ. ರಂಗಮಂದಿರಗಳ ನಿರ್ಮಾಣ ಚಟುವಟಿಕೆಗೆ ಬಹು ದೊಡ್ಡ ಪ್ರಮಾಣದ ಪ್ರೋತ್ಸಾಹ ಲಂಡನ್ ಪ್ರದೇಶದಲ್ಲಿ ಮೊದಲ ಬಾರಿಗೆ ಸಿಕ್ಕಿದ್ದು ಷೇಕ್ಸ್‌ಪಿಯರ್‌ನ ಜೀವಿತಾವಧಿಯಲ್ಲಿಯೇ (೧೫೬೪-೧೬೧೬)ಆಗಿದ್ದು, ಮುಂದಿನ ಐದಾರು ಶತಮಾನಗಳಲ್ಲಿ ಇದು ಸ್ಪಷ್ಟವಾಗಿ ರೂಪು ಹೊಂದಿತು. ಥೇಮ್ಸ್ ನದಿಯ ದಕ್ಷಿಣ ದಂಡೆ ಆಗಿನ ಕಾಲದಲ್ಲಿಯೂ ಮನರಂಜನಾ ಕೇಂದ್ರವಾಗಿದ್ದು ರಂಗಮಂದಿರಗಳಲ್ಲದೆ ಜೂಜು ಕೇಂದ್ರಗಳು, ವೇಶ್ಯಾವಾಟಿಕೆಗಳು, ಕರಡಿಯೊಂದಿಗೆ ಕುಸ್ತಿಯಾಡುವವರು, ಇವೆಲ್ಲ ಚಟುವಟಿಕೆಗಳ ಅವಿಭಾಜ್ಯ ಅಂಗವಾಗಿಯೇ ನಾಟಕ ಬೆಳೆದಿದೆ. ಕುಡಿತ, ಹಾದರದೊಡನೆ ನಾಟಕದ ಸಂಬಂಧ ಲಂಡನ್ನಿನಲ್ಲಿ ಬಹಳ ಹಳೆಯದು. ಆದುದರಿಂದಲೇ ಹದಿನೇಳನೇ ಶತಮಾನದ ಮಡಿವಂತರು ಈ ಬಗೆಯ ಮನರಂಜನೆಗೆ ಕಟ್ಟುನಿಟ್ಟಾದ ನಿಯಮಗಳನ್ನು ಹಾಕಿದರು. ಹೀಗೆ ರಂಗಭೂಮಿ ಲಂಡನ್ನಿನಲ್ಲಿ ಐದಾರು ಶತಮಾನಗಳ ಅವಧಿಯ ಪ್ರೋತ್ಸಾಹ-ನಿರುತ್ಸಾಹಗಳ ಚಕ್ರಗತಿಯಲ್ಲಿ ಮುಂದುವರೆದಿದೆ. ಇಪ್ಪತ್ತನೆ ಶತಮಾನದ ಎರಡು ಮಹಾಯುದ್ಧಗಳು ಇದೇ ಸುಮಾರಿನಲ್ಲಿ ಹುಟ್ಟಿಕೊಂಡ ಟಾಕಿ ಸಿನಿಮಾಗಳು ರಂಗಭೂಮಿಯ ಹಿನ್ನಡೆಗೆ ಸ್ವಲ್ಪ ಕಾರಣವಾದರೂ ಸಮಕಾಲೀನ ಇಂಗ್ಲೆಂಡ್ ರಂಗಭೂಮಿ ಸಿನಿಮಾದೊಂದಿಗೆ ಹೋಲಿಸಿದರೆ ಇನ್ನೂ ಜನಪ್ರಿಯವಾಗಿಯೇ ಉಳಿದಿದೆ. ಲಂಡನ್ನಿನಲ್ಲಿ ಸುಮಾರು ಎಪ್ಪತ್ತು ಸುಸಜ್ಜಿತ ರಂಗಮಂದಿರಗಳಿದ್ದು ಪ್ರತಿನಿತ್ಯ ಅಲ್ಲಿ ಎರಡು ಪ್ರದರ್ಶನಗಳು ನಡೆಯುತ್ತವೆ. ಸೈಂಟ್ ಮಾರ್ಟಿನ್ ಥಿಯೇಟರ್‌ನಲ್ಲಿ 'ದಿ ಮೌಸ್ ಟ್ರ್ಯಾಪ್' ಎಂಬ ನಾಟಕ ಕಳೆದ ನಲವತ್ತು ವರ್ಷಗಳಿಂದ ಸತತವಾಗಿ ಪ್ರದರ್ಶನವಾಗಿ ಜಗತ್ತಿನಲ್ಲಿಯೇ ಒಂದು ದಾಖಲೆ ನಿರ್ಮಿಸಿದೆ. ಜಗತ್ತಿನೆಲ್ಲೆಡೆಯಿಂದ ಪ್ರಸಿದ್ಧ ನಾಟಕಕಾರರು, ನಿರ್ದೇಶಕರು, ತಂಡಗಳು ಇಲ್ಲಿನ ರಂಗಮಂದಿರಗಳಲ್ಲಿ ತಮ್ಮ ನಾಟಕ ಪ್ರದರ್ಶನಗೊಳ್ಳಬೇಕೆಂದು ಹಂಬಲಿಸುತ್ತಾರೆ. ದಕ್ಷಿಣ ಆಫ್ರಿಕಾದಿಂದ ಭಾರತದವರೆಗೆ ವಿವಿಧ ಸಂಸ್ಕೃತಿಯ ರಂಗ ವೈವಿಧ್ಯಗಳು ಎಲ್ಲ ಕಾಲದಲ್ಲಿಯೂ ಲಂಡನ್ ರಂಗಭೂಮಿಯಲ್ಲಿ ಅವಕಾಶ ಪಡೆಯುತ್ತಿವೆ. ಸುಸಜ್ಜಿತ ರಂಗಮಂದಿರಗಳಲ್ಲದೆ ಹೋಟೆಲ್‌ಗಳ ಅಂಗಳಗಳಲ್ಲಿ, ಚಿಕ್ಕ ಪುಟ್ಟ ಸಭಾಭವನಗಳಲ್ಲಿ, ಉದ್ಯಾನವನಗಳ ನಡುವಿನ ಬಯಲುಗಳಲ್ಲಿ ನಾಟಕ ಪ್ರದರ್ಶನಗಳಾಗುತ್ತವೆ. ಸಿನಿಮಾ ಮತ್ತು ದೂರದರ್ಶನಗಳ ಜೊತೆಯಲ್ಲಿಯೇ ನಾಟಕ ಸಮಾನವಾದ ಮಹತ್ವವನ್ನು ಉಳಿಸಿಕೊಳ್ಳಲು ಸಾಧ್ಯವಾಗಿದೆ. ನಾಟಕ ಪ್ರದರ್ಶನಗಳ ಟಿಕೆಟ್ ದರ ಐದರಿಂದ ಮೂವತ್ತು ಪೌಂಡುಗಳವರೆಗಿದ್ದು, ಏಜೆಂಟುಗಳ ಮೂಲಕ ಅಥವಾ ಅಂಚೆ ಹಾಗೂ ದೂರವಾಣಿ ಮೂಲಕವೂ ಸ್ಥಳ ಕಾಯ್ದಿರಿಸಬಹುದು. ಬಹು ಜನಪ್ರಿಯ ನಾಟಕವೊಂದಕ್ಕೆ ಮೂರು ತಿಂಗಳ ಮುಂಚೆ ಮುಂಗಡವಾಗಿ ಬುಕ್ ಮಾಡಬೇಕಾಗಬಹುದು. ಉಳಿದಂತೆ ಕೆಲವು ದಿನಗಳ ಮುಂಗಡವಾಗಿ ಮತ್ತು ರಂಗಮಂದಿರಗಳಲ್ಲೇ ಟಿಕೆಟ್ ಪಡೆಯಬಹುದು.

ಲಂಡನ್ನಿನ ರಂಗಭೂಮಿ ಮತ್ತು ರಂಗಮಂದಿರಗಳ ಜನಪ್ರಿಯತೆಗೆ ಬಹು ಮುಖ್ಯವಾದ ಕಾರಣ ನಾಟಕ ನೋಡುವ ಹವ್ಯಾಸ ಹಾಗೂ ಬ್ರಿಟಿಷರಿಗೆ ಅವರ ಸಂಸ್ಕೃತಿಯೊಂದಿಗೇ ಹಾಸುಹೊಕ್ಕಾಗಿ ಬೆಳೆದು ಬಂದಿರುವುದು ಮತ್ತು ಪ್ರಭುತ್ವವೂ ಬಹು ಹಿಂದಿನಿಂದಲೂ ರಂಗಭೂಮಿಗೆ ವಿಶೇಷ ಪ್ರೋತ್ಸಾಹ ನೀಡುತ್ತಿರುವುದೇ ಆಗಿದೆ. ಲಂಡನ್ನಿನ ಸುರಂಗ ರೈಲುಗಳು ಸಮಕಾಲೀನ ರಂಗಭೂಮಿ, ಸಂಗೀತ, ನೃತ್ಯ, ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ ಎಂದರೆ ಆಶ್ಚರ್ಯವಾಗಬಹುದು. ಈ ರೈಲು ವ್ಯವಸ್ಥೆ ಎಷ್ಟೊಂದು ಅದ್ಭುತವಾಗಿದೆಯೆಂದರೆ ಲಂಡನ್ ನಗರದ ಯಾವುದೇ ಭಾಗಕ್ಕೆ ಹತ್ತು ಹದಿನೈದು ನಿಮಿಷಗಳ ಪ್ರಯಾಣ ಮಾಡಿ ಸೇರಬಹುದಾಗಿದೆ. ಎರಡು ನಿಮಿಷಗಳಿಗಿಂತ ಹೆಚ್ಚಿಗೆ ರೈಲಿಗಾಗಿ ಕಾಯಬೇಕಾಗಿ ಬರುವುದಿಲ್ಲ. ರಾತ್ರಿ ಎಷ್ಟು ಹೊತ್ತಿಗೆ ಬೇಕಾದರೂ ಸಾರ್ವಜನಿಕರಿಗೆ ಈ ರೈಲುಗಳ ಸೌಕರ್ಯ ದೊರೆಯುತ್ತದೆ. ಹೀಗಾಗಿ ನಾಟಕ, ಸಂಗೀತ, ಸಿನಿಮಾ, ನೃತ್ಯ ಮುಂತಾಗಿ ಯಾವುದೇ ಮನರಂಜನೆಯ ಬಳಿಕ ಎಷ್ಟು ಹೊತ್ತಿನಲ್ಲಿ ಹೊರಟರೂ ಮನೆ ಸೇರಲು ಹತ್ತು ಹದಿನೈದು ನಿಮಿಷಗಳು ಸಾಕಾಗುತ್ತವೆ. ಇಡೀ ದೇಶದುದ್ದಕ್ಕೂ ಹೀಗೇ ಸಾರ್ವಜನಿಕ ವಾಹನ ಸೌಕರ್ಯ ಅದ್ಭುತ ರೀತಿಯಲ್ಲಿದೆ. ಪ್ರವಾಸ ಮಾಡುವುದು ಪಾಶ್ಚಾತ್ಯರ ಬದುಕಿನ ಬಹುಮುಖ್ಯ ಭಾಗವಾಗಿದ್ದು, ಪ್ರವಾಸವೆಂದರೆ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದ ರೊಂದಿಗೆ ಅಲ್ಲಿನ ಕಲಾ ಚಟುವಟಿಕೆಗಳಲ್ಲಿಯೂ ಭಾಗಿಯಾಗುವುದೆಂದು ಅವರು ನಂಬುತ್ತಾರೆ. ಆದುದರಿಂದ ಯಾವುದೇ ಪ್ರವಾಸಿ ಸಂಸ್ಥೆ ಬಸ್ ಅಥವಾ ವಿಮಾನ ವ್ಯವಸ್ಥೆ ಮಾಡುವಾಗ ತಮ್ಮ ಗ್ರಾಹಕರಿಗೆ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುವುದರೊಂದಿಗೆ ಆಯಾ ಪ್ರದೇಶದ ನಾಟಕ, ಆಪೇರಾ, ನೃತ್ಯಕೂಟಗಳಿಗೂ ಕರೆದೊಯ್ಯುತ್ತದೆ. ಹೀಗಾಗಿ ಲಂಡನ್‌ಗೆ ಬರುವ ಬಹುಪಾಲು ಪ್ರವಾಸಿಗಳು ತಮ್ಮ ಪ್ರವಾಸ ಕಾರ್ಯಕ್ರಮದ ಅಂಗವಾಗಿಯೇ ಒಂದು ನಾಟಕವನ್ನು ನೋಡುವುದು ವಾಡಿಕೆಯಾಗಿಬಿಟ್ಟಿದೆ. ಲಂಡನ್ ಸುತ್ತಮುತ್ತಲಿನ ಊರುಗಳಿಂದಲೂ ವಿಶೇಷ ಬಸ್ಸುಗಳು ಸಂಜೆ ಅಲ್ಲಿಂದ ಹೊರಟು ನಾಟಕ ಮುಗಿದ ಮೇಲೆ ವಾಪಸಾಗುತ್ತವೆ. ಉದಾಹರಣೆಗೆ, ವುಲ್ವರ್‌ಹ್ಯಾಂಪ್ಟನ್ನಿನ ನಾಟಕ ಪ್ರಿಯರನ್ನು ಸಂಜೆ ಲಂಡನ್ನಿಗೆ ಕರೆದೊಯ್ದು, ಊಟ ಹಾಕಿಸಿ ಬಳಿಕ ನಾಟಕ ತೋರಿಸಿ ಮಧ್ಯರಾತ್ರಿಯ ಹೊತ್ತಿಗೆ ವಾಪಸ್ ಕರೆತರುವ ಪ್ರವಾಸಿ ಬಸ್‌ಗಳ ವಿಶೇಷ ಸೌಕರ್ಯ ಇರುವಂತೆ ಎಲ್ಲ ಪಟ್ಟಣಗಳಿಂದಲೂ ಲಭ್ಯವಿದೆ. ಹೀಗೆ ಪ್ರವಾಸೋದ್ಯಮವೂ ಸಮಕಾಲೀನ ರಂಗಭೂಮಿಯ ಬೆಳವಣಿಗೆಗೆ ಕಾರಣವಾಗಿರುವುದಲ್ಲದೆ, ರಂಗಮಂದಿರಗಳನ್ನು ಕಟ್ಟಲು, ನಾಟಕ ಪ್ರಯೋಗಿಸಲು ಶ್ರೀಮಂತರೂ, ಕೈಗಾರಿಕೋದ್ಯಮಿಗಳೂ ಬೆಂಬಲವಾಗಿ ದೇಣಿಗೆ ನೀಡುತ್ತಾರೆ. ಸರ್ಕಾರವೂ ಈ ನಿಟ್ಟಿನಲ್ಲಿ ಹಿಂದೆ ಬಿದ್ದಿಲ್ಲ. ಲಾಟರಿ ವ್ಯವಹಾರದಿಂದ ಬರುವ ಸಂಪೂರ್ಣ ಹಣವನ್ನು ಕಲೆ ಮತ್ತು ಸಂಸ್ಕೃತಿಯ ಅಭಿವೃದ್ಧಿಗಾಗಿ ಸರ್ಕಾರ ಮೀಸಲಾಗಿಟ್ಟಿದೆ. ಲಾಟರಿ ಟಿಕೆಟ್ ಖರೀದಿಸುವ ಹಣ ಹೀಗೆ ಸಂಸ್ಕೃತಿ ವರ್ಧನೆಗಾಗಿ ಸದ್ವಿನಿಯೋಗವಾಗುವುದರಿಂದ ಸಾರ್ವಜನಿಕರೂ ಲಾಟರಿ ಟಿಕೆಟ್ ಕೊಳ್ಳುತ್ತಾರೆ. ಇದು ಕೇವಲ ಜೂಜುಕೋರರ ಹವ್ಯಾಸವಾಗದೆ ಸಂಸ್ಕೃತಿ ವರ್ಧನೆಗೆ ಪ್ರೋತ್ಸಾಹ ಕ್ರಿಯೆಯಂತಾಗಿದೆ. ಇದು ಎಲ್ಲರೂ ಇಷ್ಟಪಡುವ ಸಂತೋಷವಾಗಿದೆ. ಸರ್ಕಾರಕ್ಕೆ ನೂರಾರು ದಶಲಕ್ಷ ಪೌಂಡುಗಳ ವರಮಾನ ಪ್ರತಿ ವರ್ಷ ಬರುತ್ತಿದ್ದು ಅದೆಲ್ಲವನ್ನು ಸೂಕ್ತ ರೀತಿಯಲ್ಲಿ ಅರ್ಹ ಸಂಸ್ಥೆಗಳಿಗೆ ಆದ್ಯತೆಯನುಸಾರವಾಗಿ ನಾಟಕ-ಸಂಗೀತ-ಶಿಕ್ಷಣ ಇತ್ಯಾದಿ ಬಾಬಿಗೆ ಹಂಚಲು ಪ್ರತಿಷ್ಠಿತ ವ್ಯಕ್ತಿಗಳ ಒಂದು ಸಮಿತಿ ಇದ್ದು, ಸರ್ಕಾರ ಅವರ ನಿರ್ಧಾರದಂತೆ ಸಹಾಯ ದ್ರವ್ಯ ನೀಡುತ್ತದೆ. ಇಷ್ಟೆಲ್ಲ ಪ್ರೋತ್ಸಾಹಗಳಲ್ಲದೆ ದುಡ್ಡು ಕೊಟ್ಟು ನಾಟಕ ನೋಡುವ ಅಗಾಧ ಪ್ರಮಾಣದ ಪ್ರೇಕ್ಷಕರಿದ್ದಾರೆ. ಆದುದುರಿಂದ ಅನೇಕ ನಾಟಕಗಳು ಲಂಡನ್ನಿನಲ್ಲಿ ವರ್ಷಗಟ್ಟಲೆ ಪ್ರಯೋಗಗೊಳ್ಳುತ್ತವೆ. ಪತ್ರಿಕೆಗಳಿಗೆ ನಾಟಕ ತೋರಿಸಿ, ಜಾಹಿರಾತು ಕೊಟ್ಟು ಅಧಿಕೃತವಾಗಿ ನಾಟಕ ಪ್ರದರ್ಶನ ಆರಂಭವಾಗುವ ಮುನ್ನವೇ ಕಡಿಮೆ ದರದಲ್ಲಿ ತೋರಿಸುವ 'ಪ್ರಿವ್ಯೂ'ಗಳೇ ಎರಡು ಮೂರು ವಾರ ನಡೆಯುತ್ತವೆ. ಹೀಗೆ ಲಂಡನ್ ರಂಗಭೂಮಿಯ ಜನಪ್ರಿಯತೆ ಹಾಗೂ ಪ್ರತಿಷ್ಠೆಗೆ ಹಲವಾರು ಕಾರಣಗಳಿದ್ದು, ಈಗಾಗಲೇ ಸೂಚಿಸಿರುವಂತೆ ಇದೆಲ್ಲವೂ ಕೇವಲ ಕೆಲವು ವರ್ಷಗಳಿಂದ ನಡೆದುಕೊಂಡು

ಬಂದಿರುವುದಾಗಿರದೆ ಐದಾರು ಶತಮಾನಗಳ ಹಿನ್ನೆಲೆ ಹಾಗೂ ಪರಂಪರೆ ಹೊಂದಿರುವುದು ಮುಖ್ಯವಾದ ವಿಚಾರವೆನ್ನಬಹುದಾಗಿದೆ.

ಥೇಮ್ಸ್ ನದಿಯ ದಕ್ಷಿಣ ದಂಡೆಯಲ್ಲಿರುವ ''ರಾಯಲ್ ನ್ಯಾಷನಲ್ ಥಿಯೇಟರ್'' (ಚಿತ್ರ ನೋಡಿ) ಲಂಡನ್ನಿನ ಒಂದು ಪ್ರತಿಷ್ಠಿತ ರಂಗ ಸಂಕೀರ್ಣ. ಇದೊಂದು ಅರೆ ಸರ್ಕಾರಿ ಸ್ವಾಯತ್ತ ರಂಗ ಸಂಸ್ಥೆ. ೧೯೦೪ ರಿಂದ ಇಂತಹ 'ರಾಷ್ಟ್ರೀಯ ರಂಗ ಸಂಸ್ಥೆ' ಕಟ್ಟಬೇಕೆಂಬ ಹಂಬಲ ದಿಂದ ಪ್ರಯತ್ನ ನಡೆಸಿದ ರಂಗಭೂಮಿಯ ಪ್ರತಿಷ್ಠಿತರು ೧೯೪೯ರಲ್ಲಿ ಈ ಬಗೆಗೆ ಬ್ರಿಟಿಷ್ ಪಾರ್ಲಿಮೆಂಟ್ ಒಂದು ಮಸೂದೆ ಅಂಗೀಕರಿಸುವಲ್ಲಿ ಜಯಶೀಲರಾದರು. ಲಾರೆನ್ಸ್ ಒಲಿವಿಯರ್ ಎಂಬ ಮಹಾನ್ ನಟ ಈ ಸಂಸ್ಥೆಯ ಮೊದಲ ನಿರ್ದೇಶಕನಾಗಿ ನೇಮಕ ಹೊಂದಿ, ಥೇಮ್ಸ್ ನದಿಯ ದಂಡೆಯಲ್ಲಿ ಲಂಡನ್ನಿನ ಕೇಂದ್ರ ಸ್ಥಳದಲ್ಲಿ ವಿಶಾಲ ವಾದ ಜಾಗ ಪಡೆದು ಮೂರು ರಂಗಮಂದಿರಗಳು, ನೇಪಥ್ಯ ಗೃಹಗಳು, ಉಗ್ರಾಣಗಳು, ರಂಗತಾಲೀಮಿಗಾಗಿ ಕೊಠಡಿಗಳು, ಪುಸ್ತಕದಂಗಡಿ, ಬಾರ್, ಹೋಟೆಲ್, ವಿಹಾರ ಕೇಂದ್ರ, ಶಿಕ್ಷಣ ಕೇಂದ್ರ – ಇವೆಲ್ಲವೂ ಒಳಗೊಂಡಂತೆ ಭಾರಿ ಭಾರಿ ಸೌಧಗಳು ಇಲ್ಲಿ ಮೇಲೆದ್ದು ೧೯೭೬ರಲ್ಲಿ ಕೆಲಸ ಮುಗಿದು ಅಧಿಕೃತ ಕಟ್ಟಡಗಳಲ್ಲಿ ಚಟುವಟಿಕೆ ಆರಂಭಿಸಿದರು. ಹೊಸ ರಂಗ ಸಂಕೀರ್ಣಕ್ಕೆ ಬಂದು ಇಲ್ಲಿಗೆ ಇಪ್ಪತ್ತೈದು ವರ್ಷಗಳಾಗಿರುವುದರಿಂದ ಅದರ ನೆನಪಿಗಾಗಿ ಕಳೆದ ವರ್ಷ (೨೦೦೧) ಹಲವಾರು ಕಾರ್ಯಯೋಜನೆಗಳನ್ನು ಈ ಸಂಸ್ಥೆ ಹಮ್ಮಿಕೊಂಡಿತ್ತು. ಸುಮಾರು ಎಂಟುನೂರು ನೌಕರರು ಈ ಸಂಸ್ಥೆಯಲ್ಲಿ ದುಡಿಯುತ್ತಿದ್ದು, ಅವರಲ್ಲಿ ನೂರಾಇಪ್ಪತ್ತು ಮಂದಿ ನಟರಿದ್ದಾರೆ. ಉಳಿದವರಲ್ಲಿ ನೇಪಥ್ಯ, ವಸ್ತ್ರ ವಿನ್ಯಾಸ, ಬೆಳಕು, ಪ್ರಚಾರ, ವಾಸ್ತುಶಿಲ್ಪ, ಆಡಳಿತ ನಿರ್ವಹಣೆ ಮುಂತಾಗಿ ರಂಗಭೂಮಿಗೆ ಬೆಂಬಲ ಸಿಬ್ಬಂದಿಯವರಿದ್ದಾರೆ.

ಒಟ್ಟು ಮೂರು ರಂಗಮಂದಿರಗಳು ಈ ವಿಶಾಲವಾದ ಸಂಕೀರ್ಣದಲ್ಲಿದ್ದು ಒಟ್ಟಾಗಿ ೨,೫೦೦ ಆಸನಗಳ ಅನುಕೂಲವಿದೆ. ಇದೊಂದು 'ರಾಷ್ಟ್ರೀಯ ರಂಗ ಭೂಮಿ' ಯಾಗಿರುವುದರಿಂದ ಎಲ್ಲ ವಯಸ್ಸಿನ, ಎಲ್ಲ ಬಗೆಯ, ವಿವಿಧ ಸಂಸ್ಕೃತಿಯ ಪ್ರೇಕ್ಷಕರ ಅಭಿರುಚಿಗೆ ತಕ್ಕಂತೆ ವೈವಿಧ್ಯಮಯ ನಾಟಕಗಳ ಪ್ರಯೋಗ ಈ ಸಂಸ್ಥೆಯ ಗುರಿಯಾಗಿದೆ. ಮೂರು ರಂಗಮಂದಿರಗಳಲ್ಲಿ ವರ್ಷದುದ್ದಕ್ಕೂ ದಿನಕ್ಕೆರಡು ಪ್ರದರ್ಶನದಂತೆ ವಾರಕ್ಕೆ ಆರುದಿನ ರಂಗ ಪ್ರಯೋಗಗಳಿರುತ್ತವೆ. ಗ್ರೀಕ್ ದುರಂತ ನಾಟಕ ಹಾಗೂ ಷೇಕ್ಸ್‌ಪಿಯರ್ ನಾಟಕಗಳಿಂದ ಮೊದಲುಗೊಂಡು ಇಂದಿನ ಕಾಲದವರೆಗೂ ಗಂಭೀರ ಕೃತಿಗಳಿಂದ ಲಘು ಪ್ರಹಸನದವರೆಗೆ ನಾಟಕಗಳನ್ನು ಪ್ರಯೋಗಕ್ಕೆ ಆಯ್ಕೆ ಮಾಡಿಕೊಳ್ಳುತ್ತಾರೆ. ಮೂರು ರಂಗಮಂದಿರಗಳಿಗೆ ವಿಶಿಷ್ಟವಾದ ತಮ್ಮದೇ ಶೈಲಿ ಹಾಗೂ ಸ್ವಂತಿಕೆಯಿದೆ. 'ಒಲಿವಿಯರ್ ರಂಗಮಂದಿರ' ಬಹುದೊಡ್ಡದು, ಹಾಗೂ ಮೂರು ನಿಟ್ಟಿನಲ್ಲಿ ಚಾಚಿಕೊಂಡಿರುವ ರಂಗವೇದಿಕೆ ಹೊಂದಿದೆ. 'ಲಿತ್ತೇಲಿಯಾನ್ ರಂಗಮಂದಿರ' ಪ್ರೊಸಿನಿಯಂ ಮಾದರಿಯಲ್ಲಿದ್ದು ಸ್ವಲ್ಪಮಟ್ಟಿಗೆ ನಮ್ಮ 'ರವೀಂದ್ರ ಕಲಾಕ್ಷೇತ್ರ'ವನ್ನು ಹೋಲುವಂತಿದೆ. ''ಕೊತೆಸ್ಲೋ'' ಎಂಬುದು ಚಿಕ್ಕ ರಂಗಮಂದಿರವಾಗಿದ್ದು ಸಂಪೂರ್ಣವಾಗಿ ಹೇಗೆ ಬೇಕಾದರೆ ಹಾಗೆ ಸಜ್ಜು ಮಾಡಬಹುದಾದ ರೀತಿಯಲ್ಲಿದೆ. ರಂಗಮಂದಿರದ ವೇದಿಕೆ, ಆಸನಗಳು, ರಂಗಸಜ್ಜಿಕೆ ಎಲ್ಲವನ್ನು ಕಳಚಿ ಬೇಕಾದ ರೀತಿಯಲ್ಲಿ ಪುನರ್ ರೂಪಿಸುವ ಅನುಕೂಲ ಇಲ್ಲಿದೆ. ''ನ್ಯಾಷನಲ್ ಥಿಯೇಟರ್''ಗೆ ಹೊಂದಿಕೊಂಡಂತೆ ವಾಟರ್‌ಲೂ ರಸ್ತೆಯಲ್ಲಿ ಸ್ಟುಡಿಯೋ, ಸಂಶೋಧನೆ ಹಾಗೂ ಅಭಿವೃದ್ಧಿ ಕೇಂದ್ರಗಳಿವೆ. ಇಲ್ಲಿ ನಾಟಕಕಾರರು, ನಟರು, ನಿರ್ದೇಶಕರಿಗಾಗಿ ತರಬೇತಿ ಶಿಬಿರಗಳು ನಡೆಯುತ್ತವೆ. ಇದಲ್ಲದೆ ಪರಿಣತರಿಗಾಗಿ ಚಿಕ್ಕ ಸಂಜೆ ಪ್ರದರ್ಶನಗಳು, ಭಾಷಣ, ಸಂವಾದ, ಚರ್ಚೆ, ಮುಂತಾದ ಚಟುವಟಿಕೆಗಳಿರುತ್ತವೆ. 'ರಾಯಲ್ ನ್ಯಾಷನಲ್ ಥಿಯೇಟರ್ ರೆಪರ್ಟರಿ' ಇಡೀ ದೇಶದಲ್ಲಿ ಸಂಚರಿಸಿ ನಾಟಕ ಪ್ರದರ್ಶನ ನೀಡುವುದಲ್ಲದೆ, ವಿದೇಶಗಳಿಗೂ ಆಗಾಗ ಹೋಗಿ ನಾಟಕಗಳನ್ನಾಡುತ್ತಾರೆ. ಬೇರೆ ದೇಶಗಳಿಂದ ಬರುವ ತಂಡಗಳಿಗೂ ಆಶ್ರಯ ಹಾಗೂ ಆತಿಥ್ಯ ನೀಡುವ ಯೋಜನೆಯಿದೆ. ಜಗತ್ತಿನ ರಂಗ ಪರಂಪರೆಗೆ ತಮ್ಮ ದೇಶವು ನೀಡಿರುವ ಕಾಣಿಕೆಯನ್ನು ಮನದಟ್ಟು ಮಾಡುವ ಅನೇಕ ಕಾರ್ಯಕ್ರಮಗಳನ್ನು ಶಾಲಾ ಕಾಲೇಜುಗಳಲ್ಲಿ ನಡೆಸಿ, ರಂಗಭೂಮಿಯತ್ತ ಹೊಸ ಪ್ರತಿಭೆಗಳನ್ನು ಆಕರ್ಷಿಸುತ್ತಾರೆ. ವಿಶಾಲವಾದ ಈ ರಂಗ ಸಂಕೀರ್ಣದಲ್ಲಿ ನಾಟಕಗಳು ಮಾತ್ರವಲ್ಲದೆ ಸಂಗೀತ ಕಾರ್ಯಕ್ರಮಗಳು, ಹೋಟೆಲ್, ಬಾರ್, ಪುಸ್ತಕ ದಂಗಡಿಗಳಿದ್ದು ಹೊಸ ನಾಟಕಗಳ ವಾಚನಗಳಿರುತ್ತವೆ. ಪ್ರತಿದಿನ ಈ ಸಂಕೀರ್ಣವನ್ನು ಪರಿಚಯ ಮಾಡಿಕೊಡುವ ಮಾರ್ಗದರ್ಶಿ ಸಹಿತವಾದ ಒಂದು ಪ್ರವಾಸ ಕಾರ್ಯಕ್ರಮವೂ ಉಂಟು. ಮುಂಗಡ ಟಿಕೆಟ್ ಕಾಯ್ದಿರಿಸಿ ಒಂದು ಬೆಳಿಗ್ಗೆ ಇಂತಹ ಪ್ರವಾಸ ಕಾರ್ಯಕ್ರಮದಲ್ಲಿ ನಾವು ಭಾಗವಹಿಸಿದೆವು. ಮಾರ್ಗದರ್ಶಿಯೊಬ್ಬರ ನೇತೃತ್ವದಲ್ಲಿ ಮೂರೂ ರಂಗಮಂದಿರಗಳು, ಅವುಗಳ ಹಿಂದೆ ಕಟ್ಟಿರುವ ಭಾರಿ ಭಾರಿ ಉಗ್ರಾಣಗಳು, ಕಾರ್ಯಾಗಾರಗಳು, ಮೇಕಪ್ ಕೊಠಡಿಗಳು, ರಂಗತಾಲೀಮಿನ ಕೊಠಡಿಗಳು, ರಂಗ ಸಜ್ಜಿಕೆಯ ಭಾರಿ ಭಾರಿ ಸೆಟ್‌ಗಳು, ವಸ್ತ್ರವಿನ್ಯಾಸ ವಿಭಾಗ – ಮುಂತಾಗಿ ಸುಮಾರು ಒಂದೂವರೆ ತಾಸಿನ ಅವಧಿಯಲ್ಲಿ ಈ ಸಂಸ್ಥೆಯ ಪರಿಚಯ ಮಾಡಿಕೊಟ್ಟರು. ನಾವು ಅಂದು ಮಧ್ಯಾಹ್ನ 'ಲಿತ್ತೇಲಿಯಾನ್' ರಂಗಮಂದಿರದಲ್ಲಿ 'ಮದರ್ ಕ್ಲಾಪ್ಸ್, ಮಾಲಿ ಹೌಸ' ಎಂಬ ನಾಟಕ ಪ್ರದರ್ಶನ ನೋಡುತ್ತಿರುವುದಾಗಿ ಹೇಳಿದಾಗ, ಅದಕ್ಕೆ ಸಂಬಂಧಿಸಿದ ರಂಗ ಸಜ್ಜಿಕೆಯ ವಿವರಗಳನ್ನು ಪರಿಚಯಿಸಿದರು.

ನ್ಯಾಷನಲ್ ಥಿಯೇಟರ್ ಕಾರ್ಯಚಟುವಟಿಕೆ ಬಹು ವ್ಯಾಪಕವಾಗಿದ್ದು, ಪ್ರತಿ ಎರಡು ವಾರಗಳ ಅವಧಿಯಲ್ಲಿ ಸುಮಾರು ಒಂಬತ್ತು ವಿವಿಧ ಶೈಲಿಯ ನಾಟಕಗಳನ್ನು ಅವರು ಪ್ರಯೋಗಿಸಬೇಕಾಗುತ್ತದೆ. ಇದಕ್ಕಾಗಿ ಅವರಿಗೆ ನಟರ ಬಹು ದೊಡ್ಡ ತಂಡ ಬೇಕಾಗುತ್ತದೆ. ಪ್ರಯೋಗದ ಖರ್ಚೂ ಅಗಾಧವಾಗಿದೆ. ಇದರ ವರಮಾನದ ಮೂಲ ಹಾಗೂ ಅದರ ಸ್ವರೂಪವನ್ನು ಕುರಿತು ಕೇಳಿದ ಪ್ರಶ್ನೆಗೆ ಅವರ ಉತ್ತರ ನನ್ನ ಒಂದು ಸಂದೇಹವನ್ನು ಬಗೆಹರಿಸಿತು. ಪ್ರಯೋಗದಲ್ಲಿ ಶ್ರೇಷ್ಠತೆಗಾಗಿ ದುಡಿಯುವ ಯಾವುದೇ ರಂಗ ಭೂಮಿಯ ಅಸ್ತಿತ್ವ ಕೇವಲ ಪ್ರೇಕ್ಷಕರ ಹಣದಿಂದ ಸಾಧ್ಯವಿಲ್ಲವೆಂಬ ನನ್ನ ನಂಬಿಕೆಗೆ ಇದರಿಂದ ಪುಷ್ಟಿ ದೊರೆಯಿತು. ಏಕೆಂದರೆ ನಿರಂತರ ಪ್ರಯೋಗ ಹಾಗೂ ಪರಿಣತಿ ಸಾಧಿಸಲು ಅಗಾಧ ಪ್ರಮಾಣದ ಬೆಂಬಲ ರಂಗಭೂಮಿಗೆ ದೊರೆಯಬೇಕಾಗುತ್ತದೆ. ನ್ಯಾಷನಲ್ ಥಿಯೇಟರ್‌ನ ವರಮಾನದಲ್ಲಿ ಶೇಕಡಾ ಮುವ್ವತ್ತೊಂದು ಭಾಗ ಮಾತ್ರ ಟಿಕೆಟ್ ಮಾರಾಟದಿಂದ ಬರುವ ಹಣವನ್ನು ಅವಲಂಬಿಸಿದೆ. ಶೇಕಡಾ ಮುವ್ವತ್ತೇಳು ಭಾಗ ಸರ್ಕಾರ – ಅಂದರೆ, ಲಾಟರಿ, ಉದ್ಯಮದ ಮೂಲಕ ಸಿಗುವ ಬೆಂಬಲವಾದರೆ ಶೇಕಡಾ ಹದಿನಾಲ್ಕು ಶ್ರೀಮಂತರಿಂದ ದೇಣಿಗೆ, ಶೇಕಡಾ ಹದಿನೆಂಟು ಪುಸ್ತಕ ಪ್ರಕಾಶನ, ಮಾರಾಟ, ಹೋಟೆಲ್ ಇತ್ಯಾದಿ ಮೂಲಗಳಿಂದ ಬರುತ್ತದೆ. ಇದೆಲ್ಲವನ್ನು ವಿವರವಾಗಿ ಅಧ್ಯಯನ ಮಾಡಿ, ವಾರ್ಷಿಕ ಯೋಜನೆ ಸಿದ್ಧಪಡಿಸಿ, ಹಣ ಸಂಗ್ರಹಿಸಿ, ವಿತರಣೆ ಮಾಡುವ ಒಂದು ಪ್ರತ್ಯೇಕ ಸಿಬ್ಬಂದಿ ವರ್ಗವೇ ಅಲ್ಲಿ ಅಸ್ತಿತ್ವದಲ್ಲಿದೆ. ಷೇಕ್ಸ್‌ಪಿಯರನ ಹುಟ್ಟೂರು ಸ್ಟ್ರಾಟ್‌ಫರ್ಡ್ ಆನ್ ಏವನ್ ಪಟ್ಟಣದಲ್ಲಿರುವ 'ರಾಯಲ್ ಷೇಕ್ಸ್‌ಪಿಯರ್ ಕಂಪನಿ'ಯ ವರಮಾನವೂ ಸ್ವಲ್ಪಮಟ್ಟಿಗೆ ಇದೇ ಬಗೆಯಲ್ಲಿದೆ. ಷೇಕ್ಸ್‌ಪಿಯರ್ ಹುಟ್ಟೂರಿನಲ್ಲಿ ಮತ್ತು ಲಂಡನ್ನಿನಲ್ಲಿ ಈ ಸಂಸ್ಥೆಯ ರಂಗಮಂದಿರಗಳಿವೆ. ಅವರೂ ನಾಟಕ ಪ್ರಯೋಗಿಸಿ ಸಂಪಾದಿಸುವ ಹಣಕ್ಕೆ ಬೆಂಬಲವಾಗಿ ಅಗಾಧ ಪ್ರಮಾಣದ ದೇಣಿಗೆ ಹಾಗೂ ಲಾಟರಿ ಮೂಲದ ಅನುದಾನ ಪಡೆಯುತ್ತಾರೆ. ಇದನ್ನೆಲ್ಲಾ ನೋಡಿದಾಗ ನಮ್ಮ ದೇಶದಲ್ಲಿರುವ ಪ್ರಾಯೋಗಿಕ ರಂಗಭೂಮಿಗೆ ಸರ್ಕಾರದಿಂದ ಅಥವಾ ಸಾರ್ವಜನಿಕರಿಂದ ಸಿಗುತ್ತಿರುವ ಪ್ರೋತ್ಸಾಹ ಎಷ್ಟು ನಿರುತ್ಸಾಹದಾಯಕವಾಗಿದೆ ಎಂಬುದು ಮನದಟ್ಟಾಗುತ್ತದೆ. ರಂಗಭೂಮಿಯ ಸ್ವರೂಪವೇ ಕಾರಣವಾಗಿ ಅದು ಸಂಪೂರ್ಣವಾಗಿ ತನ್ನ ವರಮಾನದ ಮೇಲೆ ನಿಲ್ಲಲು ಸಾಧ್ಯವಿಲ್ಲವಾದುದರಿಂದ ಪಾಶ್ಚಾತ್ಯ ದೇಶಗಳಲ್ಲಿಯೂ ಈ ನಿಟ್ಟಿನಲ್ಲಿ ಸರ್ಕಾರ ಮತ್ತು ಸಾರ್ವಜನಿಕರು ಉದಾರವಾಗಿ ದೇಣಿಗೆ ಅನುದಾನ ನೀಡುತ್ತಾರೆಂಬುದು ಗಮನಿಸಬೇಕಾದ ಸಂಗತಿಯಾಗಿದೆ.

ಡಾ|| ಕೆ. ಮರುಳಸಿದ್ದಪ್ಪ
೧೩೭, ೧೨ನೇ ತಿರುವು, ಜೆ. ಪಿ. ನಗರ, ೨ನೇ ಹಂತ, ಬೆಂಗಳೂರು - ೫೬೦ ೦೭೮

# ಸಿದ್ಧಾಂತಗಳು ಸಾಯುತ್ತವೆಯೇ?

ಮೋಹನ್‌ಕೃಷ್ಣ ರೈ, ಕೆ.

**ಯಾ**ವುದೇ ಒಂದು ಸಿದ್ಧಾಂತ ತನ್ನ ಮೂಲರೂಪದಲ್ಲಿಯೇ ಉಳಿಯಲು ಸಾಧ್ಯವಿಲ್ಲ. ಏಕೆಂದರೆ ಪರಿಕಲ್ಪನೆಗಳು ನಿರಂತರ ಪರಿವರ್ತನೆಗೆ ಒಳಗಾಗುತ್ತಿರುತ್ತವೆ. ವಿಮರ್ಶೆ ಸಾಧ್ಯವಿದ್ದೆಡೆಗಳಲ್ಲೆಲ್ಲಾ ಸಿದ್ಧಾಂತವನ್ನು ಪ್ರವೇಶಿಸುತ್ತಿರುತ್ತದೆ. ಕೆಲವೊಂದು ಸಂದರ್ಭಗಳಲ್ಲಿ ಸಾಂಪ್ರದಾಯಿಕ ಹಿನ್ನೆಲೆಯ ಸಿದ್ಧಾಂತಗಳು ಸತ್ತೇಹೋದವು ಎಂಬುದಾಗಿ ಕಂಡು ಬಂದರೂ, ನಿಜಾರ್ಥದಲ್ಲಿ ಅವು ಇನ್ನೂ ಉಸಿರಾಡುತ್ತಲೇ ಇರುತ್ತವೆ. ಅವನ್ನು ಪೋಷಿಸುವ, ಪ್ರತಿನಿಧಿಸುವ ವರ್ಗ ಜೀವಂತವಾಗಿರುವುದೇ ಇದಕ್ಕೆ ಕಾರಣ. ಸಾಯಲೇ ಬೇಕಾದ ಕೆಲವು ಸಂಪ್ರದಾಯವಾದಿ ಸಿದ್ಧಾಂತಗಳು ಮತ್ತೆ ಮತ್ತೆ ಚಿಗುರಿಕೊಳ್ಳುತ್ತಿರುವುದು ಸಮಾಜದ ಹಿತದೃಷ್ಟಿಯಿಂದ ಆರೋಗ್ಯಕರ ಬೆಳವಣಿಗೆಯಲ್ಲ. ಸಂಪ್ರದಾಯವಾದಿ ವ್ಯವಸ್ಥೆ ಪ್ರತಿಪಾದಿಸುವ ಸಿದ್ಧಾಂತಗಳು ಯಜಮಾನಿಕೆ, ಶೋಷಣೆ, ಜಾತಿ ಮುಂತಾದ ಅನಿಷ್ಟಗಳನ್ನು ಸ್ಥಿರೀಕರಿಸುತ್ತವೆಯೇ ಹೊರತು ಅವುಗಳನ್ನು ಹೋಗಲಾಡಿಸುವತ್ತ ಚಿಂತನೆ ನಡೆಸುವುದಿಲ್ಲ. ಧರ್ಮದ ವೈಭವೀಕರಣದ ಚಿತ್ರಣ ನೀಡಿ, ಜನರನ್ನು ಮರುಳು ಮಾಡುವುದೇ ಈ ವ್ಯವಸ್ಥೆಯ ಮುಖ್ಯ ಉದ್ದೇಶ. ಅಂದರೆ ಚಾರಿತ್ರಿಕ ಪ್ರಜ್ಞೆಯ ಬದಲು ಧಾರ್ಮಿಕ ಪ್ರಜ್ಞೆಯನ್ನು ಮೂಡಿಸುವ ಕೆಲಸ. ಇದು ಅದೆಷ್ಟೋ ಸಂಘರ್ಷಗಳಿಗೆ ಕಾರಣವಾಗಿ ಮಾನವ ಕುಲ ಛಿದ್ರ, ಛಿದ್ರವಾಗುವಂತೆ ಮಾಡುತ್ತದೆ.

ಸಂಪ್ರದಾಯದ ಆಕ್ರಮಣಕಾರಿ ಧೋರಣೆಯನ್ನು ವಿರೋಧಿಸುವ ಆಧುನಿಕತೆ ಇನ್ನೂ ಸಂಪೂರ್ಣ ಯಶಸ್ಸನ್ನು ಕಂಡಿಲ್ಲ. ಆಧುನಿಕತೆ ಸಾಂಪ್ರದಾಯಿಕ ಆಧುನಿಕತೆಯಾಗಿ ಪರಿವರ್ತನೆಗೊಳ್ಳುತ್ತಿದೆ. ಸಾಮಾಜಿಕ ಮೌಲ್ಯಗಳ ಪರಿವರ್ತನೆಯಿಲ್ಲದ ಆಧುನಿಕತೆ ಸಂಪ್ರದಾಯಕ್ಕಿಂತಲೂ ಅಪಾಯಕಾರಿ. ಅದು ಆಧುನಿಕತೆಯ ಹೆಸರಿನಲ್ಲಿ ನಡೆಯುವ ಸಮಯಸಾಧಕತನವಾಗಿರುತ್ತದೆ. ಇರುವ ವ್ಯವಸ್ಥೆಗೆ ಪರ್ಯಾಯ ವ್ಯವಸ್ಥೆಯನ್ನು ನಿರ್ಮಿಸುವುದೇ ಆಧುನಿಕತೆಯ ಉದ್ದೇಶ. ಆದರೆ ಅದು ತಾಂತ್ರಿಕ ಆಧುನೀಕರಣಕ್ಕಷ್ಟೇ ಸೀಮಿತಗೊಳ್ಳದೆ ಸಾಂಸ್ಕೃತಿಕ ಹಿನ್ನೆಲೆಯಲ್ಲೂ ವ್ಯಾಖ್ಯಾನಗೊಳ್ಳಬೇಕಾಗುತ್ತದೆ. ಸಮಾಜದ ಎಲ್ಲ ವರ್ಗದ ಜನರ ಬದುಕನ್ನು ಪ್ರತಿನಿಧಿಸದ ಸಿದ್ಧಾಂತಗಳು ಮರುಹುಟ್ಟು ಪಡೆಯಲು ಪ್ರಯತ್ನಿಸುವುದು ಹೊಸ ದೃಷ್ಟಿಕೋನವನ್ನು ಹೊಂದಿರುವ ಸಿದ್ಧಾಂತಗಳನ್ನು ಗೊಂದಲಕ್ಕೀಡುಮಾಡುತ್ತವೆ. ಇದು ಸಂಪ್ರದಾಯ ಮತ್ತು ಆಧುನಿಕತೆಗಳೆಂಬ ಭಿನ್ನ ದೃಷ್ಟಿಕೋನಗಳನ್ನು ಹೊಂದಿರುವ ಸಿದ್ಧಾಂತಗಳಿಗೆ ಸಂಬಂಧಿಸಿದ್ದಾಗಿದೆ.

ಆಧುನಿಕ ಸಂದರ್ಭದಲ್ಲಿ ಸಂಪ್ರದಾಯವನ್ನೂ ಆಧುನಿಕಗೊಳಿಸುವ ಪ್ರಕ್ರಿಯೆಗಳು ನಡೆಯುತ್ತಿರುತ್ತವೆ. ಇದು ಸಂಪ್ರದಾಯದ ಪುನರುಜ್ಜೀವನ ಪ್ರಯತ್ನವಾಗಿ ಕಂಡುಬರುತ್ತದೆ. ಈ ಪ್ರಯತ್ನವನ್ನು ನಡೆಸುವವರು ಸಂಪ್ರದಾಯದ ಚೌಕಟ್ಟಿನಲ್ಲಿದ್ದುಕೊಂಡೇ ಆಧುನಿಕತೆಯ ಸೌಲಭ್ಯ, ಸವಲತ್ತುಗಳನ್ನು ಪಡೆದುಕೊಳ್ಳುತ್ತಿರುತ್ತಾರೆ. ಇದು ರಾಜಪ್ರಭುತ್ವದ ಸಂದರ್ಭದಿಂದ ಕಂಪ್ಯೂಟರ್ ಯುಗದವರೆಗೂ ನಿರಂತರವಾಗಿ ನಡೆದುಬಂದಿದೆ. ಇದರಿಂದಾಗಿ ವಿಜ್ಞಾನ, ತಂತ್ರಜ್ಞಾನ ಕ್ಷೇತ್ರಗಳಲ್ಲಿ ಎಷ್ಟೇ ಪ್ರಗತಿಯನ್ನು ಸಾಧಿಸಿದರೂ ಅವುಗಳಿಗೆ ಸಂಪ್ರದಾಯದ ಛಾಪನ್ನು ಒತ್ತಿ ಅಧೀನಗೊಳಿಸಲಾಗುತ್ತದೆ. ಇದು ಸಂಪ್ರದಾಯದ ಹೈಜಾಕ್ ಲಕ್ಷಣವನ್ನು ತೋರಿಸುತ್ತದೆ. ಅದೇ ರೀತಿ ತಮ್ಮ ಅಸ್ತಿತ್ವಕ್ಕೇ ಅಪಾಯ ಬಂತು ಅಂದಾಗ ಸಂಪ್ರದಾಯಸ್ಥರು ಯಾವ ತ್ಯಾಗಕ್ಕೂ ಸಿದ್ಧರಿರುತ್ತಾರೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಸಂಸ್ಕೃತ ಭಾಷೆ.

ದೇವ ಭಾಷೆ ಎಂದೇ ಪರಿಗಣಿಸಲ್ಪಟ್ಟಿದ್ದ ಸಂಸ್ಕೃತ ಭಾಷೆ ಇಂದು ಜನಭಾಷೆಯಾಗುವತ್ತ ಹೊರಟಿದೆ. ಇದು ಸಂಸ್ಕೃತದ ಅಳಿವು-ಉಳಿವಿನ ಪ್ರಶ್ನೆಯಾಗಿದೆ. ಸಂಸ್ಕೃತ ವಿರೋಧಿಗಳಿಗಂತು ಸಂಸ್ಕೃತ ಒಂದು ಮೃತ ಭಾಷೆ. ಸಾಮಾನ್ಯ ಜನಸಮುದಾಯ ಸಂಸ್ಕೃತ ಭಾಷೆಯ ಅಧ್ಯಯನಕ್ಕೆ ಅರ್ಹರಲ್ಲ ಎನ್ನುವ ವೈದಿಕ ಮೂಲದ ವಾದ ಇಂದು ಸೋಲೊಪ್ಪಿಕೊಂಡಂತೆ ಕಂಡುಬರುತ್ತದೆ. ಸಂಸ್ಕೃತ ಭಾಷೆ, ಅದರಲ್ಲಿ ರಚನೆಗೊಂಡ ಕೃತಿಗಳು, ಸಾರಲ್ಪಟ್ಟ ಸಂದೇಶಗಳು, ನಿರ್ಮಿಸಲ್ಪಟ್ಟ ಜಾತಿಯಾಧಾರಿತ ಸಾಮಾಜಿಕ ವ್ಯವಸ್ಥೆ ಅಪ್ರಸ್ತುತವಾಗಬಾರದು ಎನ್ನುವ ಎಚ್ಚರಿಕೆ ಈ ವರ್ಗಕ್ಕಿದೆ. ಇದರರ್ಥ ಸಂಸ್ಕೃತ ಭಾಷೆಯನ್ನು ಸಾರಾಸಗಟಾಗಿ ತಿರಸ್ಕರಿಸಬೇಕು ಎಂದಲ್ಲ. ಯಾವ ಭಾಷೆಯೂ ಕೆಟ್ಟದ್ದಲ್ಲ. ಆದರೆ ಕೆಲವೊಂದು ಜಾತಿ / ವರ್ಗಗಳು ತಮ್ಮ ಹಿತಾಸಕ್ತಿಗಳ ಈಡೇರಿಕೆಗೆ ಭಾಷೆಯನ್ನು ವೇದಿಕೆಯನ್ನಾಗಿಸಿ, ಸ್ವಂತ ಆಸ್ತಿಯನ್ನಾಗಿ ಪರಿವರ್ತಿಸಿಕೊಂಡಾಗ ಸಹಜವಾಗಿಯೇ ಆ ವರ್ಗಗಳ ಜೊತೆಗೆ ಭಾಷೆಯ ಮೇಲೂ ತಿರಸ್ಕಾರ ಭಾವನೆ ಮೂಡುತ್ತದೆ.




ಇಲ್ಲಿನ ಒಟ್ಟು ತೀರ್ಮಾನವೆಂದರೆ, ಒಂದು ಸಿದ್ಧಾಂತ ತನ್ನ ಅಸ್ತಿತ್ವಕ್ಕೆ ಕೊಡಲಿಯೇಟು ಬೀಳುತ್ತದೆ ಎಂದಾಗ ಯಾವ ತ್ಯಾಗಕ್ಕೂ ಸಿದ್ಧವಾಗುತ್ತದೆ ಎನ್ನುವುದು.

ಯಾವುದೋ ಒಂದು ಚಾರಿತ್ರಿಕ ಕಾಲಘಟ್ಟದಲ್ಲಿ ಹುಟ್ಟಿಕೊಂಡ ಸಿದ್ಧಾಂತ ಕ್ರಮೇಣ ಸಮಯ, ಸಂದರ್ಭಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ಸಮಾಜ ಬದಲಾಗುತ್ತಿರುತ್ತದೆ. ಬದಲಾವಣೆ ಇದ್ದಾಗ ಮಾತ್ರ ಸಮಕಾಲೀನತೆ ಮತ್ತು ವಾಸ್ತವತೆ ರೂಪುಗೊಳ್ಳಲು ಸಾಧ್ಯ. ಒಂದೇ ಸಿದ್ಧಾಂತದ ಹಲವಾರು ಶಾಖೆಗಳಲ್ಲಿ ಮೂಲಸಿದ್ಧಾಂತವನ್ನು ಪರಿಷ್ಕರಿಸುವ ಕೆಲಸ ನಡೆಯುತ್ತಿರುತ್ತದೆ. ಪರಿಷ್ಕರಿಸುವ ಕೆಲಸ ಆಯಾ ಹಂತಗಳಲ್ಲಿ ನಡೆಯದಿದ್ದರೆ ಮೂಲಸಿದ್ಧಾಂತ ಅಪ್ರಸ್ತುತವೆನಿಸಿಬಿಡುತ್ತದೆ. ಸುಮಾರು ನೂರೈವತ್ತು ವರ್ಷಗಳ ಹಿಂದೆ ಯೂರೋಪಿನಲ್ಲಿ ಹುಟ್ಟಿಕೊಂಡ ಮಾರ್ಕ್ಸ್‌ವಾದ ಇಂದು ಅನೇಕ ನೆಲೆಗಳಲ್ಲಿ ಪರಿಷ್ಕರಣೆಗೆ ಒಳಗಾಗಿದೆ. ಯೂರೋಪಿನ ಕೈಗಾರಿಕಾ ಜಗತ್ತಿನ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಮಾರ್ಕ್ಸ್‌ವಾದವನ್ನು ಯಥಾಪ್ರಕಾರ ಭಾರತದ ಸಂದರ್ಭಕ್ಕೆ ಅನ್ವಯಿಸಲು ಸಾಧ್ಯವಾಗುವುದಿಲ್ಲ. ಆದರೆ ಕೆಲವೊಂದು ಪರಿಷ್ಕರಣೆಗಳನ್ನು ಮಾಡಿದಾಗ ಅದು ಭಾರತವನ್ನೂ ಸಂಕೇತಿಸುತ್ತಿರುತ್ತದೆ. ಡಿ. ಡಿ. ಕೊಸಾಂಬಿ, ಆರ್. ಎಸ್. ಶರ್ಮಾ, ಡಿ. ಎನ್. ಝಾ, ಹರ್ಬನ್ಸ್ ಮುಖಿಯ ಮುಂತಾದ ಅನೇಕ ಮಾರ್ಕ್ಸ್‌ವಾದಿ ಚರಿತ್ರಕಾರರು ಕಾರ್ಲ್ ಮಾರ್ಕ್ಸ್ ಪ್ರತಿಪಾದಿಸಿದ ಏಶಿಯಾದ ಉತ್ಪಾದನಾ ವಿಧಾನ ಮತ್ತು ಪೌರ್ವಾತ್ಯ ನಿರಂಕುಶವಾದ ಸಿದ್ಧಾಂತಗಳನ್ನು ಒಪ್ಪಿಕೊಳ್ಳಲಿಲ್ಲ. ಏಕೆಂದರೆ ಅವು ಭಾರತವನ್ನು ಪ್ರತಿನಿಧಿಸುತ್ತಿರಲಿಲ್ಲ. ಇವರೆಲ್ಲರೂ ಮಾರ್ಕ್ಸ್‌ನ ಚಾರಿತ್ರಿಕ ವಸ್ತುವಾದಿ ವಿಶ್ಲೇಷಣೆಯನ್ನು ಬೆಂಬಲಿಸಿದರು. ರಾಮ ಮನೋಹರ್ ಲೋಹಿಯಾ ಅವರು ಮಾರ್ಕ್ಸ್ ವಾದವನ್ನು ಭಾರತದ ಸಂದರ್ಭಕ್ಕೆ ಸರಿಹೊಂದುವಂತೆ ಪರಿಷ್ಕರಿಸಿಕೊಂಡರು. ಜಾತಿ ಮತ್ತು ವರ್ಗಗಳೆರಡೂ ಚರಿತ್ರೆಯಲ್ಲಿ ಒಟ್ಟೊಟ್ಟಿಗೆ ಇರುತ್ತವೆ ಹಾಗೂ ಭಾರತದ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ಜಾತಿ ಮತ್ತು ವರ್ಗಗಳೆರಡರ ಪ್ರತಿನಿಧಿಯೂ ಆಗಿರುತ್ತಾನೆ ಎನ್ನುವುದು ಲೋಹಿಯಾ ವಾದ. ಲೋಹಿಯಾ ಅವರು ಭಾರತದ ಕಮ್ಯೂನಿಸ್ಟ್ ಪಕ್ಷಗಳ ರಾಜಕೀಯ ಕೇಂದ್ರಿತ ಮಾರ್ಕ್ಸ್‌ವಾದವನ್ನು ತಿರಸ್ಕರಿಸಿದರು. ಹೀಗೆ ಒಂದು ಸಿದ್ಧಾಂತ ತನ್ನೊಳಗೆ ಹಲವಾರು ಶಾಖೆಗಳಾಗಿ ವಿಭಜನೆಗೊಂಡು ಹಲವಾರು ಬಗೆಗಳಲ್ಲಿ ಪರಿಷ್ಕರಣೆಗೆ ಒಳಗಾಗುತ್ತಿರುತ್ತದೆ.

ಲೋಹಿಯಾ ಅವರನ್ನು ಪ್ರಸ್ತಾಪಿಸುವಾಗ ಚರ್ಚಿಸಲೇಬೇಕಾದ ವಿಚಾರವೆಂದರೆ ಸಮಾಜವಾದ. ಲೋಹಿಯಾ ಭಾರತದಲ್ಲಿ ಸಮಾಜವಾದದ ಹುಟ್ಟು, ಬೆಳವಣಿಗೆ ಮತ್ತು ಅವನತಿ ಈ ಮೂರೂ ಅವಸ್ಥೆಗಳನ್ನು ಕಂಡವರು. ಸಮಾಜವಾದದ ಕುರಿತು ಪಾಶ್ಚಿಮಾತ್ಯ ಜಗತ್ತಿನಿಂದ ಪ್ರಭಾವಿತರಾದ ಲೋಹಿಯಾ ಅದನ್ನು ಯಶಸ್ವಿಯಾಗಿ ಭಾರತದಲ್ಲಿ ಹುಟ್ಟುಹಾಕಿದರು. ಸಮಾಜವಾದವು ರಾಜಕೀಯ ಪಕ್ಷಗಳ ಮೂಲಕ

ಗುರುತಿಸಿಕೊಳ್ಳದೆ, ಜನರ ಮೂಲಕ ಬೆಳೆಯಬೇಕು ಎನ್ನುವ ತೀರ್ಮಾನ ಲೋಹಿಯಾರವರದ್ದಾಗಿತ್ತು. ಬುಡಕಟ್ಟು ಜನರು, ದಲಿತರು, ಮಹಿಳೆಯರು, ಅಲ್ಪಸಂಖ್ಯಾತರು ಮುಂತಾದ ತೀರ ನಿರ್ಲಕ್ಷ್ಯಕ್ಕೆ ಒಳಪಟ್ಟ ಜನವರ್ಗದ ಪ್ರತಿನಿಧಿಯಾಗಿ ಸಮಾಜವಾದಿ ಸಿದ್ಧಾಂತ ರೂಪುಗೊಂಡಿತು. ಆದರೆ ಭಾರತದಲ್ಲಿ ಭದ್ರ ನೆಲೆಯೊಂದನ್ನು ಕಂಡುಕೊಳ್ಳುವಲ್ಲಿ ಅದು ಯಶಸ್ವಿಯಾಗಲಿಲ್ಲ. ಅದೊಂದು ಸಿದ್ಧಾಂತವಾಗಿ ಹಾಗೂ ರಾಜಕೀಯ ಪಕ್ಷವಾಗಿ ಸಂಪೂರ್ಣ ಸೋಲನ್ನು ಕಂಡಿತು. ಈ ಸೋಲಿಗೆ ಸಮಾಜವಾದಿ ನೇತಾರರಲ್ಲಿ ಮತ್ತು ಸಮಾಜವಾದಿ ಚಿಂತನಾಕ್ರಮದಲ್ಲಿ ಕಾರಣವನ್ನು ಹುಡುಕಬೇಕಾಗುತ್ತದೆ. ಇದರರ್ಥ ಸಮಾಜವಾದಿ ಸಿದ್ಧಾಂತವಾಗಲಿ, ಸಮಾಜವಾದಿ ಪಕ್ಷವಾಗಲಿ ಅಥವಾ ಸಮಾಜವಾದದ ಕುರಿತು ಮಾತನಾಡುವವರಾಗಲಿ ನಮ್ಮಲ್ಲಿ ಇಲ್ಲ ಎಂದಲ್ಲ, ಇಲ್ಲಿರುವ ಪ್ರಶ್ನೆಯೆಂದರೆ ಶೋಷಿತ ವರ್ಗದ ಜನರ ಪರವಾಗಿ ಹುಟ್ಟಿಕೊಂಡ ಸಿದ್ಧಾಂತ ಅವನತಿಯತ್ತ ಸಾಗಿರುವುದು. ಇದು ಸಿದ್ಧಾಂತಗಳು ಆಯಾ ಸಂದರ್ಭ ಮತ್ತು ಪರಿಸ್ಥಿತಿಗಳಲ್ಲಿ ಪಡೆದುಕೊಳ್ಳುವ ಸ್ವರೂಪಕ್ಕೆ ಉತ್ತಮ ನಿದರ್ಶನವಾಗಿದೆ. ಜಾತಿ ಪದ್ಧತಿಯೇ ಸಂವಿಧಾನವಾಗಿರುವ ಭಾರತದಂಥ ದೇಶದಲ್ಲಿ ಯಾವುದೇ ಹೊಸ ಚಿಂತನಾಕ್ರಮ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವುದು ತೀರ ಕಷ್ಟಕರ.

ಸಂಸ್ಕೃತಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಂದು ಅನೇಕ ಸಿದ್ಧಾಂತಗಳು ಹುಟ್ಟಿಕೊಂಡಿವೆ. ಏಕ ಸಂಸ್ಕೃತಿ ಮತ್ತು ಬಹು ಸಂಸ್ಕೃತಿ ವ್ಯಾಖ್ಯಾನಗಳು ಮಾಡರ್ನಿಸಂ ಮತ್ತು ಪೋಸ್ಟ್ ಮಾಡರ್ನಿಸಂ ಎಂಬ ವಾದಗಳ ಮೂಲಕ ವಿದ್ವತ್ ಲೋಕವನ್ನು ಆವರಿಸಿವೆ. ಆಧುನಿಕ ವಾದವು ವಿಜ್ಞಾನ ಹಾಗೂ ತಂತ್ರಜ್ಞಾನಗಳನ್ನು ಆಧಾರವನ್ನಾಗಿಟ್ಟುಕೊಂಡು ಏಕರೂಪದ ಜಾಗತಿಕ ಸಂಸ್ಕೃತಿಯನ್ನು ಬಿಂಬಿಸಿದರೆ, ಆಧುನಿಕೋತ್ತರ ವಾದವು ಸಾಮಾಜಿಕ ವೈವಿಧ್ಯತೆ, ವಿಭಿನ್ನತೆಗಳನ್ನು ಒಪ್ಪಿಕೊಂಡು ಸಂದರ್ಭಾನುಸಾರವಾಗಿ ಸಂಸ್ಕೃತಿಯನ್ನು ವ್ಯಾಖ್ಯಾನಿಸುತ್ತದೆ. ಒಂದು ಇನ್ನೊಂದನ್ನು ವಿರೋಧಿಸುವ, ತಮ್ಮದೇ ಸೈದ್ಧಾಂತಿಕ ನೆಲೆಗಳ ಮೂಲಕ ಸಂಸ್ಕೃತಿ ಅಧ್ಯಯನ ನಡೆಸುವ, ವಿಮರ್ಶಿಸುವ ಬೌದ್ಧಿಕ ಕಸರತ್ತು ಪ್ರಪಂಚದಾದ್ಯಂತ ಕಂಡುಬರುತ್ತಿದೆ. ಇದು ಯಾವುದೇ ಒಂದು ಸಿದ್ಧಾಂತವನ್ನು ಕುರಿತು ಮರು ಆಲೋಚಿಸುವ ಕೆಲಸವಷ್ಟೇ ಅಲ್ಲದೆ ಹೊಸದನ್ನು ನಿರ್ಮಿಸುವ ಪ್ರಯತ್ನವೂ ಆಗಿದೆ. ಇಲ್ಲಿ ಹಳೆಯದಕ್ಕೆ ಹೊಸದು ಎನ್ನುವ ಪಟ್ಟ ಕಟ್ಟುವ ಹಾಗೂ ಹೊಸದನ್ನು ಹಳೆಯದನ್ನಾಗಿಸುವ ಪ್ರಯತ್ನಗಳು ನಡೆಯುತ್ತಿರುತ್ತವೆ. ಅಂದರೆ, ಒಟ್ಟು ಚರ್ಚೆ ಸಂಪ್ರದಾಯ ಮತ್ತು ಆಧುನಿಕತೆಗಳ ಸುತ್ತ ಹೆಣೆದುಕೊಂಡಿರುತ್ತದೆ. ಪ್ರಚಲಿತದಲ್ಲಿರುವ ಸಿದ್ಧಾಂತಗಳ ಅಥವಾ ಆಲೋಚನೆಗಳ ಮರು ಆಲೋಚನೆ ನಡೆದಾಗ ಮಾತ್ರ ಹೊಸ ಸಿದ್ಧಾಂತಗಳ ನಿರ್ಮಾಣ ಸಾಧ್ಯ. ಇದು ನಿರಂತರ ನಡೆಯುವ ಪ್ರಕ್ರಿಯೆಯಾಗಿದ್ದು ಹಳೆಯ ಮತ್ತು ಹೊಸ ಚಿಂತನೆಗಳು ಪ್ರವೇಶ ಪಡೆಯುತ್ತಿರುತ್ತವೆ. ಹೊಸ ಸಿದ್ಧಾಂತದ ಹುಟ್ಟು ಹಳೆಯ ಸಿದ್ಧಾಂತಗಳನ್ನು ಆಧರಿಸಿಕೊಂಡಿರುತ್ತದೆ. ಹೊಸದು ಎನ್ನುವಾಗ ಹಳೆಯದು ಇರಲೇಬೇಕಾಗುತ್ತದೆ. ಹಳೆಯ ಚಿಂತನೆಗಳು ಪ್ರಸ್ತುತವಲ್ಲದಿದ್ದರೂ ಹೊಸ ಚಿಂತನಾಕ್ರಮ ರೂಪುಗೊಳ್ಳಲು, ಸಾಬೀತುಪಡಿಸಲು ಅವುಗಳ ಬಳಕೆಯಾಗುತ್ತದೆ. ಒಂದು ಇನ್ನೊಂದನ್ನು ಸಂಪೂರ್ಣವಾಗಿ ಹೊರಗಿಡುವುದಿಲ್ಲ. ಒಂದು ಚಿಂತನಾಕ್ರಮ ಇರುವುದರಿಂದಲೇ ಇನ್ನೊಂದರ ಕುರಿತು ಯೋಚನೆ ಮಾಡಲು ಸಾಧ್ಯವಾಗುತ್ತದೆ. ಆದರೆ ಈ ಚಿಂತನಾಕ್ರಮ ಹೊಂದಾಣಿಕೆಯ ಸ್ವರೂಪದ್ದಾಗಿರುವುದಿಲ್ಲ.

ಭಾರತದ ಚರಿತ್ರೆಯ ಅಧ್ಯಯನ ನಡೆಸುವಾಗ ಪರಸ್ಪರ ಪೂರಕವಾಗಿದ್ದ ಹಾಗೂ ವಿರೋಧಿಸುವ ನೆಲೆಗಳಿಂದ ಕೂಡಿದ ಅನೇಕ ಸಿದ್ಧಾಂತಗಳು ಕಂಡುಬರುತ್ತವೆ. ಉದಾಹರಣೆಗೆ, ವೈದಿಕ, ಬೌದ್ಧ, ಜೈನ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ವೀರಶೈವ, ಸೂಫಿ ಮುಂತಾದವು. ಇವೆಲ್ಲವೂ ಚರಿತ್ರೆಯ ನಿರ್ಣಾಯಕ ಕಾಲಘಟ್ಟಗಳಲ್ಲಿ ಹುಟ್ಟಿಕೊಂಡಿರುವ ಸಿದ್ಧಾಂತಗಳು. ಬೌದ್ಧ ಮತ್ತು ಜೈನ ಸಿದ್ಧಾಂತಗಳು ವೈದಿಕಶಾಹಿಯನ್ನು ವಿರೋಧಿಸಿ ಹುಟ್ಟಿಕೊಂಡವಾದರೂ ವೈದಿಕ ಧರ್ಮದ ಹಿಡಿತದಿಂದ ಸಂಪೂರ್ಣವಾಗಿ ಪಾರಾಗುವಲ್ಲಿ ವಿಫಲವಾದವು. ಅದೇ ರೀತಿ ವೀರಶೈವ ಸಿದ್ಧಾಂತ ಕ್ರಾಂತಿಯ ಅಲೆಗಳನ್ನೇ ಎಬ್ಬಿಸಿದರೂ ಅದು ತಾತ್ಕಾಲಿಕವಾಗಿ ಪರಿಣಮಿಸಿತೇ ಹೊರತು ಶಾಶ್ವತ ಪರಿಣಾಮಗಳನ್ನು ಬೀರುವಲ್ಲಿ ವಿಫಲವಾಯಿತು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ವಿಚಾರಗಳು ಸ್ವೀಕೃತ ಸಾಂಪ್ರದಾಯಿಕತೆಯ ಚೌಕಟ್ಟಿನಲ್ಲಿಯೇ ಉದಯಿಸಿದವು. ಅಸಮಾನ ಸಾಮಾಜಿಕ ವ್ಯವಸ್ಥೆಗೆ ಬದಲೀ ವ್ಯವಸ್ಥೆಯನ್ನು ಹುಟ್ಟುಹಾಕುವಲ್ಲಿ ಅವು ಯಶಸ್ವಿಯಾಗಲಿಲ್ಲ. ಇಸ್ಲಾಂ ಧರ್ಮದ ಕುರಿತಾಗಿ ಚರ್ಚಿಸುವಾಗ ಬಹುಮುಖ್ಯವಾಗಿ ಕಂಡುಬರುವ ವಿಚಾರ ಸೂಫಿ ವಾದ. ವಿಶಾಲಾರ್ಥದಲ್ಲಿ ಇದೊಂದು ಇಸ್ಲಾಂ ಧರ್ಮದೊಳಗಿನಿಂದಲೇ ಹುಟ್ಟಿಕೊಂಡ ವಾದ. ಆದರೆ ಸೂಫಿ ಪಂಥವು ತನ್ನದೇ ಆದ ಹಲವಾರು ವಿಶಿಷ್ಟ ಗುಣಗಳನ್ನು ಹೊಂದಿರುವುದು ಕಂಡುಬರುತ್ತದೆ. ಯಾವುದೇ ಒಂದು ವಿಚಾರಧಾರೆಗೆ ಅದರೊಳಗಿನಿಂದಲೇ ವಿರೋಧಗಳು ಯಾವ ರೀತಿ ಹುಟ್ಟಿಕೊಳ್ಳುತ್ತವೆ ಎನ್ನುವುದಕ್ಕೆ ಸೂಫಿ ಪಂಥ ಉತ್ತಮ ಉದಾಹರಣೆಯಾಗಿದೆ. ಸೂಫಿ ಪಂಥವು ಇಸ್ಲಾಂ ಧರ್ಮದ ಹಲವಾರು ವಿಚಾರಗಳನ್ನು ತಿರಸ್ಕರಿಸುತ್ತದೆ ಹಾಗೂ ಅವುಗಳಿಗೆ ಪರ್ಯಾಯ ಮಾರ್ಗಗಳನ್ನು ಸೂಚಿಸುತ್ತದೆ.

**ಶಾಂತಿ**

ಬೇಕು ಶಾಂತಿ
ಸ್ಮಶಾನ ಶಾಂತಿಯಲ್ಲ,
ಜೀವಂತ
ಶಾಂತಿ !

ಸಿ.ಪಿ.ಕೆ.
೨೨೬೫/೧೯, 'ಭಾರತಿ', ವಿನಾಯಕನಗರ, ಮೈಸೂರು-೧೨

ಇಸ್ಲಾಂ ಮೂಲಭೂತವಾದಿಗಳ ಪ್ರಕಾರ ಸೂಫಿಗಳು ಧರ್ಮ ವಿರೋಧಿಗಳು. ಏಕೆಂದರೆ ಸೂಫಿಗಳು ವಿರೋಧಿಸುವುದು ಇಸ್ಲಾಂ ಧರ್ಮದ ಮೂಲಭೂತವಾದಿತನವನ್ನು. ಯಾವುದೇ ಒಂದು ಧರ್ಮವನ್ನು ಕಟ್ಟುನಿಟ್ಟಾಗಿ, ಶಿಸ್ತುಬದ್ಧವಾಗಿ ಜಾರಿಗೊಳಿಸುವ ಪ್ರಯತ್ನ ಮಾಡಿದಾಗ ಅದು ಜನತೆಯ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಹಾಗೂ ಆ ಮೂಲಕ ತಾನು ಸ್ವತಂತ್ರವಾಗಿ ವ್ಯವಹರಿಸುವ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವುದು ಸಹಜ. ಇಂಥ ಪ್ರಕ್ರಿಯೆಗಳನ್ನು ವಿರೋಧಿಸುವ ಪಂಥಗಳು ಇಸ್ಲಾಂ ಧರ್ಮದಲ್ಲಷ್ಟೇ ಅಲ್ಲದೆ ವೈದಿಕ ಮತ್ತು ಕ್ರಿಶ್ಚಿಯನ್ ಧರ್ಮದೊಳಗೂ ಕಂಡುಬರುತ್ತವೆ. ಆದರೆ ಧಾರ್ಮಿಕ ಮೂಲಭೂತವಾದ ಎಲ್ಲೂ ಸಡಿಲಗೊಂಡಂತೆ ಕಂಡುಬರುವುದಿಲ್ಲ. ವೈದಿಕೀಕರಣ, ಇಸ್ಲಾಮೀಕರಣ ಮುಂತಾದ ಪ್ರಕ್ರಿಯೆಗಳು ಇದಕ್ಕೆ ಉದಾಹರಣೆಗಳಾಗಿವೆ. ಪುರೋಹಿತ ವರ್ಗದ ಸಂಕುಚಿತ ಮನೋಭಾವ ಹಾಗೂ ರಾಜಕೀಯ ವ್ಯಕ್ತಿಗಳ ಪ್ರವೇಶ ಧರ್ಮವನ್ನು ಅಧಿಕಾರ ಚಲಾವಣೆಯ ಮಾಧ್ಯಮವನ್ನಾಗಿ ಮಾಡಿತು. ಈ ಪ್ರಕ್ರಿಯೆ ಧಾರ್ಮಿಕ ಬಿಕ್ಕಟ್ಟನ್ನು ಸೃಷ್ಟಿಸಿ ಸಮಾಜಕ್ಕೆ ಶಾಶ್ವತ ಹಾನಿಯನ್ನುಂಟುಮಾಡಿದೆ. ಜನರ ದೈನಂದಿನ ಬದುಕಿಗೆ ನೆರವಾಗದ ಇಂಥ ಧಾರ್ಮಿಕ ಸಿದ್ಧಾಂತಗಳು ವರ್ತಮಾನವನ್ನು ನಿಯಂತ್ರಿಸುತ್ತ, ಭವಿಷ್ಯವನ್ನು ನಿರ್ಧರಿಸುವತ್ತ ಹೆಜ್ಜೆ ಹಾಕುತ್ತಿರುತ್ತವೆ. ಇವು ಸಾಯುವ ಬದಲು ಹೊಸ ಹೊಸ ಅವತಾರಗಳನ್ನು ಎತ್ತುತ್ತಿರುತ್ತವೆ.

ಸಿದ್ಧಾಂತಗಳು ಸ್ವಂತಿಕೆಯನ್ನು ಬಿಟ್ಟಾಗ ಅಥವಾ ತಮ್ಮ ಮೂಲಸ್ವರೂಪವನ್ನು ಮರೆತಾಗ ಅತ್ತ ಬದುಕಲೂ ಆಗದ, ಇತ್ತ ಸಾಯಲೂ ಆಗದ ಸ್ಥಿತಿಯನ್ನು ತಲುಪುತ್ತವೆ. ಇಂಥ ಸಿದ್ಧಾಂತಗಳಿಂದ ಸಾಮಾಜಿಕ ಪರಿವರ್ತನೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಸಿದ್ಧಾಂತಗಳು ತಾವು ಹುಟ್ಟಿಕೊಂಡ ಸಮಯ, ಸಂದರ್ಭ ಹಾಗೂ ರೂಪಿಸಿಕೊಂಡ ಚೌಕಟ್ಟಿಗೆ ಬದ್ಧವಾಗಿರದೆ ಇರುವುದೇ ಅವುಗಳ ಆಕರ್ಷಣೆ ಕ್ಷೀಣಿಸಲು ಮೂಲ ಕಾರಣ. ಪ್ರತಿಯೊಂದು ಸಿದ್ಧಾಂತವೂ ತನ್ನ ವಿಸ್ತರಣೆಯ ವಿವಿಧ ಹಂತಗಳಲ್ಲಿ ಪರಿಷ್ಕರಣೆಗೆ ಒಳಗಾಗಲೇಬೇಕಾಗುತ್ತದೆ. ಇಲ್ಲಿ ಪರಿಷ್ಕರಣೆಯೆಂದರೆ ಇನ್ನೊಂದರ ಅನುಕರಣೆ ಎಂದಲ್ಲ. ಅದು ಸಿದ್ಧಾಂತಗಳನ್ನು ಪ್ರಸ್ತುತಗೊಳಿಸುವ ವಿಧಾನ. ಪ್ರಸ್ತುತಗೊಳಿಸುವುದೆಂದರೆ ಆಯಾ ಸಂದರ್ಭದ ಸಾಮಾಜಿಕ ಸ್ಥಿತಿ-ಗತಿಗಳನ್ನು ಪ್ರತಿನಿಧಿಸುವುದು ಹಾಗೂ ಆ ಮೂಲಕ ಪರಿವರ್ತನೆಗೆ ಅವಕಾಶ ಮಾಡಿಕೊಡುವುದು ಎಂದರ್ಥ. ಹಾಗಾದಾಗ ಮಾತ್ರ ಯಾವುದೇ ಸಿದ್ಧಾಂತ ಜೀವಂತವಾಗಿರಲು ಸಾಧ್ಯ. ಜೀವಂತಿಕೆಯನ್ನು ಕಳೆದುಕೊಂಡ ಸಿದ್ಧಾಂತಗಳು ಮೇಲೆ ಹೇಳಿದಂತೆ ಸತ್ತುಹೋಗುವುದಿಲ್ಲ. ಅವು ಅರೆಪ್ರಜ್ಞಾವಸ್ಥೆಯಲ್ಲಿರುತ್ತವೆ. ಅರೆಪ್ರಜ್ಞಾವಸ್ಥೆಯಲ್ಲಿರುವ ವ್ಯಕ್ತಿಗೆ ಹೆಚ್ಚಿನ ಆರೈಕೆ ಮಾಡಲಾಗುತ್ತದೆ ಹಾಗೂ ಅವನ ಸುತ್ತಮುತ್ತ ಸಂಬಂಧಿಕರೇ ಹೆಚ್ಚಿನ ಸಂಖ್ಯೆಯಲ್ಲಿ ಸೇರಿರುತ್ತಾರೆ. ಅದೇ ರೀತಿ ಅರೆಪ್ರಜ್ಞಾವಸ್ಥೆಯಲ್ಲಿರುವ ಸಿದ್ಧಾಂತಗಳ ಸುತ್ತ ಅವುಗಳನ್ನು ಪ್ರತಿನಿಧಿಸುವ ವರ್ಗಗಳು ಸುತ್ತುವರಿದುಕೊಂಡಿರುತ್ತವೆ. ಅವುಗಳಿಗೆ ಮತ್ತೆ ಚೈತನ್ಯ ತುಂಬಲು ಹಾಗೂ ಚಿಗುರಿಕೊಳ್ಳಲು ಬೇಕಾದ ಎಲ್ಲ ಪರಿಕರಗಳನ್ನು ಅವು ಒದಗಿಸಿಕೊಡುತ್ತವೆ. ಹೀಗಾಗಿ ಅಂಥ ಸಿದ್ಧಾಂತಗಳು ಪೂರ್ಣಪ್ರಜ್ಞಾವಸ್ಥೆಯನ್ನು ತಲುಪದಿದ್ದರೂ ಸಾಯುವುದಂತೂ ಇಲ್ಲ.

**ಮೋಹನ್‌ಕೃಷ್ಣ ರೈ, ಕೆ.**
ಅಧ್ಯಾಪಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩೨೭೬

# ನನ್ನ ಪಯಣದ ಸಂಗಾತಿ

ಇಂಗ್ಲಿಷ್ : ರಸ್ಕಿನ್ ಬಾಂಡ್

ನನ್ನ ರೈಲು ಕಿತ್ತೂರನ್ನು ತಲುಪಿದಾಗ ಒಬ್ಬಳು ಹುಡುಗಿ ಬೋಗಿಯ ಒಳಗೆ ಪ್ರವೇಶಿಸಿದಳು. ಇದುವರೆಗೆ ಬೋಗಿಯ ಒಳಗೆ ನನ್ನ ವಿನಃ ಮತ್ತಾರೂ ಇರಲಿಲ್ಲ. ರೈಲಿನ ಹೊರಗಡೆ ನಿಂತಿರುವ ವ್ಯಕ್ತಿಗಳು ಆಕೆಯ ಸೌಖ್ಯ ಮತ್ತು ರಕ್ಷಣೆಯ ಬಗ್ಗೆ ಬಹಳಷ್ಟು ಚಡಪಡಿಸುತ್ತಿದ್ದರು. ಬಹುಶಃ ಆ ದಂಪತಿಗಳು ಆಕೆಯ ತಂದೆ ತಾಯಿಗಳಿರಬೇಕು, ಮಹಿಳೆಯಂತೂ ಬಹಳ ಕಾತುರತೆಯಿಂದ.

''ಕಿಟಕಿಯ ಹೊರಗೆ ಇಣುಕಬೇಡ, ನಿನ್ನ ಲಗ್ಗೇಜುಗಳನ್ನು ನಿನ್ನ ಬಳಿಯೇ ಇಟ್ಟುಕೋ. ಪರಿಚಯವಿಲ್ಲದವರ ಹತ್ತಿರ ಮಾತನಾಡ ಬೇಡ'' ಎಂದು ಎಚ್ಚರಿಕೆ ಕೊಡುತ್ತಿದ್ದಳು. ರೈಲಿನ ಗಾರ್ಡ್ ಶೀಟಿ ಹಾಕಿದಾಗ ದಂಪತಿಗಳು ಹುಡುಗಿಗೆ ವಿದಾಯ ಹೇಳಿದರು. ರೈಲು ಚಲಿಸಲು ಪ್ರಾರಂಭಿಸಿತು.

ನಾನು ಹುಟ್ಟು ಕುರುಡನಾದುದರಿಂದ ಕತ್ತಲೊಂದನ್ನು ಬಿಟ್ಟು ಮತ್ತೇನನ್ನೂ ಸವಿಯುವಂತಿರಲಿಲ್ಲ. ನನ್ನ ಕುರುಡುತನವನ್ನು ಗೋಪ್ಯ ವಾಗಿಟ್ಟುಕೊಂಡು ಪ್ರಯಾಣಿಕರ ಮಿತ್ರತ್ವವನ್ನು ಸಂಪಾದಿಸುವುದು ನನ್ನ ಅಭ್ಯಾಸ. 'ಈಗ ಕಂಪಾರ್ಟ್‌ಮೆಂಟ್ ಒಳಗಡೆ ಪ್ರವೇಶಿಸಿದ ಹುಡುಗಿ ಹೇಗಿರಬಹುದು ?' ನನ್ನಷ್ಟಕ್ಕೆ ನಾನೇ ಊಹಿಸಿಕೊಳ್ಳುತ್ತಿದ್ದೆ. ಅವಳು ಚಪ್ಪಲಿ ತೊಟ್ಟಿದ್ದಾಳೆಂಬು ದನ್ನು ಅವಳು ನಡೆಯುವಾಗ ಅವಳ ಚಪ್ಪಲಿ ಹಿಮ್ಮಡಿಗೆ ಹೊಡೆಯುತ್ತಿದ್ದುದರಿಂದ ಅರಿತು ಕೊಂಡೆ. ಅವಳ ನಿಕಟವಾದ ಸೌಂದರ್ಯವನ್ನು ಅರಿಯಲು ನನಗೆ ಸಾಧ್ಯವಾಗದೇ ಹೋಗಬಹುದು. ಆದರೆ ಅವಳ ಮಧುರವಾದ ಕಂಠವನ್ನು ಮಾತ್ರ ಅವಳ ಜೋಡಿನ ಸಪ್ಪಳದಷ್ಟೇ ನಾನು ಮೆಚ್ಚುತ್ತಿದ್ದೆ. ಅದೇ ಗುಂಗಿನಲ್ಲಿ ನಾನು ಕೇಳಿದೆ.

''ತಾವು ಕೊಡಚಾದ್ರಿ ಕಡೆಗೆ ಪ್ರಯಾಣಿಸುತ್ತಿರುವಿರಾ ?''

ನನ್ನ ಧ್ವನಿಯನ್ನು ಕೇಳಿದ ತಕ್ಷಣ ಅವಳು ಬೆಚ್ಚಿಬಿದ್ದಳು. ಬಹುಶಃ ನಾನು ಬೋಗಿಯ ಒಂದು ಕತ್ತಲಿನ ಮೂಲೆಯಲ್ಲಿ ಕುಳಿತಿರಬೇಕು. ಆಶ್ಚರ್ಯದಿಂದ ತಕ್ಷಣ ಪ್ರತಿಕ್ರಿಯಿಸಿದಳು.

''ನೀವಿರುವುದು ನನಗೆ ತಿಳಿದೇ ಇರಲಿಲ್ಲ.''

ಒಮ್ಮೊಮ್ಮೆ ಹೀಗೆ ಆಗುವುದು ಸಹಜ. ನಾವು ಯಾವುದೋ ವಿಷಯದಲ್ಲಿ ಎಷ್ಟು ಲೀನವಾಗಿರುತ್ತೇವೆ ಎಂದರೆ ಎಷ್ಟೋ ವಿಷಯಗಳು ನಮ್ಮ ಕಣ್ಣೆದುರಿನಲ್ಲೇ ನಡೆಯುತ್ತಿದ್ದರೂ ಅವುಗಳನ್ನು ನಾವು ಗ್ರಹಿಸುವ ಸ್ಥಿತಿಯಲ್ಲೇ ಇರುವುದಿಲ್ಲ. ಆದರೆ ದೃಷ್ಟಿ ಹೀನ ವ್ಯಕ್ತಿಯು ತನ್ನ ಸಂವೇದನಾಶೀಲ ಅಂಗದ ಅಳಿದುಳಿದ ಭಾಗದ ಮೇಲೆ ಪರಿಣಾಮ ಬೀರುವ ಸಂಗತಿ ಯನ್ನು ಸೂಕ್ಷ್ಮವಾಗಿ ಮತ್ತು ಶೀಘ್ರವಾಗಿ ತಿಳಿದುಕೊಳ್ಳುವನು.

''ನಿಮ್ಮನ್ನು ನಾನು ನೋಡಿರಲಿಲ್ಲ, ಬರುತ್ತಿರುವುದನ್ನು ಕೇಳಿದೆ'' ಎಂದು ನನಗರಿವಿಲ್ಲದಂತೆಯೇ ಹೇಳಿದಾಗ ಅಯ್ಯೋ ! ನಾನು ಕುರುಡನೆಂಬ ಗುಟ್ಟು ಇವಳಿಗೆ ತಿಳಿದುಹೋಯಿತೋ ಏನೋ ಎಂದು ಚಡಪಡಿಸತೊಡಗಿದೆ.

''ನಾನು ಸೋಮಲಾಪುರದಲ್ಲಿ ಇಳಿಯಲಿದ್ದೇನೆ. ನನ್ನ ಚಿಕ್ಕಮ್ಮ ಅಲ್ಲಿ ನನಗಾಗಿ ಕಾಯುತ್ತಿರುತ್ತಾಳೆ'' ಎಂಬ ಅವಳ ಮಾತನ್ನು ಕೇಳಿದಾಗ 'ಬದುಕಿದೆಯಾ ಬಡಪಾಯಿ !' ಎಂದುಕೊಂಡೆ. ಇವಳ ಚಿಕ್ಕಮ್ಮ ಇವಳಿಗಾಗಿ ಕಾಯುತ್ತಿರುತ್ತಾಳೆ ಎಂದು ತಿಳಿದಾಗ ಇವಳ ಹತ್ತಿರ ಗೆಳೆತನ ಮಾಡದಿರುವುದೇ ಲೇಸು ಎಂದುಕೊಂಡೆ. ಏಕೆಂದರೆ ಈ ಚಿಕ್ಕಮ್ಮಂದಿರು ಯಾವಾಗಲೂ ಸ್ವಲ್ಪ ವರಟರಾಗಿರುತ್ತಾರೆ.

''ನೀವೆಲ್ಲಿಗೆ ಹೋಗುತ್ತಿರುವಿರಿ ?'' ಎಂಬ ಅವಳ ಪ್ರಶ್ನೆ ಬಂದಾಗ ತಕ್ಷಣವೇ ಎಚ್ಚೆತ್ತೆ.

''ಕೊಡಗಿಗೆ ಹೋಗಿ ಅಲ್ಲಿಂದ ಮಡಿಕೇರಿಗೆ.''

''ಎಷ್ಟೊಂದು ಅದೃಷ್ಟವಂತರಪ್ಪ! ನನಗೆ ಮಡಿಕೇರಿಗೆ ಹೋಗಲು ತುಂಬ ಇಷ್ಟ. ಅಕ್ಟೋಬರ್ ತಿಂಗಳಂತೂ ಮಡಿಕೇರಿ ಸೌಂದರ್ಯದ ತಾಣ.''

''ಹೌದು. ಅಕ್ಟೋಬರ್ ಅತ್ಯಂತ ಸೂಕ್ತವಾದ ಸಮಯ.'' ನನ್ನ ನೆನಪಿನ ಕಣಜದಿಂದ ಅಣಿಮುತ್ತುಗಳನ್ನು ಆಯ್ದು ಜೋಡಿಸತೊಡಗಿದೆ.

''ಬೆಟ್ಟಗುಡ್ಡಗಳು ಹಚ್ಚಹಸುರಾಗಿ ಮಿನುಗುತ್ತಿರುತ್ತವೆ, ತರುಲತೆಗಳು ಫಲ ಪುಷ್ಪಗಳಿಂದ ತುಂಬಿ ತುಳುಕುತ್ತಿರುತ್ತವೆ. ಚಳಿಗಾಲದಲ್ಲಿ ಸೂರ್ಯನ ರಶ್ಮಿ ತುಂಬಾ ಹಿತಕರವಾಗಿರುತ್ತದೆ. ರಾತ್ರಿಯ ಹೊತ್ತಿನಲ್ಲಿ ಅಗ್ಗಿಷ್ಟಿಕೆಯ ಮುಂದೆ ಕುಳಿತು ಚಳಿ ಕಾಯಿಸುವುದೇ ಒಂದು ಹೊಸ ಅನುಭವ. ನಿಜ, ಅಕ್ಟೋಬರ್ ಅತ್ಯಂತ ಸೂಕ್ತವಾದ ಸಮಯ.''

ನನ್ನ ವಿಮರ್ಶೆಗಳಿಗೆ ತುಟಿ ಪಿಟಿಕನ್ನದೆ ಮೌನವಾದಾಗ ನನ್ನನ್ನು ಒಬ್ಬ ಭಗ್ನ ಪ್ರೇಮಿ ಎಂದು ತಿಳಿದುಕೊಂಡಳೇ ಎಂದು ಚಿಂತಿಸತೊಡಗಿದೆ. ಅದಕ್ಕೆ ಇಂಬು ಕೊಡುವಂತೆ ನನಗರಿವಿಲ್ಲದಂತೆಯೇ ಮತ್ತೊಂದು ಪ್ರಶ್ನೆಯನ್ನು ಎಸೆದೆ.

''ಮಡಿಕೇರಿ ನೋಡಲು ತುಂಬಾ ಸುಂದರ ಅಲ್ಲವೇ ?''

ನಾನೇಕೆ ಹೀಗೆ ಎಡವುತ್ತಿದ್ದೇನೆ ? ನಾನು ಕುರುಡ ಎಂಬುದು ಅವಳಿಗೆ ತಿಳಿದುಹೋಯಿತೇ ? ಎಂದು ನಾನು ಗಲಿಬಿಲಿಗೊಂಡಾಗ ಅವಳ ಮುಂದಿನ ಪ್ರಶ್ನೆ ನನ್ನನ್ನು ಉಸಿರಾಡುವಂತೆ ಮಾಡಿತು.

''ನೀವೇಕೆ ಸುಮ್ಮನೆ ಕುಳಿತಿರುವಿರಿ ? ಕಿಟಕಿಯ ಮೂಲಕ ಹೊರನೋಟವನ್ನು ಸವಿಯಬಾರದೇ ?''



ನಾನು ನನ್ನ ಸೀಟಿನಲ್ಲಿಯೇ ಮುಂದಕ್ಕೆ ತೆವಳುತ್ತ ಕಿಟಕಿಯ ಸರಳುಗಳಿಗಾಗಿ ತಡಕಾಡಿದೆ. ಕಿಟಕಿಯ ಬಾಗಿಲು ತೆರೆದಿತ್ತು. ಹೊರಗಿನ ದೃಶ್ಯವನ್ನು ಸವಿಯುವವನಂತೆ ನಟಿಸತೊಡಗಿದೆ. ರೈಲಿನ ಚಕ್ರಗಳ ಸಪ್ಪಳವೊಂದನ್ನು ಬಿಟ್ಟು ಮತ್ತಾವುದರ ಅರಿವಿರಲಿಲ್ಲ. ನನ್ನ ಮನಃಪಟಲದ ಮೇಲೆ ಚಲಿಸುತ್ತಿರುವ ಟೆಲಿಗ್ರಾಫ್ ತಂತಿಗಳು ಮತ್ತು ಮರಗಳು ತೇಲತೊಡಗಿದವು.

''ಮರಗಳೂ ಓಡುವ ದೃಶ್ಯ ಕಾಣುತ್ತಿಲ್ಲವೇ ?''

''ಅದರಲ್ಲಿ ಹೊಸತೇನಿದೆ ? ನಿಮಗೆ ಯಾವುದಾದರೂ ಪ್ರಾಣಿಗಳು ಕಾಣಿಸುತ್ತಿವೆಯೇ ? ಕೊಡಚಾದ್ರಿ ಬೆಟ್ಟದಲ್ಲಿ ಪ್ರಾಣಿಗಳನ್ನು ಕಾಣುವುದೇ ಕಷ್ಟ.'' ನಾನು ಅವಳ ಕಡೆಗೇ ನೋಡುವವನಂತೆ ನಟಿಸುತ್ತಾ ''ನಿಮ್ಮ ಮುಖ ತುಂಬಾ ಆಕರ್ಷಣೀಯವಾಗಿದೆ'' ಎಂದು ಔಪಚಾರಿಕವಾಗಿ ಹೇಳಿದೆನು. ಅವಳು ಕಿಲಕಿಲ ನಕ್ಕಳು. ನಗುವಾಗ ಮುತ್ತಿನ ಹರಳುಗಳು ಉದುರುತ್ತಿವೆ ಎನಿಸುತ್ತಿತ್ತು.

''ಯಾರು ಕೇಳಿದರೂ ನನ್ನ ಸೌಂದರ್ಯವನ್ನು ಹೊಗಳುವವರೇ, ಕೇಳಿ ಕೇಳಿ ಸಾಕಾಗಿ ಹೋಗಿದೆ.''

ಓಹೋ! ನೀನು ನೋಡಲೂ ಸುಂದರವಾಗಿರುವಿ ಎಂದುಕೊಳ್ಳುತ್ತಾ ಕೇಳಿದೆ.

''ಆಕರ್ಷಣೀಯ ಮುಖ ಸುಂದರವಾಗಿರಲೇಬೇಕಲ್ಲವೇ ?''

''ನೀವು ತುಂಬಾ ಕಿಲಾಡಿ ಇದ್ದೀರಿ ! ಆದರೆ ಯಾಕೆ ಗಂಟು ಮುಖ ಹಾಕಿಕೊಂಡಿರುವಿರಿ ?'' ಅವಳನ್ನು ಖುಷಿಪಡಿಸುವ ಸಲುವಾಗಿಯಾದರೂ ನಾನು ನಗುತ್ತಿರಬೇಕು ಅಂದುಕೊಂಡೆ. ಆದರೆ ಅದಕ್ಕೆ ಅವಕಾಶವೇ ದೊರೆಯಲಿಲ್ಲ. ಅವಳು ಇಳಿಯುವ ಸ್ಥಳ ಬಂದುದರಿಂದ ಹೇಳಿದೆ.

''ನಿಮ್ಮ ನಿಲ್ದಾಣ ಸಮೀಪಿಸುತ್ತಿದೆ.''

''ಸದ್ಯ ಬದುಕಿದೆ ! ನನಗೆ 3-4 ಗಂಟೆಗಳಿಗಿಂತ ಹೆಚ್ಚು ಪ್ರಯಾಣ ಮಾಡಲು ತುಂಬಾ ಕಷ್ಟ.''

ನಾನಂತೂ ಅವಳು ಜೊತೆಯಲ್ಲಿದ್ದರೆ ಎಷ್ಟು ಕಾಲ ಬೇಕಾದರೂ ಪ್ರಯಾಣಿಸಬಲ್ಲೆ. ಅವಳ ಮಾತಿನ ಮೋಡಿ ಆಕರ್ಷಣೆ ಮರೆಯುವಂತಿರಲಿಲ್ಲ. ಅವಳ ಮಾತನ್ನು ಕೇಳುತ್ತಿದ್ದರೆ ಮರಳುಗಾಡಿನಲ್ಲಿ ಮರೀಚಿಕೆಯನ್ನು ಕಂಡಂತಾಗುತ್ತಿತ್ತು. ಅವಳು ರೈಲಿನಿಂದ ಇಳಿದ ತಕ್ಷಣ ನಮ್ಮ ಈ ಸಂಕ್ಷಿಪ್ತ ಭೇಟಿಯನ್ನು ಮರೆತುಬಿಡುವಳೊ ಏನೋ ಎಂಬ ನೋವು ನನ್ನನ್ನು ಕಾಡುತ್ತಿತ್ತು. ನನಗಂತೂ ಈ ಭೇಟಿಯ ನೆನಪು ಬರೇ ಪ್ರಯಾಣದುದ್ದಕ್ಕೇ ಏಕೆ ಬದುಕಿನುದ್ದಕ್ಕೂ ಉಳಿಯಲಿದೆ ಎನಿಸುತ್ತಿತ್ತು.

ಅವಳು ತನ್ನ ಲಗ್ಗೇಜುಗಳನ್ನು ತೆಗೆದುಕೊಂಡು ಇಳಿಯಲು ತಯಾರಾದಳು. ಅವಳು ನನ್ನ ಬಳಿ ಬಂದು ನಿಂತಾಗ ತಲೆಕೂದಲನ್ನು ಗಂಟು ಹಾಕಿಕೊಂಡಿರುವಳೊ, ಜಡೆ ಹೆಣೆದುಕೊಂಡಿರುವಳೋ ಅಥವಾ ಕೆದರಿಕೊಂಡು ಭುಜದ ಮೇಲೆ ಇಳಿಬಿಟ್ಟುಕೊಂಡಿರುವಳೋ ಎಂಬುದಾಗಿ ಯೋಚಿಸುತ್ತಿದ್ದೆ. ರೈಲು ನಿಲ್ದಾಣದಲ್ಲಿ ನಿಂತುಕೊಂಡಿದ್ದುದರಿಂದ ಹೊರ ಭಾಗದಲ್ಲಿ ಕೂಲಿಗಳ, ವ್ಯಾಪಾರಿಗಳ ಮತ್ತು ಜನರ ಗದ್ದಲ ಕಿವಿಗಪ್ಪಳಿಸುತ್ತಿತ್ತು. ಅವಳ ಕೂದಲಿನ ಸುಗಂಧ ನನಗೆ ಮಂಕುಬರಿಸಿತ್ತು. ಅವಳ ತಲೆಕೂದಲನ್ನು ಒಮ್ಮೆ ಮುಟ್ಟಬೇಕು ಎನಿಸಿತು. ಆದರೆ ಇನ್ನೊಂದು ಕ್ಷಣದಲ್ಲಿ ಅವಳು ಇಳಿದೇ ಹೋದಳು! ನನ್ನ ಆಸೆ ಹಾಗೇ ಕಮರಿಹೋಯಿತು.

ಹೂದಾನಿ ಒಡೆಯಬಹುದು, ಒಡೆದು ಚೂರಾಗಬಹುದು, ಆದರೆ ಗುಲಾಬಿ ಮಾತ್ರ ಗುಲಾಬಿಯಾಗಿಯೇ ಇರುತ್ತದೆ.

ರೈಲಿಗೆ ಹತ್ತಿ ಇಳಿಯುವವರ ಸಂಖ್ಯೆ ಸಾಕಷ್ಟು ಇದ್ದುದರಿಂದ ಗದ್ದಲಕ್ಕೇನೂ ಕಡಿಮೆ ಇರಲಿಲ್ಲ. ಒಳಕ್ಕೆ ನುಗ್ಗಿದ ಪ್ರಯಾಣಿಕನೊಬ್ಬ ಬಾಗಿಲನ್ನು ಮುಚ್ಚಿದ. ನನ್ನ ಭಾಗಕ್ಕಂತೂ ಜಗತ್ತೇ ಮುಚ್ಚಿದಂತಾಯಿತು. ಗಾರ್ಡ್ ಶೀಟಿ ಊದಿದಾಗ ರೈಲು ಮಾಮೂಲಿನಂತೆ ಚಲಿಸಲು ಪ್ರಾರಂಭಿಸಿತು. ನಾನು ಮತ್ತೊಮ್ಮೆ ಸಹಪ್ರಯಾಣಿಕನನ್ನು ಹುಡುಕಬೇಕಾಯಿತು.

ರೈಲು ವೇಗವನ್ನು ಹೆಚ್ಚಿಸುತ್ತಾ ಓಡಿದಂತೆಲ್ಲಾ ನನ್ನ ಮನಸ್ಸು ಎತ್ತಲೋ ಓಡಲು ಪ್ರಾರಂಭಿಸಿತು. ಕಿಟಕಿಯ ಪಕ್ಕದಲ್ಲಿ ಕುಳಿತುಕೊಂಡು ಹೊರ ಪ್ರಪಂಚವನ್ನು ನೋಡುವವನಂತೆ ನಟಿಸತೊಡಗಿದೆ. ಅದು ನನ್ನ ಭಾಗಕ್ಕೆ ಪೂರ್ಣ ಕತ್ತಲಾಗಿತ್ತು. ಹೊಸದಾಗಿ ಬಂದ ವ್ಯಕ್ತಿ ನನ್ನನ್ನು ಎಚ್ಚರಿಸಿದಾಗ ಮರಳಿ ಈ ಜಗತ್ತಿಗೆ ಬಂದೆ.

''ಹುಡುಗಿ ಇಳಿದಿದ್ದು ತುಂಬಾ ಬೇಸರವಾಗಿರಬೇಕಲ್ಲವೇ ?'' ಛೇಡಿಸುತ್ತಾ ಕೇಳಿದ.

''ನಾನಂತೂ ಅವಳ ಸ್ಥಾನವನ್ನು ತುಂಬಲಾರೆ !''

''ತುಂಬಾ ಸುಂದರ ಹುಡುಗಿಯಪ್ಪ , ಅಲ್ಲವೇ ?''

''ಅದಿರಲಿ ಅವಳ ತಲೆಕೂದಲುಗಳು ಹೇಗಿದ್ದವು ? ಗಂಟು ಹಾಕಿದ್ದಳೆ ? ಜಡೆ ಹೆಣೆದಿದ್ದಳೆ ? ಇಳಿಬಿಟ್ಟಿದ್ದಳೆ ? ಅಥವಾ ತುರುಬು ಹಾಕಿದ್ದಳೇ?''

''ನನಗೆ ತಿಳಿಯದು, ನಾನಂತೂ ಅವಳ ಕೂದಲುಗಳನ್ನು ನೋಡಲಿಲ್ಲ. ಕಣ್ಣುಗಳನ್ನು ಮಾತ್ರ ನೋಡಿದೆ. ತುಂಬಾ ಸುಂದರವಾಗಿದ್ದವು. ಆದರೆ ಅವುಗಳಿಂದ ಏನೂ ಪ್ರಯೋಜನವಿಲ್ಲ. ಏಕೆಂದರೆ ಅವಳು ಪೂರ್ಣ ಕುರುಡಿ'' ಎಂದಾಗ ನಾನು ಮಾತನ್ನೂ ಕಳೆದುಕೊಂಡು ಮೂಕನಾದೆ.

ಕನ್ನಡಕ್ಕೆ: ಎ. **ಗಣೇಶ**
ಅಧ್ಯಾಪಕರು, ಸರ್ಕಾರಿ ಪದವಿಪೂರ್ವ ಕಾಲೇಜು
೫೬, ಚಾಮರಾಜಪೇಟೆ, ಸಾಗರ

# ರಂಜಾನ್ ಗರ್ಭದಲ್ಲಿ ಕೂಸ

ದರ್ಗಾ ಮರದಲ್ಲಿ ಚಂದ್ರ
ಹಸಿರು ಎಲೆಗಳ ಮಧ್ಯೆ
ಹಸಿರು ಮರಳಲ್ಲಿ ಹಸಿ ಹಸಿ
ಬತ್ತಿ ಆರಿ ಹೋಗಬಹುದು
ನವ ದಿನ ಚಂದ್ರನ ಬೆಳದಿಂಗಳು
ಗರ್ಭಿಣಿ ಮೇಲೆ
ಮಗು ಆಕಳಿಸಿ ನೋಡಿತು
ಬೆಳ್ಳಗಿನ ಬಣ್ಣ ಯಾರದೆಂದಿತು
ಬೆಳದಿಂಗಳ ಬಣ್ಣ ಹಿಂದುಗಳದೆಂದರು
ಮುಸ್ಲಿಂರದೆಂದರು ಒಬ್ಬರು.

ಚಂದ್ರಮಾನ ವರ್ಷದ ಗೆಜ್ಜೆ
ಬಣ್ಣ ಬಣ್ಣದ ಗೆಜ್ಜೆ ಕೂಸಿಗೆ ಸಿದ್ಧ
ಮಾಡಲು ಹೋದಳು ತಾಯಿ
ಗೆಜ್ಜೆ ಗಲ್ ಎಂದದ್ದು ಕೂಸಿಗೆ ಕೇಳಿಸಿದಾಗ
ಅವಸರದಲ್ಲಿದ್ದಾನೆ ಚಂದ್ರ
ದೂರದಲ್ಲಿದ್ದಾನೆ ನೇಸರ
ಬೆಚ್ಚನೆ ಕೈ ಆಡಿಸಿತು ಕೂಸ



ಮುಗಿಲ ಮರೆಸಿದಂತೆ ಚಂದ್ರನ
ತಾಯಿ ಮರೆಸಿದ್ದಾಳೆ ಕೂಸ.

ಎಳೆ ನೇಸರ ಎಳೆಯುತ್ತಾ
ತುಂಬು ಚಂದಿರ ಭಾನು ತುಂಬಾ
ತುಂಬುಗಲ್ಲದ ಚಂದಿರನ
ಎಳೆ ಹರೆಯದ ಚಂದಿರನ
ಎಳೆ ರಾತ್ರಿಯಲ್ಲಿ ಕಟ್ಟಿಹಾಕಿರುವ
ಎಳೆ ಬೆಳಕಿನಲಿ ಹೊ....... ಹೋ...
ಎಳೆ ರಕ್ತವ ಹೀರಿ ಹೀರಿ.

ಬರಿ ಮನದ ಕೂಸ
ಕೂಗುವುದು ಕೇಳಿಸಿತೆ
ಚಂದ್ರನ ಹಿಡಿದಿಟ್ಟುಕೊಂಡ
ಕೇಸರಿ ಪಾಳೆಗಾರನಿಗೆ
ಮಂದಾಗ್ನಿ ಮಂದಾರನಿಗೆ

ಗಂಗಾರಾಂ ಚಂಡಾಳ
ಮನೆ ನಂ. ಎಲ್ -೧೬, ೩ನೇ ಹಂತ,
ಕುವೆಂಪುನಗರ, ಮೈಸೂರು - ೨೩

# ಬಂಡೆಗಲ್ಲುಗಳ ಮೇಲೆ

ಡಾ. ವಿಜಯಕುಮಾರ, ಕಮ್ಮಾರ




''ಯಾವ ಕಡೆಗೆ ಹೊರಟಿರಿ ?'' ಧ್ವನಿ ಬಂದತ್ತ ತಿರುಗಿ ನೋಡಿದಳು. ದಿನವೂ ಬಸ್‌ಸ್ಟಾಪ್‌ನಲ್ಲಿ ಕಾಣುತ್ತಿದ್ದ ಯುವಕ, ತನ್ನ ಕಡೆಗೆ ನೋಡುತ್ತಾ ಬರುತ್ತಿದ್ದ. 'ದಿನವೂ ಬಸ್‌ಸ್ಟಾಪಿನಲ್ಲಿ ನೋಡುತ್ತಾಳೆ' ಎಂಬುದನ್ನು ಬಿಟ್ಟರೆ ಬೇರೆ ಯಾವ ರೀತಿಯಲ್ಲೂ ಅವನ ಪರಿಚಯ ಅವಳಿಗಿಲ್ಲ. ಅವನ ಪ್ರಶ್ನೆಯಿಂದ ಅವಳಿಗೆ ಬೇಸರ, ಗಾಬರಿ ಯಾವುದೂ ಆಗಲಿಲ್ಲ. ''ಹೀಗೇ ಈ ಸಂಜೆ ಸ್ವಲ್ಪ ಹೊರಗೆ ಸುತ್ತೋಣ ಅನ್ನಿಸ್ತು.... ಹೊರಟಿದ್ದೀವಿ... ನಾಳೆ ರವಿವಾರ... ನಾಡದ್ದು ಹಬ್ಬ, ರಜೆ ಮೇಲೆ ರಜೆಗಳು... ತುಂಬಾ ಬೇಜಾರು...'' ಎಂದಳು. ''ನಿಮ್ಮ ಜೊತೆಗೆ ನಾನೂ ಬರಲೆ'' ಎಂದು ಅವನು ಬಾಯಿಬಿಟ್ಟು ಕೇಳಲಿಲ್ಲ. ಆತ್ಮೀಯ ಗೆಳೆಯನಂತೆ ಜೊತೆಯಲ್ಲೇ ಹೆಜ್ಜೆ ಹಾಕಿದ. ಅವಳು ಬೇಡವೆನ್ನಲಿಲ್ಲ. ''ನನ್ನ ಜೊತೆ ನಡೆಯುವುದು ಅವನಿಗೆ ಹಿತವಾಗಿರಬಹುದು... ನಡೆಯಲಿ... ಅದರಿಂದ ನನಗಾಗುವ ನಷ್ಟವಾದರೂ ಏನು ?'' ಮರುಕ್ಷಣ ವಾಸ್ತವಕ್ಕೆ ಬಂದಳು. ''ನಿಮ್ಮ ಮಗಳು ಯಾವುದೋ ಹುಡುಗನ ಜೊತೆ ಊರೆಲ್ಲಾ ಸುತ್ತುತ್ತಿದ್ದಾಳೆ'' ಎಂದು ನನ್ನ ಹಿತೈಷಿಗಳು ತಂದೆ-ತಾಯಿಗೆ ವರದಿ ಸಲ್ಲಿಸಬಹುದು....ಆಗಲಿ... ಅದರಿಂದಾದರೂ ಈ ಯಾಂತ್ರಿಕ ಬದುಕಿನಲ್ಲಿ ಸ್ವಲ್ಪ ಥ್ರಿಲ್ ಅನಿಸಬಹುದು.

ಕೈಯಲ್ಲಿನ ಗಡಿಯಾರ ನೋಡಿಕೊಂಡಳು. ಇನ್ನೂ ನಾಲ್ಕೂವರೆ. ರಾತ್ರಿಯಾಗಲು ಬಹಳ ಸಮಯವಿದೆ. ಬಹುಶಃ ಇವನದೂ ನನ್ನ ಪರಿಸ್ಥಿತಿಯೇ... ಮನೆಯಲ್ಲಿ ಕುಳಿತುಕೊಳ್ಳಲು ಬೇಸರವಾಗಿ ಸುಮ್ಮನೆ ಹೊರಬಿದ್ದಿದ್ದಾನೆ.

ಅವರು ನಡೆಯುವ ಹಾದಿಯಲ್ಲಿ ಪಾರ್ಕ್ ಬಂದಿತು. 'ಇಲ್ಲೇ ಪಾರ್ಕಿನಲ್ಲಿ ಕೂಡೋಣ' ಎಂದಳು. ಅವನದು ತಕರಾರಿಲ್ಲ, ಸುಮ್ಮನೆ ತಲೆ ಅಲ್ಲಾಡಿಸಿದ. 'ಈ ಪ್ರಾಣಿಯದು ಮಾತು ಕಡಿಮೆ' ಎಂದುಕೊಂಡಳು.

ಪಾರ್ಕಿನಲ್ಲಿ ಇದ್ದ ಕಲ್ಲು ಬೆಂಚುಗಳ ಮೇಲೆ ಅನೇಕ ಜೋಡಿಗಳು ಕೂತಿದ್ದವು. ಹೊಸದಾಗಿ ಮದುವೆಯಾದವರು... ಮುಂದೆ ಮದುವೆಯಾಗಲಿರುವವರು... ಅಂತಹ ಯೋಚನೆಯಿಲ್ಲದೆ ಪರಸ್ಪರ ಖುಷಿಗಾಗಿ ಕುಳಿತವರು.... ಹೀಗೇ ಅನೇಕ ಜೋಡಿಗಳು. ಬಹುಶಃ ಇವರದೇ ಅತ್ಯಂತ 'ಅಪರಿಚಿತ ಜೋಡಿ'.

'ಏನಾದರೂ ಮಾತನಾಡುತ್ತಾನಾ' ಎಂದು ಅವನ ಕಡೆಗೆ ನೋಡಿದಳು. ಮೆಲ್ಲನೆ ಮಾತಿಗೆ ಎಳೆದು ತನ್ನ ಹೆಸರು... ಕೆಲಸ... ಮನೆ ಇತ್ಯಾದಿ... ಇತ್ಯಾದಿ ಕೇಳುತ್ತಾನೆ ಎಂದುಕೊಂಡಳು.

ದೂರದಲ್ಲಿ ಆಟವಾಡುತ್ತಿದ್ದ ಮಕ್ಕಳನ್ನು ನೋಡುತ್ತಾ ಕೇಳಿದ. ''ಲೈಬ್ರರಿಗೆ ಹೋಗುವ ಅಭ್ಯಾಸ ಇದೆಯಾ ?'' ಅದಕ್ಕೆ ಪಲ್ಲವಿ ''ಹಿಂದೆ ಅಭ್ಯಾಸ ಇತ್ತು, ಈಗ ಸುಮಾರು ಒಂದು ವರ್ಷವಾಯಿತು... ತುಂಬಾ ಅಪರೂಪ... ಮುಂಜಾನೆಯಿಂದ ಸಂಜೆಯವರೆಗೆ ಆಫೀಸ್‌ಗೆ ಹೋಗಿ ಬರುವುದರಲ್ಲೇ ಸಮಯವೆಲ್ಲಾ ಕಳೆಯುತ್ತದೆ'' ಎಂದಳು. ''ಆ ಕಾದಂಬರಿ ಚೆನ್ನಾಗಿದೆ... ಈ ಪುಸ್ತಕ ಚೆನ್ನಾಗಿದೆ... ಅಕಸ್ಮಾತ್ ಲೈಬ್ರರಿಗೆ ಹೋದರೆ ಓದಿ'' ಎಂದು ಹೇಳುತ್ತಾನೇನೋ ಎಂದುಕೊಂಡಳು. ಆದರೆ ಅವನು ಹಾಗೆ ಹೇಳಲಿಲ್ಲ. ''ಇತ್ತೀಚೆಗೆ ಚಂದ್ರಕಾಂತ ಬಕ್ಷೀಯವರ ಗುಜರಾತೀ ಕಥೆಗಳನ್ನು ಓದಿದೆ. ಜೀವನದ ವಿಲಕ್ಷಣ ಅನುಭವಗಳನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಅವರ ಕಥೆಗಳನ್ನು ಓದುವಾಗ ನಾನು ಅಹಮದಾಬಾದಿನಲ್ಲಿ, ಅಲ್ಲಿನ ವಿವಿಧ ಪ್ರದೇಶಗಳಲ್ಲಿ ಅಡ್ಡಾಡಿದಂತೆ ಭಾಸವಾಯಿತು'' ಎಂದು ಹೇಳಿದ.

ಅವನು ಹೇಳುವುದನ್ನು ಕೇಳಿದ ಮೇಲೆ ತಾನು ಏನಾದರೂ ಹೇಳಬೇಕು ಎಂದುಕೊಂಡಳು. ಇಲ್ಲವಾದರೆ ಅವಳು ಕಥೆ-ಕವನಗಳ ಬಗ್ಗೆ ಮಾತನಾಡುವುದನ್ನು ಬಿಟ್ಟು ತುಂಬಾ ದಿನಗಳಾಗಿದ್ದವು. ''ಹೌದು ! ಬೇರೆ ಪ್ರದೇಶಗಳ ಲೇಖಕರ ಬರಹಗಳನ್ನು ಓದುತ್ತಿದ್ದರೆ ನಿಜಕ್ಕೂ ಹೊಸ ಅನುಭವವಾಗುತ್ತದೆ. ಬಹುಶಃ ನಮ್ಮ ಸುತ್ತಲಿನ ಪರಿಸರಕ್ಕಿಂತ ಸ್ವಲ್ಪ ಭಿನ್ನವಾಗಿರುವ ಅಲ್ಲಿನ ಜೀವನವು ಅದಕ್ಕೆ ಕಾರಣವಾಗಿರಬಹುದು. ಹೃಷಿಕೇಶ ಪಾಂಡರವರ ಒರಿಯಾ ಕಥೆಗಳನ್ನು ಓದಿದಾಗ ನನಗೂ ವಿಶಿಷ್ಟ ಅನುಭವವಾಯಿತು'' ಎಂದಳು.

ಸ್ವಲ್ಪ ಹೊತ್ತು ಅವರಿಬ್ಬರ ನಡುವೆ ಮೌನ ಆವರಿಸಿತು. ಕಡಲೆಕಾಯಿ ಮಾರುವ ಹುಡುಗ ಬಂದ. ಇವನು ಎರಡು ಪೊಟ್ಟಣ ತೆಗೆದುಕೊಂಡು ಹಣ ನೀಡಿದ. ಅವಳು ಬೇಡವೆನ್ನಲಿಲ್ಲ. ಇಬ್ಬರೂ ತಿನ್ನುತ್ತಾ ಕುಳಿತರು.

ಮತ್ತೆ ಮಾತು ಆರಂಭವಾಯಿತು. ಸಾಹಿತ್ಯದ ಬಗ್ಗೆಯೇ ಮಾತನಾಡಿದ. ಕಾಯ್ಕಿಣಿ, ನುಗಡೋಣಿ, ಮೊಗಳ್ಳಿ ಮುಂತಾದವರ ಕಥೆಗಳ ಬಗ್ಗೆ ಮಾತುಗಳಾದವು. ಪಲ್ಲವಿ ಅವನ ಎಲ್ಲ ಅಭಿಪ್ರಾಯಗಳನ್ನು ಒಪ್ಪಿಕೊಳ್ಳಲಿಲ್ಲ. ಅದರಿಂದ ಅವನಿಗೆ ಬೇಸರವಾಗಿಲಿಲ್ಲ. ''ಇಂತಹ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳು ಏಳುವುದು ಸಹಜ'' ಎಂದು ಮಾತು ಮುಗಿಸಿದ.

ಪಲ್ಲವಿಗೆ ಅವನು 'ಮಾತಿನಲ್ಲಿ ಜಾಣ' ಎನ್ನಿಸಿತು. ತನ್ನ ವೈಯಕ್ತಿಕ ಸ್ಥಿತಿಯನ್ನು ನಿರ್ಧರಿಸುವ, ಕೆಣಕುವ ಯಾವ

ವಿಷಯಗಳ ಬಗ್ಗೆಯೂ ಈತ ಕೇಳಲಿಲ್ಲ. ತನ್ನ ಬಗ್ಗೆಯೂ ಹೇಳಲಿಲ್ಲ. ಅಂದರೆ... ಇವನಿಗೆ ಸರಿಯಾದ ಉದ್ಯೋಗ ಇಲ್ಲವೆ ? ಅದಕ್ಕಾಗಿ ಒಂದು ರೀತಿಯಲ್ಲಿ ಪಲಾಯನವಾದವನ್ನು ಈತ ಅನುಸರಿಸುತ್ತಿದ್ದಾನೆಯೇ ? ತಾನಾದರೂ ಅವನ ಬಗ್ಗೆ ಏಕೆ ತಲೆ ಕೆಡಿಸಿಕೊಳ್ಳಬೇಕು..? ಎಂದು ಸುಮ್ಮನಾದಳು.

ಸೂರ್ಯ ಮುಳುಗತೊಡಗಿದ. ಪಾರ್ಕಿನಲ್ಲಿದ್ದ ಜೋಡಿಗಳು ಒಂದೊಂದಾಗಿ ಏಳತೊಡಗಿದವು. "ನಾವೂ ಹೋಗೋಣ" ಎಂದಳು. "ಆಗಲಿ" ಎಂದು ಅವನೂ ಎದ್ದ.

ಮಾರನೆಯ ದಿವಸವೂ ಅವಳು ಸಂಜೆ ಹೊರಗೆ ಹೊರಟಳು. ಒಂದು ತಿರುವಿನಲ್ಲಿ ಆತ ಕಾಣಿಸಿಕೊಂಡ. ಅವನತ್ತ ಪರಿಚಯದ ನೋಟ ಬೀರಿದಳು. ಆ ನೋಟದಲ್ಲಿ ಸ್ವಲ್ಪ ಮುಗಳ್ನಗೆಯೂ, ಸಂತೋಷವೂ ಇದ್ದಿರಬಹುದು ಅಥವಾ ಇದ್ದಂತೆ ಆತನಿಗೆ ಕಾಣಿಸಿರಬಹುದು. ಇಬ್ಬರೂ ಮತ್ತೆ ಜೊತೆಯಾಗಿ ನಡೆದರು. "ಇವತ್ತು ಪಾರ್ಕಿಗೆ ಬೇಡ" ಎಂದಳು. "ಹಾಗಾದರೆ ಎಲ್ಲಿಗೆ ?" ಎನ್ನುವ ಹಾಗೆ ಅವಳ ಮುಖ ನೋಡಿದ. "ಕಡಲ ತೀರಕ್ಕೆ ಹೋಗೋಣ" ಎಂದಳು. ಆದರೆ... ತುಂಬಾ ದೂರವಾಗುತ್ತದೆ ಎಂದು ಅನುಮಾನಿಸಿದ. "ರಾತ್ರಿಯಾಗಲು ಇನ್ನೂ ಬಹಳ ಸಮಯವಿದೆ. ಈಗ ನಡೆದು ಹೋಗೋಣ, ಬರುವಾಗ ಬೇಕಾದರೆ ಆಟೋದಲ್ಲಿ ಬರಬಹುದು" ಎಂದಳು. "ತಮ್ಮ ಅಪ್ಪಣೆಯಂತೆ" ಎಂದು ಮುಗುಳ್ನಕ್ಕ.

ನಡೆದು ಹೋಗಿದ್ದರಿಂದ ಇಬ್ಬರಿಗೂ ಸ್ವಲ್ಪ ಸುಸ್ತಾಗಿತ್ತು. ಇಬ್ಬರೂ ದಂಡೆಯ ಮರಳಿನಲ್ಲಿ ಕುಳಿತರು. ಅವಳು ಅವನಿಗೆ ಹತ್ತಿರದಲ್ಲೇ ಕುಳಿತಳು. ಹೊಳೆಯುವ ನುಣುಪು ಕೂದಲನ್ನು ಕಟ್ಟದೇ ಭುಜದ ಮೇಲೆ ಬಿಟ್ಟಿದ್ದಳು. ಕೂದಲಿನ ಎಳೆಗಳು ಗಾಳಿಗೆ ಹಾರಿ ಅವನ ಕೆನ್ನೆಯನ್ನು ಮುದ್ದಿಸಿದವು. ಕೂದಲಿಗೆ ಹಾಕಿದ ಶಾಂಪೂ ವಾಸನೆ ಆತನಿಗೆ ಖುಷಿ ಕೊಟ್ಟಿತು. ಮೀನುಗಾರರ ದೋಣಿಗಳು ದಡದ ಕಡೆಗೆ ಬರುವ ಹಾದಿಯಲ್ಲಿದ್ದವು. "ಇಂದಿನ ಸೂರ್ಯಾಸ್ತದಲ್ಲಿ ಏನಾದರೂ ವಿಶೇಷತೆ ಕಾಣುವುದೆ" ಎಂದು ಕಣ್ಣಗಲಿಸಿ ಹುಡುಕಿದಳು. "ನಿಮ್ಮ ಜೊತೆಗೆ ನಾವೂ ಇದ್ದೇವೆ" ಎಂಬಂತೆ ದಂಡೆಗುಂಟ ಚಾಚಿಕೊಂಡಿದ್ದ ಬಂಡೆಗಲ್ಲುಗಳನ್ನು ಅವಳು ನೋಡಿದಳು. ಕೆಲವು ಬಂಡೆಗಲ್ಲುಗಳ ಮೇಲೆ ಜೋಡಿ ಹೆಸರುಗಳಿದ್ದವು. ಅವು ಪ್ರೇಮಿಗಳ ಹೆಸರುಗಳೆಂದು ಅವಳ ಬುದ್ಧಿ, ಮನಸ್ಸು ಎರಡೂ ಹೇಳಿದವು. ಅವನತ್ತ ನೋಡಿದಳು. ಅವನೂ ಅವಳನ್ನೇ ನೋಡುತ್ತ ಕುಳಿತಿದ್ದ. "ಹೀಗೆ ಕೆಲವು ಭೇಟಿಗಳಾದರೆ ನಮ್ಮಲ್ಲೂ ಪ್ರೀತಿ ಮೂಡಿ ಈ ಬಂಡೆಗಲ್ಲುಗಳ ಮೇಲೆ ಹೆಸರು ಬರೆಯುವ 'ಹುಚ್ಚುತನ' ತಮಗೂ ಬರಬಹುದೇನೋ" ಎಂದುಕೊಂಡಳು. ಥಟ್ಟನೆ ಏನೋ ನೆನಪಾದಂತೆ ಅವನ ಹೆಸರು ಕೇಳಿದಳು. "ಶಶಾಂಕ" ಎಂದ. ಅವಳಿಗೆ ಯೋಚಿಸಲಿಕ್ಕೂ ಬಿಡದೇ ಅವಳ ಮನಸ್ಸು 'ಪಲ್ಲವಿ-ಶಶಾಂಕ' ಎಂದು ಜೋಡಿಸಿ ಇಟ್ಟುಕೊಂಡಿತು. ಅವನೂ ಪ್ರತಿಯಾಗಿ ಅವಳ ಹೆಸರು ಕೇಳಿದ. "ಪಲ್ಲವಿ" ಎನ್ನಲು "ಸ್ವೀಟ್ ನೇಮ್" ಎಂದು ನಸುನಕ್ಕ.

ಅವಳಿಗೆ ಕೂಡಲು ಸರಿಯಾಗಲಿಲ್ಲವೆಂದು ಕಾಣುತ್ತೆ. ಕಾಲಲ್ಲಿದ್ದ ಕ್ಯಾನ್ವಾಸ್ ಶೂಸ್ ತೆಗೆದಳು. ಅವಳ ಬೆಳ್ಳನೆಯ ನುಣ್ಣನೆಯ ಮಾಟವಾದ ಪಾದಗಳನ್ನು ಅವನು ನೋಡಿದನು. ಆ ಒಂದು ಕ್ಷಣ ಆ ಪಾದಗಳನ್ನು ಕೈಯಲ್ಲಿ ಹಿಡಿಯಬೇಕೆನ್ನುವಷ್ಟು ಉದ್ರೇಕಗೊಂಡ. ಸಂಯಮ ತಂದುಕೊಂಡು ಮೊದಲ ಬಾರಿ ಅವಳನ್ನು ನೋಡುವಂತೆ ದಿಟ್ಟಿಸಿದ. ಅವಳ ಮೂಗು.. ಬಾಯಿ.. ಕಣ್ಣು.. ತುಟಿ.. ಗಲ್ಲ... ಹೀಗೆ ಎಲ್ಲವೂ ಅವನಿಗೆ ಸುಂದರವಾಗಿ ಕಂಡವು. ಕವಿಗಳ ವರ್ಣನೆಗಳೆಲ್ಲ ನೆನಪಾದವು. ಅವಳು ಹಣೆಗೆ ಮಿಂಚಿನಿಂದ ಕೂಡಿದ ಬಿಂದಿಯನ್ನು ಇಟ್ಟುಕೊಂಡಿದ್ದಳು. ಬಿಂದಿಯ ಮಿಂಚು ಅವಳ ಮೂಗು, ಗಲ್ಲಗಳ ಮೇಲೆ ಪ್ರತಿಫಲಿಸಿದಂತೆ ಅವನಿಗೆ ಕಂಡಿತು. ಬಹುಶಃ ಇದನ್ನು ಯಾವ ಕವಿಯೂ ಸರಿಯಾಗಿ ವರ್ಣಿಸಿಲ್ಲ ಎಂದುಕೊಂಡ. ಅವನು ತನ್ನನ್ನೇ ನೋಡುತ್ತಿರುವದು ತಿಳಿದು ಅವಳಿಗೆ ಮುಜುಗರವಾಯಿತು. "ಹಾಗೆ... ಸ್ವಲ್ಪ ದಂಡೆಗುಂಟ ನಡೆದು ಬರೋಣ" ಎಂದಳು. "ಆಗಲಿ" ಎಂದ. ಇಬ್ಬರೂ ಜೊತೆ ಜೊತೆಯಾಗಿ ಹೆಜ್ಜೆ ಹಾಕಿದರು. ಮರಳಿನಲ್ಲಿ ಸಲೀಸಾಗಿ ಹೆಜ್ಜೆ ಹಾಕಲು ಆಗುತ್ತಿರಲಿಲ್ಲ. ನಡೆಯುವಾಗ ಅವಳ ಭುಜ ಅವನಿಗೆ ತಾಗುತ್ತಿತ್ತು. ಅವಳ ಕೈ ಹಿಡಿದ. ಸುಮ್ಮನಿದ್ದಳು. "ನೀವು ತುಂಬಾ ಸುಂದರವಾಗಿದ್ದೀರಾ...." ಇನ್ನೂ ಏನೇನೋ ಹೇಳಬೇಕೆಂದುಕೊಂಡ. ಆದರೆ ಹೇಳಲಿಲ್ಲ. ಯಾಕೋ... ಆ ಮಾತುಗಳು ಹಳಸಲು ಅನಿಸಿದವು. ತಾನು ಹೊಸ ರೀತಿಯಲ್ಲಿ ಏನಾದರೂ ಹೇಳಬೇಕೆಂದುಕೊಂಡ. ಮನದಲ್ಲಿ ಅವನಿಗೆ ಬೇರೆ ಬೇರೆ ಮಾತುಗಳು ಹೊಳೆದವು. ಆದರೆ ಅವೂ ನಾಟಕೀಯವಾಗುತ್ತವೆ ಅನಿಸಿ ಸುಮ್ಮನಿದ್ದುಬಿಟ್ಟ. ಮತ್ತೆ ಬಂದು ಮರಳಿನಲ್ಲಿ ಕುಳಿತರು.

ಅವಳ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡು ಅವಳ ಹಸ್ತವನ್ನೇ ನೋಡಹತ್ತಿದ. "ಏನು ?... ಭವಿಷ್ಯ ಹೇಳುತ್ತೀರಾ..." ಎಂದಳು. "ನಂಬಿಕೆಯಿದ್ದರೆ ಮಾತ್ರ" ಎಂದು ಮೊದಲ ಬಾರಿಗೆ ಬಾಯಿ ತೆಗೆದು ನಕ್ಕ. "ಇನ್ನು ಅರ್ಧ ತಾಸಿಗೆ ಕತ್ತಲಾಗತೊಡಗುತ್ತದೆ. ನಾವು ಆಟೋ ಹಿಡಿದು ನಮ್ಮ ನಮ್ಮ ಮನೆಗಳಿಗೆ ಹೋಗುತ್ತೇವೆ, ಊಟ ಮಾಡುತ್ತೇವೆ... ಮಲಗುತ್ತೇವೆ... ಆಮೇಲೆ... ನೀವು ನನ್ನ ಕನಸಿನಲ್ಲಿ ಬಂದರೂ ಬರಬಹುದು. ಇದೇ ಇವತ್ತಿನ ಭವಿಷ್ಯ" ಎಂದು ನಗುತ್ತಾ ಹೇಳಿದ. "ಕನಸಿನಲ್ಲಿ ಬಂದು ನಿಮ್ಮ ನಿದ್ದೆ ಹಾಳುಮಾಡುವಷ್ಟು ಕೆಟ್ಟವಳಲ್ಲ ನಾನು" ಎಂದು ಹುಸಿ ಮುನಿಸು ತೋರುತ್ತಾ ಮೇಲೆದ್ದು "ಹೋಗೋಣ" ಎಂದಳು.

ಇಬ್ಬರೂ ಆಟೋದಲ್ಲಿ ಮನೆಗೆ ಹೊರಟರು. ಅವನ ಮನೆಯ ತಿರುವು ಮೊದಲು ಬಂದಿತು. ಆತ ಇಳಿದು ಇವಳತ್ತ ನೋಡಿದ. ಅವಳ ಕೈ ಅಮುಕಿ 'ಬಾಯ್' ಎಂದ. ಅವಳಿಗೆ ಆ ಕ್ಷಣ ಒಂಟಿಯಾದಂತೆ ಅನಿಸಿತು. ಛೆ ! ಎಂದೂ ಇಲ್ಲದ್ದು ಹೀಗೇಕೆ ?.... ಎಂದುಕೊಂಡಳು.

ಮರುದಿನ ದೀಪಾವಳಿ ಹಬ್ಬ. ಅವಳಿಗೆ ಹೊರಗೆ ಹೋಗಲು ಸಾಧ್ಯವಾಗಲಿಲ್ಲ. ತಾಯಿಗೆ ಅಡುಗೆ ಮಾಡಲು ನೆರವಾದಳು. "ಈ ದೀಪಾವಳಿಗೆ ನಮ್ಮ ಪಲ್ಲವಿಗೆ ಇಪ್ಪತ್ತೈದು ಮುಗಿದವು, ಅಲ್ಲವೆ ? ಇನ್ನು ತಡ ಮಾಡಬಾರದು," ಗೋವಿಂದಪ್ಪ ತಮ್ಮ ಹೆಂಡತಿಗೆ ಹೇಳಿದರು. "ಈಗ ವರ ನೋಡ ಹತ್ತಿ ಎರಡು ವರ್ಷಗಳಾದವು... ನಿಮಗೆ ಯಾವುದೂ ಸರಿ ಬರುತ್ತಿಲ್ಲ. ಐದೂ ಬೆರಳು ಸಮ ಇರುವುದಿಲ್ಲ... ಇನ್ನು ಹೆಚ್ಚಿಗೆ ಆರಿಸುವುದು ಬೇಡ... ಹುಡುಗ ನೋಡಲು ಸುಮಾರಾಗಿದ್ದು ಗಟ್ಟಿಮುಟ್ಟಾಗಿದ್ದರೆ ಸಾಕು, ಮದುವೆ ಮಾಡಿಬಿಡೋಣ... ಹೇಗೋ ಅವಳಿಗೂ ಒಂದು ಕೆಲಸ ಇದೆಯಲ್ಲ... ಹೊಟ್ಟೆಗೆ ಏನೂ ಚಿಂತೆಯಾಗುವುದಿಲ್ಲ" ಸುಮಿತ್ರಮ್ಮನವರು ಹೋಳಿಗೆಗೆ ಹೂರಣ ತುಂಬುತ್ತಾ ಹೇಳಿದರು. ಅಮ್ಮನ ಮಾತು ಕೇಳುತ್ತಾ ಕೈಯಲ್ಲಿ ಲಟ್ಟಣಿಗೆ ಹಿಡಿದುಕೊಂಡೆ ಪಲ್ಲವಿ ಯೋಚನೆಯಲ್ಲಿ ಮುಳುಗಿದಳು. ಶಶಾಂಕನ ನೆನಪಾಯಿತು. "ಬೇಗ ಲಟ್ಟಿಸಿತಾರೆ, ಗಂಟೆ ನಾಲ್ಕಾದರೂ ನಿಮ್ಮ ಅಡುಗೆ ಮುಗಿಯುವುದಿಲ್ಲ ಅಂತಾ ನಿಮ್ಮ ಅಪ್ಪ ಈಗ ರೇಗ್ತಾರೆ" ಎಂದರು ಸುಮಿತ್ರಮ್ಮ. 'ತನ್ನ ಬಗ್ಗೆ ಏನೂ ಹೇಳಲಿಲ್ಲ. ಮತ್ತೆ ಕೈ ಹಿಡಿದುಕೊಂಡು ಮೆಲ್ಲಗೆ ಅಮುಕುತ್ತ ಸಮುದ್ರದ ದಂಡೆಯುದ್ದಕ್ಕೂ ಓಡಾಡಿದ, ಭಲೆ ಕಿಲಾಡಿ ಅವನು !' ಯಾಕೋ ಒಂದು ತರಹ ಪ್ರೀತಿ ಉಕ್ಕಿ ಬಂತು ಅವಳಿಗೆ. ಅವನ ಮೇಲಿನ ಪ್ರೀತಿಯನ್ನು ಹೋಳಿಗೆ ಹಿಟ್ಟಿನ ಮೇಲೆ ಹಾಕಿ ಅವನನ್ನೇ ನೆನೆಯುತ್ತ ಖುಷಿಯಿಂದ ಲಟ್ಟಿಸಿದಳು. 'ನಾಳೆ ಅವನು ಬಸ್‌ಸ್ಟಾಪ್‌ನಲ್ಲಿ ಸಿಗಲಿ, ಅವನ ಉದ್ಯೋಗ... ಮನೆ... ಎಲ್ಲಾ ಕೇಳುತ್ತೀನಿ' ಎಂದುಕೊಂಡಳು. ಅವನು 'ಬಾಯ್' ಎಂದು ಕೈ ಅಮುಕುತ್ತ ಬೀಳ್ಕೊಟ್ಟದ್ದು ಅವಳಿಗೆ ಮತ್ತೆ ಮತ್ತೆ ನೆನಪಾಗಿ ಕಚಗುಳಿಯಿಟ್ಟಿತು. ಅವತ್ತು ಪಲ್ಲವಿಗೆ ಊಟ ತುಂಬಾ ರುಚಿಯೆನಿಸಿತು. 'ಹೋಳಿಗೆ ಹಿಂದೆ ಯಾವಾಗಲೂ ಇಷ್ಟು ರುಚಿಯಾಗಿರಲಿಲ್ಲ' ಎಂಧುಕೊಂಡಳು. ಅದನ್ನೇ ತಾಯಿಗೂ ಹೇಳಿದಳು. "ಹಾಗಾದ್ರೇ ಇನ್ನೊಂದೆರಡು ತಿನ್ನು, ನಿನಗೆ ರುಚಿ ಹತ್ತುವುದೇ ಅಪರೂಪ" ಎಂದರು ಸುಮಿತ್ರಮ್ಮ.

ಪಲ್ಲವಿಯ ತಂದೆ ರಾತ್ರಿ ಹೊರಗೆ ತಿರುಗಾಡಲು ಹೋದವರು ಮನೆಗೆ ಬರುತ್ತಿದ್ದಂತೆಯೇ ಹೇಳಿದರು: "ಸುಮಿತ್ರಾ, ನಮ್ಮ ಶ್ಯಾಮ ಸಿಕ್ಕಿದ್ದ ಕಣೆ, ಒಂದು ಹುಡುಗನ ಫೋಟೋ ಸಹ ತೋರಿಸಿದ. ಹುಡುಗ ಲಕ್ಷಣವಾಗಿದ್ದಾನೆ. ಜೊತೆಗೆ ಅವನು ಕೆಲಸ ಮಾಡೋ ಕಂಪೆನಿಯಲ್ಲೇ ಇದಾನೆ ಅಂದ, ಅಲ್ಲದೆ ಪೋಸ್ಟ್ ಗ್ರ್ಯಾಜ್ಯುಯೇಟ್ ಅಂತೆ. 'ಅವನಿಗೆ ಹೆಚ್ಚಿನ ಹಣದ ಆಸೆ ಇಲ್ಲ. ಹುಡುಗಿ ಚೆನ್ನಾಗಿದ್ರೆ ಸಾಕು ಅಂದಿದಾನೆ. ನಮ್ಮ ಪಲ್ಲವೀನೂ ಚೆನ್ನಾಗಿದ್ದಾಳೆ. ನಾಳೆಯೇ ಅವನನ್ನ ಕರೆದುಕೊಂಡು ಬರ್ತೀನಿ, ಸಂಜೆ ಸಿದ್ಧವಾಗಿರಿ ಅಂತಾ ಕೂಡಾ ಹೇಳಿದ್ದಾನೆ. ನಾಳೆ ಸಂಜೆ ಆಫೀಸ್‌ನಿಂದ ಸ್ವಲ್ಪ ಬೇಗ ಬರಲಿಕ್ಕೆ ಹೇಳು" ಎನ್ನುತ್ತಾ ದೇವರ ಕೋಣೆಗೆ ಹೋದರು.

ಮರುದಿನ ಬಸ್‌ಸ್ಟಾಪ್‌ನಲ್ಲಿ ಶಶಾಂಕನನ್ನು ಮಾತನಾಡಿಸಲು ಪಲ್ಲವಿಗೆ ಆಗಲಿಲ್ಲ. ಅವತ್ತು ಅವನ ಬಸ್ ತುಂಬಾ ಬೇಗ ಬಂದಿತು. ಬಸ್ ಹತ್ತಿ ಆತ ಹೊರಟುಹೋದ.

ಸಂಜೆ ಅವಳಿಗೆ "ಪರೀಕ್ಷೆ" ಇತ್ತು. "ಯಾರು ಬಂದರೂ ಆ ಹಳದೀ ಸೀರೆಯನ್ನೇ ಉಟ್ಟುಕೊಂಡು ಕುಳಿತುಕೋತೀಯ. ಆ ಸೀರೆ ಬಹಳ ಅರಿಷ್ಟ ಇದೆ. ಈ ಸಾರಿ ಬೇರೆ ಉಟ್ಕೋ, ಕೂದಲನ್ನು ಕರಡಿ ಹಾಗೆ ಹರ್‍ರಂತ ಬಿಟ್ಕೋಬೇಡಾ, ಬಿಗಿಯಾಗಿ ಜಡೆ ಹೆಣೆದುಕೋ" ತಾಯಿಯ ಉಪದೇಶ ಹಾಗೇ ಸಾಗಿತ್ತು. "ಅಮ್ಮಾ, ಈ ಟೇಬಲ್ ಕ್ಲಾಥ್ ಸಹ ತುಂಬಾ ಅರಿಷ್ಟ ಇದೆ... ಇದನ್ನೂ ಬಸಲಾಯಿಸೋಣವೆ..." ಪಲ್ಲವಿ ತಾಯಿಯನ್ನು ಕೀಟಲೆ ಮಾಡಿದಳು. ಅವಳಿಗೆ ಅನಿಸಿತ್ತು... ಯಾವುದೂ ಅರಿಷ್ಟವಿರಲಿಲ್ಲ... ಅವರು ಕೇಳಿದ್ದನ್ನು ಕೊಟ್ಟಿದ್ದರೆ... ಬಹುಶಃ ಈ ಸಾರಿ ಬಂದವನು ಒಪ್ಪಿಕೊಳ್ಳಬಹುದು... ಏಕೆಂದರೆ ನನ್ನ ಸಂಬಳ ಈಗ ಏರಿದೆ. ಏಕೋ ಅವಳಿಗೆ ಆತಂಕವಾಯಿತು ಸಮುದ್ರದ ದಂಡೆಗುಂಟ ಇರುವ ಬಂಡೆಗಲ್ಲುಗಳ ಮೇಲೆ 'ಪಲ್ಲವಿ-ಶಶಾಂಕ' ಎಂದು ಬರೆದಿರುವಂತೆ ಅವಳಿಗೆ ಭಾಸವಾಯಿತು.

ಡಾ. ವಿಜಯಕುಮಾರ, ಕಮ್ಮಾರ
'ಬಸವ ಸದನ', ನಂ. ೨೯೪೬, ಎ. ಪಿ. ಎಂ. ಸಿ. [illegible]
ಶಿಗ್ಗಾಂವ - ೫೮೧ ೨೦೫, ಹಾವೇರಿ ಜಿಲ್ಲೆ

# ಶಂಬಾ ವಿಚಾರಧಾರೆ

ಅರವತ್ತು ವರ್ಷಕ್ಕೆ ಅರಳು-ಮರಳು ಎಂಬುದು ಗಾದೆ ಮಾತು. ಆದರೆ ಶಂಬಾ ಎಂಭತ್ತನೆಯ ವಯಸ್ಸಿನಲ್ಲಿ ಒಟ್ಟಾರೆಯಾಗಿ ಈಗಿರುವ 'ಧರ್ಮ' ಸ್ವರೂಪದ ಅಸಂಗತಿಯನ್ನು ತಮ್ಮ 'ಬುಧನ ಜಾತಕ'ದಲ್ಲಿ ಎತ್ತಿ ತೋರಿಸಿದ್ದಾರೆ. ಅವರ 'ಆಳ'ವಾದ ಗ್ರಹಿಕೆಯಿಂದ ಮೂಡುವ ಹೊಸನೋಟಗಳು 'ವ್ಯಕ್ತಿ ಮುಖ್ಯವಲ್ಲ' ಎಂಬ ಅವರ ಧೋರಣೆಯನ್ನು ಬದಿಗೊತ್ತಿ ಅವರನ್ನು ಮೆಚ್ಚುವಂತೆ ಮಾಡುತ್ತವೆ. ಇಲ್ಲಿ ಎರಡು ಕಾರಣಗಳಿಂದ ಶಂಬಾ ನಮಗೆ ಮುಖ್ಯರಾಗುತ್ತಾರೆ: ಅವರು ಎಂಭತ್ತರ ಇಳಿವಯಸ್ಸಿನಲ್ಲಿಯೂ ಉಳಿಸಿಕೊಂಡು ಬಂದ ವೈಚಾರಿಕ ಪ್ರಖರತೆ ಮತ್ತು ಯಾವ ಹುಸಿ ಆಸರೆಗಳಿಗೆ ಆತುಗೊಳ್ಳದೆ ತೊಂಬತ್ತೈದರವರೆಗೆ ಅವರು ಬದುಕಿದ ರೀತಿ. 'ಬುಧನ ಜಾತಕ'ವನ್ನು ಶಂಬಾರ 'ಪ್ರಣಾಲಿಕೆ' ಎನ್ನಬಹುದು. ಈ ಪುಸ್ತಕದ ಹಿನ್ನೆಲೆಯಲ್ಲಿ ಶಂಬಾ ವಿಚಾರಧಾರೆಯನ್ನು ತಿಳಿದುಕೊಳ್ಳುವ ಪ್ರಯತ್ನವಾಗಿ ಈ ಪ್ರಬಂಧವನ್ನು ಮಂಡಿಸುತ್ತಿದ್ದೇನೆ.

ಮನುಷ್ಯ, ಇತಿಹಾಸ ಮತ್ತು ಧರ್ಮಗಳನ್ನು ಒಂದೆಡೆ ಇಟ್ಟು ನೋಡಿದಾಗ ಮನುಷ್ಯ ಇತಿಹಾಸದ ವಿಷಯವಾಗಿರುವಂತೆ ಇತಿಹಾಸವನ್ನು ರೂಪಿಸುವವನೂ ಆಗಿದ್ದಾನೆ ಎಂಬುದು ತಿಳಿಯುತ್ತದೆ. ಆದರೆ ಧರ್ಮಗಳ ವಿಷಯವಾಗಿ ಹಾಗೆ ಹೇಳಲು ಬರುವುದಿಲ್ಲ. ಮನುಷ್ಯ ಮತ್ತು ಇತಿಹಾಸದ ನಂತರ ಧರ್ಮ ಹುಟ್ಟಿದ್ದು. ಪ್ರತಿಯೊಂದು ಧರ್ಮಕ್ಕೂ ಒಂದು ಇತಿಹಾಸವಿದೆ. ಅಂದರೆ ಯಾವ ಧರ್ಮ ಯಾವ ಕಾಲದಲ್ಲಿ ಯಾರಿಂದ ಸ್ಥಾಪಿತವಾಯಿತು ಎಂಬ ವಿವರ ದೊರೆಯುತ್ತದೆ. ಅಂದರೆ ಧರ್ಮ ಇತಿಹಾಸದ ಕಕ್ಷೆಯಲ್ಲಿ ಬರುವಂತೆ ಧರ್ಮದ ಕಕ್ಷೆಯಲ್ಲಿ ಇತಿಹಾಸ ಬರಲಾರದು.

ಇಷ್ಟೊಂದು ಧರ್ಮಗಳು ಈ ಜಗತ್ತಿನಲ್ಲಿ ಹುಟ್ಟಿದ್ದರೂ ಮನುಷ್ಯನಲ್ಲಿ ಇಂದಿಗೂ ಉಳಿದುಬಂದಿರುವ ಹತಾಶೆ-ಸಂಕಟಗಳಿಗೆ ಕಾರಣವೇನು ಎಂದು ಪ್ರಶ್ನಿಸಿಕೊಂಡಾಗ ಬಹುತೇಕ ಧರ್ಮಗಳು ಒಬ್ಬ ವ್ಯಕ್ತಿಯಿಂದ ಹುಟ್ಟಿದುದನ್ನು ಕಾಣುತ್ತೇವೆ. ಯಾವುದೇ ಒಂದು ವಸ್ತು ವ್ಯಕ್ತಿ ಕೇಂದ್ರಿತವಾದರೆ ಅಲ್ಲಿ ಹೃದಯಗಳು ಮಾತನಾಡದೆ 'ಬುದ್ಧಿ' ಮಾತನಾಡತೊಡಗುತ್ತದೆ. ಬುದ್ಧಿವಂತಿಕೆಯಿಂದ ಹುಟ್ಟಿದ ಯಾವ ಧರ್ಮವೂ ಮನುಕುಲವನ್ನು ಉದ್ಧಾರ ಮಾಡಲಾರದು. ಧರ್ಮಗಳ ಬುದ್ಧಿವಂತಿಕೆಯ ಉದಾಹರಣೆಗಳನ್ನು ಮುಂದೆ ನೋಡಬಹುದು.



ಚಿತ್ರಕೃಪೆ : ಶಂಬಾ ಸಂಪುಟ ಕಂನಾಡು-ಕರ್ನಾಟ ೧ (ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ)

ಈಗ ಧರ್ಮ ಮತ್ತು ಭಾಷೆಗಿರುವ ಸಂಬಂಧವನ್ನು ಗುರುತಿಸಿದಾಗ ಧರ್ಮ ಭಾಷೆಯನ್ನು ನಾಶಗೊಳಿಸಿದ್ದು ತಿಳಿಯುತ್ತದೆ. ಭಾಷೆ ಒಬ್ಬ ವ್ಯಕ್ತಿಯಿಂದ ಹುಟ್ಟಿ ಬೆಳೆಯುವುದಿಲ್ಲ. ಭಾಷೆ ಹುಟ್ಟಿ ಬೆಳೆಯುವುದು ಪರಸ್ಪರ ಕೊಡು ಕೊಳ್ಳುವಿಕೆಯ ವ್ಯವಹಾರದಲ್ಲಿ. ಈಗ ನನ್ನ ಮಾತಿಗೆ ನೀವು ಸ್ಪಂದಿಸಿದರೆ ಭಾಷೆ ಕೊನರತೊಡಗುತ್ತದೆ. ಅಂದರೆ ಒಬ್ಬ ವ್ಯಕ್ತಿಯಾಗಿ ನನ್ನ ಭಾಷೆಗೆ ಶಕ್ತಿಯನ್ನು ತುಂಬುತ್ತಿರುವವರು ನೀವು, ಆದುದರಿಂದ ನಾನೇನಾದರೂ ನನ್ನ ಮಾತುಗಳಿಂದ ನಿಮ್ಮಲ್ಲಿ ಸ್ಪಂದನಗಳನ್ನು ಹುಟ್ಟಿಸುತ್ತಿದ್ದರೆ ಅದಕ್ಕಾಗಿ ನಾನು ಕೃತಜ್ಞನಾಗಿರಬೇಕಾದುದು ನಿಮಗೆ. ಹೀಗೆ ಶಂಬಾ ವಿಚಾರಧಾರೆಯ ಮುಖ್ಯಸೆಲೆ 'ವ್ಯಕ್ತಿಯಲ್ಲ, ಸಮಷ್ಟಿ ಮುಖ್ಯ' ಎಂಬುದು ಭಾಷೆಯ ಬಗೆಗಿನ ಅವರ ನಿಲುವಿನಿಂದ ಗೊತ್ತಾಗುತ್ತದೆ. ಆದುದರಿಂದಲೇ ಆಂಗ್ಲದ "Concept" ಪದಕ್ಕೆ ಪರಿಕಲ್ಪನೆ, ಕಲ್ಪನೆಗಳ ಕನ್ನಡ ಬದಲಿಗಳನ್ನು ಶಂಬಾ ಒಪ್ಪುವುದಿಲ್ಲ. ಪರಿಕಲ್ಪನೆ, ಕಲ್ಪನೆ ಏನಿದ್ದರೂ ವ್ಯಕ್ತಿಯಾಧಾರಿತ ಶಬ್ದಗಳು, ಶಂಬಾ ಪ್ರಕಾರ 'ಪರಿಕಲ್ಪನೆ' ಎಂದರೆ ಭಾಷೆಯ ಧಾರಣಶಕ್ತಿ. ಧಾರಣಶಕ್ತಿ ಎಂದರೆ ಭಾಷೆಯ ಭಾವನೆಗಳನ್ನು ಭರಿಸಿಕೊಳ್ಳುವ, ವಿಚಾರಗಳನ್ನು ಹಿಡಿದಿಟ್ಟುಕೊಳ್ಳುವ ಹೊರುವ ಶಕ್ತಿ. ಈ ಶಕ್ತಿ ಭಾಷೆ ಜನಬಳಕೆಯಲ್ಲಿ ಬಂದಾಗಲೇ ಸಾಧ್ಯ. ಹೀಗೆ ಜನರ ಉಸಿರಿನಿಂದ ಪ್ರಾಣ ಪಡೆಯುವ ಭಾಷೆಯನ್ನು ಶಬ್ದಮಣಿದರ್ಪಣದ ಕೇಶಿರಾಜ 'ನಾಭಿಮೂಲದೊಳ್ ಜನಿಯಿಸುಗಂ' ಮತ್ತು ವಚನವೊಂದು 'ಮಾತು ಜ್ಯೋತಿರ್ಲಿಂಗ ಶಕ್ತಿ' ಎನ್ನುವುದರಲ್ಲಿ ಭಾಷೆಯನ್ನು ವ್ಯಕ್ತಿ ಕೇಂದ್ರಿತ – ಬೌದ್ಧಿಕ ಕಸರತ್ತನ್ನಾಗಿ ಮಾಡುವ ಅಪಾಯವನ್ನು ಕಾಣುತ್ತೇವೆ.

**ಪಾಂಡುರಂಗ ಗುಡಿ**

ನಾವು ಹನುಮಂತನನ್ನು ಪೂಜಿಸುವುದು ನಮ್ಮ 'ಪೂರ್ವಸ್ಮರಣೆ'ಯ ಕುರುಹು. ಇದು ಭಾಷೆಗೆ ಮುಂಚಿನ ಸ್ಥಿತಿ. ಭಾಷೆಯ ಹುಟ್ಟು ಮತ್ತು ಸಂವಹನ ಪ್ರಜ್ಞೆ ಜಾಗ್ರತವಾದಾಗ ಮಾತ್ರ ಸಾಧ್ಯ. ಆದರೆ ಕಾಣ್ಕೆಯಾಗಿ ಕಂಡ ವೇದದ 'ಅಂಭೃಣೀ ಸೂಕ್ತ' ಕುಮಾರಿಯ ಮೈಯಲ್ಲಿ

ಆವೇಶವಾದಾಗ ಬಂದದ್ದು. ಪ್ರಜ್ಞೆಯ ಮೂಲಕವೇ ಭಾಷೆಯಿರುವಾಗ ಪ್ರಜ್ಞಾತೀತ ಸ್ಥಿತಿಯಲ್ಲಿ ಪರಮಹಂಸ, ಮೈಲಾರದೇವರ ಕಾರಣಿಕರ ಬಾಯಿಂದ ಬಂದ ಸಂದಿಗ್ಧತೆಯ ಮಾತಿಗೆ ವಿಶೇಷಾರ್ಥವನ್ನು ಹಚ್ಚುವುದು ಯಾವ ರೀತಿಯಲ್ಲಿ ಸರಿ ? ಬೃಹದಾರಣ್ಯಕದಲ್ಲಿ ಪ್ರಾಣಃ ವಾ ಋಷಯೇ ಎಂದರೆ ಲಿಂಗಶಕ್ತಿಯ ಆವೇಶವೇ ಋಷಿತ್ವಕ್ಕೆ ಕಾರಣ ಎಂಬುದನ್ನು ನಾವು ವಿಚಾರ ಮಾಡದೆ ಒಪ್ಪಿ ಕೊಂಡಿದ್ದರಿಂದ ಜ್ಞಾನೇಶ್ವರನು ಕೋಣನ ಬಾಯಿಂದ ವೇದ ನುಡಿಸಿದುದನ್ನು ಮತ್ತು ಲೊಚಗುಟ್ಟುವ ಹಲ್ಲಿಗೆ ಮುಂದಾಗುವುದನ್ನು ಸೂಚಿಸುವ ಜ್ಞಾನವಿರುವುದನ್ನು ಒಪ್ಪಿಕೊಳ್ಳುವುದು ಸಾಧ್ಯವಾಗುತ್ತದೆ.

ಹೀಗೆ ಧರ್ಮ ವ್ಯಕ್ತಿ ಕೇಂದ್ರಿತವಾದಾಗ ಬುದ್ಧಿಯ ಸ್ಥಾನ ಹಿರಿದಾಗುತ್ತದೆ. ಬುದ್ಧಿಶಕ್ತಿಗೆ ಮಿತಿಯಿರುವುದರಿಂದ ಅದು ಒಂದು ಹಂತದವರೆಗೆ ಮಾತ್ರ ಸಾಗುತ್ತದೆ. ಸಾಗುವ ಕ್ರಿಯೆ ನಿಂತಾಗ ಅನುಭವಜನ್ಯವಲ್ಲದ ಅಮೃತ, ಅಲೌಕಿಕ, ಅನಂತ, ನಿರ್ಗುಣ, ನ-ಚಿಕೇತ ಮುಂತಾದ ನೇತ್ಯಾತ್ಮಕ ಪದಗಳ ಸೃಷ್ಟಿ ಆರಂಭವಾಗುತ್ತದೆ. ಮೃತವಲ್ಲದ್ದು ಇರಲಾಗದ, ಲೌಕಿಕವಲ್ಲದ್ದು ಕಾಣಲಾಗದ, ಅನಂತವಲ್ಲದ್ದು ನೋಡಲಾಗದ, ಗುಣರಹಿತವಾದುದು ಸಿಗಲಾರದ, ನ-ಚಿಕೇತ ಎಂದರೆ ತಿಳಿಯಲಾರದ್ದು ಇರಲಾಗದ ತತ್ವವನ್ನು ಧರ್ಮವಾಗಿಸುವ ಪ್ರಯತ್ನ ಶುರುವಾಗುತ್ತಿದೆ. ಇಲ್ಲಿಯೂ ಪ್ರಶ್ನೆಗಳೆದ್ದಾಗ ಋಗ್ವೇದದ ಭಾಷಾಂತರಕಾರನೂ, ಮೇಧಾವಿಯೂ ಎನ್ನಿಸಿದ ಮ್ಯಾಕ್ಸ್‌ಮುಲ್ಲರನಿಗೆ 'ರೂಪಕ' ಭಾಷೆಯಲ್ಲಿ ತಲೆಯೆತ್ತಿದ ಕಾರಣವು ಗೊತ್ತಾಗುವುದಿಲ್ಲ. ಬುದ್ಧಿಜೀವಿ ಬರ್ಟ್ರೆಂಡ್ ರಸಲ್ ಒಂದು ಸಂಕೇತಕ್ಕೆ ಒಂದೇ ಅರ್ಥವಿರುವ ಶಾಸ್ತ್ರಶುದ್ಧ ಭಾಷೆಯನ್ನು ಕಲ್ಪಿಸಿಕೊಳ್ಳುತ್ತಾರೆ. ವಿಚಾರಗಳಲ್ಲಿ ಗೊಂದಲಗಳೆದ್ದಾಗ ಭಾಷೆ ನಿಗೂಢವಾಗುತ್ತದೆ, ಸಂಕೇತಗಳು ಶುರುವಾಗುತ್ತವೆ. ಪೈಥಾಗೊರಸನ ದೇವರು ಆಂಗ್ಲ ಸಂಖ್ಯೆ ೧ ಆಗುತ್ತದೆ, ಪ್ಲೇಟೋನ ದೇವರು ಜ್ಯಾಮಿಟ್ರಿ ಆಗುತ್ತದೆ. ಕ್ರೈಸ್ತ ಧರ್ಮದಲ್ಲಿ ಮೋಂಬತ್ತಿಯ ಬಳಕೆ ಶುರುವಾಗುತ್ತದೆ. ಈ ೧, ಈ ಮೋಂಬತ್ತಿ ದಶಾಂಗುಲ ಉದ್ದವಿರುತ್ತದೆ. ಹಿಂದೂ ಧರ್ಮದ ದಶಾವತಾರಗಳ ಕಲ್ಪನೆಯನ್ನೂ ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಧರ್ಮಗಳ ಆಶಯ, ದೇವರ ಸ್ವರೂಪ ಏನು ಎಂಬುದು ಸ್ಪಷ್ಟವಾಗುತ್ತದೆ. ಪುರೀ ಎಂದರೆ ಗವಿ ಶಯೀ ಎಂದರೆ ಮಲಗಿರುವ ಪುರುಷ ದೇವರಾಗುತ್ತಾನೆ. ಉತ್ತಮ ಎಂದರೆ ನಿಗುರುವಿಕೆಯೆಂದು ಅರ್ಥ. ಈ ಪುರುಷ ಶ್ರೇಷ್ಠನಾದಾಗ ಪುರುಷೋತ್ತಮನಾಗುತ್ತಾನೆ (ನಾರೋತ್ತಮ ಎಂಬ ಪದ ಬಳಕೆಯಲ್ಲಿ ಇಲ್ಲದಿರುವುದರಿಂದ ಈ ವಾದಕ್ಕೆ ಹೆಚ್ಚು ಪುಷ್ಟಿ ದೊರೆಯುತ್ತದೆ). ಇಂಥ ಅಸಂಗತ ತತ್ವವನ್ನು ಪೈಥಾಗೊರಸ್ 'ವೈರುಧ್ಯಗಳ ನಿಯಮ' ಎಂದು ಕರೆದು ಘನತೆಗೇರಿಸಿದ, ಹೆಗಲ್ ಅದನ್ನು ಸಮರ್ಥಿಸಿದ.

ರಾಷ್ಟ್ರೀಯ ಮಟ್ಟದಲ್ಲಿ ಪವಿತ್ರ ಗ್ರಂಥವೆನ್ನಿಸಿದ ಭಗವದ್ಗೀತೆ ಈ ಅಸಂಗತಿಯನ್ನು ಉತ್ತುಂಗಕ್ಕೇರಿಸುತ್ತದೆ. ಭಗವದ್ಗೀತೆಯೆಂದರೆ ಭಗವಂತನ ಗೀತೆ. ಈ ಭಗವಂತ ಎಂದರೆ ಯಾರು ? ಭಗ ಎಂದರೆ ತೂತು, ಭಗವಂತನೆಂದರೆ ತೂತಿನೊಳಗಿರುವವನು. ತೂತಿನೊಳಗೆ ಮಾತ್ರ ಇರಬಲ್ಲ, ಹೊರಗೆ ಅಸ್ತಿತ್ವವಿಲ್ಲದಿರುವ ಈ ಭಗಸ್ಥ ಲೋಕವನ್ನು ನಾಶಗೊಳಿಸುವ ಕಾಲ ತಾನು ಎನ್ನುವುದು ಎಂಥ ಪವಾಡ! ಅಸಲು - ಈತ ಮಾತನಾಡುವುದು ಯಾವ ಬಾಯಿಂದ ? ನನಗೆ ಶರಣು ಬಾ ಎನ್ನುವ ಭಗವಂತನ ಶಕ್ತಿ ಬುದ್ಧಿ ಎಂದರೆ ಕೃಷ್ಣ ಶಕ್ತಿ. ಮೋಕ್ಷ ಕೊಡುತ್ತೇನೆ ಎನ್ನುವ ಈತನದು ವ್ಯಕ್ತಿಗತ ನಿಲುವಾಗಿದ್ದು ಇದು ಸಮಾಜ ವಿರೋಧಿ. ನಾನೇ ಬುದ್ಧಿ ಎನ್ನುವ ಈತ ಬುದ್ಧಿಯ ದೇವರು, ಹೃದಯದವನಲ್ಲ. ಗ್ರೀಕ್‌ನಲ್ಲಿನ ಸೋಫಿಸ್ಟ್ ಎಂದರೆ ವ್ಯಕ್ತಿವಾದಿ ಧರ್ಮಕ್ಕಿಂತ ಇದು ಯಾವ ರೀತಿಯಲ್ಲಿ ಭಿನ್ನ? ಗೋರ್ಜಿಯಾಸ್ ಹೇಳುವಂತೆ ಮೇಲ್ನೋಟಕ್ಕೆ ಸರಿಕಾಣುವ ಕಣ್ಕಟ್ಟಿನ ಮೋಸವೇ ಗೀತೆಯ ಸಾರ. ಗಂಡರ ಗಂಡ ಎಂದು ರಾಜರು ತಮ್ಮನ್ನು ಕರೆದುಕೊಳ್ಳುವಂತೆ ಭಗವದ್ಗೀತೆಯ ಭಗವಂತ ತನ್ನನ್ನು ಕಾಲೇಶ್ವರ ಎಂದುಕೊಳ್ಳುತ್ತಾನೆ. ಈತ ಕಾಲೇಶ್ವರನಾದರೆ ಕಾಲನೆಂಬುವನು ಒಬ್ಬನು ಇರಬೇಕಲ್ಲವೆ ? ಅವನೇ ಯಮ, ಅವ ಈ ಭಗವಂತನಂತೆ ಸಿಕ್ಕವರನ್ನೆಲ್ಲಾ ಕೊಲ್ಲುವುದಿಲ್ಲವಾದುದರಿಂದ, ವಿಶ್ವ ನಿಯಮಕ್ಕೆ ಅನುಸಾರವಾಗಿಯೇ ಮರಣವನ್ನು ಕರುಣಿಸುವುದರಿಂದ ಅವನನ್ನು ಯಮಧರ್ಮ ಎನ್ನುತ್ತಾರೆ. ಈ ಯಮಧರ್ಮನನ್ನು ಕೆಳಕ್ಕಿಳಿಸುವ ತಂತ್ರವಾಗಿಯೇ ಕೋಣವನ್ನು ಇವನ ವಾಹನವನ್ನಾಗಿಸಿ, ಯಮಿ ಎಂಬ ತಂಗಿಯನ್ನು ಬುದ್ಧಿ ಪೂರ್ವಕ ಧರ್ಮ ಸೃಷ್ಟಿಸಿದೆ. ಭಗವದ್ಗೀತೆಯ ಮೂಲ ಮಾದರಿಯಾದ ಕಠ ಉಪನಿಷತ್ತಿನ ಒಂದು ಸಂಮೋಹಕ ಶ್ಲೋಕ ಹೀಗಿದೆ: ಇಂದ್ರಿಯಾಣಿ ಹಯಾನಿ ಆಹುಃ ಶರೀರಂ ರಥ ಏವ ತು। ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಏವ ಚ॥ ಮೇಲ್ನೋಟದಲ್ಲಿ ಸರಳವಾಗಿ ಕಾಣುವ ಈ ಶ್ಲೋಕದ ಗೂಢಾರ್ಥಕ್ಕಾಗಿ ರಥದ ಸೊಬಗನ್ನು ಸವಿಯಬೇಕು. ಭಗವದ್ಗೀತೆಯ ರಥದ ವೈಶಿಷ್ಟ್ಯವೆಂದರೆ ಇದರ ಸಾರಥಿ ಸಾಕ್ಷಾತ್ ಭಗವಂತ. ಈತ ರಥದಿಂದ ಬೇರೆಯಲ್ಲ, ರಥದಿಂದ ಇಳಿಯುವುದಿಲ್ಲ ಎಂದು ಮೊದಲೇ ಹೇಳಿರುವುದರಿಂದ ರಥವು ಸಾರಥಿಯ ಅಂಗವಾಗಿದೆ. 'ಕುರುಕ್ಷೇತ್ರ'ದಲ್ಲಿ ಯುದ್ಧ ನಡೆಯುತ್ತಿರು ವುದರಿಂದ ಯುದ್ಧ ಮಾಡುವುದು ಕಾಮಿನಿಯೊಡನೆ. ನಮ್ಮ ಸುದೈವಕ್ಕೆ ಭಗವಂತನೇ ಖುದ್ದಾಗಿ ಒಂದು ಕಡೆ ಹೀಗೆ ಹೇಳುತ್ತಾನೆ: ಮಯಾ ಅಧ್ಯಕ್ಷೇಣ ಪ್ರಕೃತಿಃ ಸೂಯತೇ ನ ಚರಾಚರಮ್. ಅಧ್ಯಕ್ಷ ಎಂದರೆ ಯಜಮಾನ. ಯಜಮಾನ ಭಗವಂತನಾದರೆ ಭೂಮಾತೆ ಯಜಮಾನಿ ಆಗಿರಲೇಬೇಕು. ಆದುದರಿಂದ ಈ ಶ್ಲೋಕದೊಳಗಿನ ಅಧ್ಯಕ್ಷ ಅಥವಾ ಅಧಿ (ಮೇಲಣ) ಅಕ್ಷ ಇರುವ ಎಡೆಯೇ ಪ್ರಕೃತಿ ಭಗ ಇರಬೇಕು. ಈ 'ಭಗ' ಇಲ್ಲದೆ ಇವನಿಗೆ ಭಗವಂತನೆಂಬ ಹೆಸರೇ ಸಲ್ಲದು.

ಎಂಥ ಪ್ರಾಜ್ಞರಿದ್ದರೂ ಹೆಣ್ಣು-ಗಂಡು ಒಬ್ಬರೊಬ್ಬರ ಆ-ಲಿಂಗನದಲ್ಲಿ ಮೈಮರೆಯಲು ಅಸಮರ್ಥರಾದರೆ, ಈ ಕ್ರೀಡೆಯಲ್ಲಿ ಕಾಮತೃಪ್ತಿಯ ಆ ರಸನಿಮಿಷದ 'ಮುಕ್ತಿ'ಯ 'ಮಹೋನ್ನತ' ಅನುಭವದಿಂದ ವಂಚಿತರಾಗಬೇಕಾಗುತ್ತದೆ. ಭಗವಂತನ ನಿಷ್ಕಾಮ ಕರ್ಮದ ಚಟ ಹತ್ತಿದರೆ ಕಾಮಕೇಳಿಯ ನೈಸರ್ಗಿಕ ಆನಂದ ಇಲ್ಲವಾಗಿ ಅದು ನಿಜವಾಗಿ ವ್ಯಭಿಚಾರವಾಗುತ್ತದೆ. ಜೀವನ ಪರ್ಯಂತ ಕುಮಾರ-ಕುಮಾರಿಯರಾಗಿ ಉಳಿಯುವ ಸಂಪ್ರದಾಯದ ಕಟ್ಟಿಗೆ ಬಿದ್ದವರಿಗೆ ಲೈಂಗಿಕ ಹಸಿವನ್ನು ಕಳ್ಳತನದಲ್ಲಿ ನೀಗಿಕೊಳ್ಳಲು ಭಗವದ್ಗೀತೆ 'ಅಸಂಗ ಶಸ್ತ್ರ ಧರಿಸಿ' ಎಂದು ಹೇಳಿ ಉಂಡು ಉಪವಾಸಿಗಳಾಗಿ, ಬಳಸಿ ಬ್ರಹ್ಮಚಾರಿಗಳಾಗಿ ಎಂಬ ದಾರಿಯನ್ನು ತೋರಿಸಿದೆ.

ಗುಹ್ಯಾತ್ ಗುಹ್ಯತಮಂ ಶಾಸ್ತ್ರ ಎಂದು ಸಾರುವ ಗೀತೆಯ ಭಕ್ತರಾದ ಗಾಂಧೀಜಿ ಗುಟ್ಟೆಂಬುದು ಒಂದು ಪಾಪ ಎಂದು ಹೇಳುವುದು ಎಂಥ ಐರನಿ ನೋಡಿ. ಆದರೆ ಸಾರ್ವಜನಿಕ ಪ್ರಜ್ಞೆ ಅಥವಾ ಸಮಾಜ ಇದನ್ನು ಕೃಷ್ಣ ಕಾರಸ್ಥಾನೀ, ಕಪಟನಾಟಕ ಸೂತ್ರಧಾರಿ ಎಂದು ಲೇವಡಿ ಮಾಡುತ್ತದೆ. ಸಾಮಾಜಿಕ ನಿಲುವನ್ನು ವಿರೋಧಿಸಿ ಗೀತೆಯನ್ನು ಪಂಚಮವೇದ ಎಂದು ಕರೆಯಲಾಗುತ್ತದೆ.

ಅರ್ಜುನನನ್ನು ಎಂದರೆ ಪ್ರಕಾಶವನ್ನು ಕೃಷ್ಣ ಎಂದರೆ ಕತ್ತಲು ಅನುಸರಿಸಬೇಕು. ಆದರೆ ಇಲ್ಲಿ ಕತ್ತಲನ್ನೇ ಪ್ರಕಾಶ ಅನುಸರಿಸುತ್ತಿದೆ. ಈ ಕತ್ತಲಿನ ನಾರಾಯಣ ಮಹಾಭಾರತದಲ್ಲಿ ಅಥವಾ ಗೀತೆಯಲ್ಲಿ ಎಲ್ಲಿಯೂ ಬರುವುದಿಲ್ಲವೆಂದು ಸಮಾಧಾನ ಪಟ್ಟುಕೊಳ್ಳಬೇಡಿ. ಯಾಕೆಂದರೆ ಮಹಾಭಾರತವನ್ನು ಬರೆದವನೇ ಗುಹ್ಯಸ್ವರೂಪಿ ವ್ಯಾಸ ಎಂಬುದನ್ನು ನೆನಪಿಸಿಕೊಳ್ಳಿ.

ಇಷ್ಟೆಲ್ಲ ಯೋಜಿತವಾಗಿ ನಿರ್ಮಾಣಗೊಂಡ ಬುದ್ಧಿ ಪ್ರಾಬಲ್ಯದ ಧರ್ಮವನ್ನು ಚರಿತಪ್ರಜ್ಞರು ಪ್ರಶ್ನಿಸಬಾರದು ಎಂಬುದಕ್ಕಾಗಿ ಅವರನ್ನು 'ಸ್ಥಿತ ಪ್ರಜ್ಞ' ಎಂದರೆ ಸ್ಥಗಿತ ಪ್ರಜ್ಞರನ್ನಾಗಿಸಲು ಕೃಷ್ಣನ ನಾದಲೀಲೆ, ಓಂಕಾರ, ಜಪ-ತಪ ಮತ್ತು ಯೋಗಾಸನಗಳ ಅನುಷ್ಠಾನ (ರಾಜಕಾರಣಿಗಳು ಮತದಾರನನ್ನು ಅವಿದ್ಯಾವಂತರನ್ನಾಗಿಡುವಂತೆ) ಪ್ರಯತ್ನದಂತೆ ಇದು ಎಂಬ ಹೋಲಿಕೆಯನ್ನು ತಿಳಿದುಕೊಂಡರೆ 'ಸ್ಥಿತಪ್ರಜ್ಞ' ತಂತ್ರ ಇನ್ನಷ್ಟು ಸ್ಪಷ್ಟವಾಗುತ್ತದೆ.

ಬೀಚಿ ಒಮ್ಮೆ ಬರೆದಿದ್ದರು, ಬೇಂದ್ರೆಯವರ ಮನೆಗೆ ಅವರು ಹೋಗಿದ್ದಾಗ ಬೇಂದ್ರೆ 'ಆ ಮನೆಗೆ (ಎಂದರೆ ಶಂಬಾ ಮನೆಗೆ) ಹೋಗಿದ್ದಿರೇನು ? ಹೋಗಿದ್ದರೆ ಹೊರಗಡೆಯ ಬಕೆಟ್ ನೀರಿನಿಂದ ಕೈಕಾಲು ತೊಳೆದುಕೊಂಡು ಒಳಗೆ ಬನ್ನಿ' ಎಂದಿದ್ದರಂತೆ. ಡಿವಿಜಿ ಶಂಬಾಗೆ 'ನೀವು ಬರೆದ ಪುಸ್ತಕಗಳನ್ನು ನನಗೆ ಕಳುಹಿಸಬೇಡಿ' ಎಂದು ಬರೆದಿದ್ದರಂತೆ. ಬೇಂದ್ರೆ-ಶಂಬಾ ನಡುವಣ ಜಗಳಕ್ಕೆ ಕಾರಣ ಇದು: ಶಂಬಾ ಶ್ರದ್ಧಾವಂತರ ಶ್ರದ್ಧಾಕೇಂದ್ರಗಳನ್ನೇ ಅಲುಗಾಡಿಸಿಬಿಟ್ಟಿದ್ದರು. ಈ ರೀತಿ ಇಡೀ ಭಾರತೀಯರ ಶ್ರದ್ಧಾಕೇಂದ್ರಗಳು ಒಮ್ಮೆ ನಾಶವಾದರೆ ಭಾರತದಲ್ಲಿ ಯಾವ ಜಾತಿ ಹುಸಿ ಧರ್ಮಗಳು ಉಳಿಯಲಾರವು ಎನ್ನಿಸುತ್ತದೆ.

ಇನ್ನು ಭಾರತದ ಈ ಬುದ್ಧಿನಿರ್ಮಿತ ಧರ್ಮದೊಡನೆ ಇತರ ಧರ್ಮಗಳಿಗಿರುವ ಹೋಲಿಕೆಯನ್ನು ಕುರಿತು: ಧರ್ಮದಲ್ಲಿ ಬುದ್ಧಿಯ ಪಾತ್ರದ ಉಗಮ ಭಾರತ ಮತ್ತು ಗ್ರೀಸ್‌ನಲ್ಲಿ ಒಂದೇ ಕಾಲಕ್ಕೆ ಆಯಿತು ಎಂಬುದು ತಿಳಿಯುತ್ತದೆ. ಪ್ಲೇಟೋ ಶರೀರವನ್ನು ಆತ್ಮದ ಕಾರಾಗೃಹವೆಂಬಂತೆ ಪ್ರತಿಪಾದಿಸಿದ್ದಾನೆ. ಅದು ಹಾಗೂ ಪೈಥಾಗೊರಸನು ದೇಹವನ್ನು ಪಿರಮಿಡ್ ಎಂದದ್ದು ಮತ್ತು ಭಾರತೀಯ ಕಲ್ಪನೆಯ ಬೃಂದಾವನ ಎಲ್ಲಾ ಒಂದೇ. ಭಗವದ್ಗೀತೆಯಲ್ಲಿ ಭಗವಂತ ತಾನು ಮೃತ್ಯುಸ್ವರೂಪಿ ಎನ್ನುತ್ತಾನೆ. ಸಾವು ಮತ್ತು ಅದಕ್ಕಾಗಿ ಯತ್ನವು ಸರಿಯಾದ ದಾರ್ಶನಿಕ ದೃಷ್ಟಿ ಎಂಬ ಪ್ಲೇಟೋವಿನ ಹೇಳಿಕೆಗೆ ಇದು ತಾಳೆಯಾಗುತ್ತದೆ. ಬೃಹದಾರಣ್ಯಕದ ಚಕ್ಷುಃ ವೈ ಸತ್ಯಂ ಎಂಬುದು ಪ್ಲೇಟೋನ ನೇತ್ರ ಅಥವಾ ಸತ್ಯದ ಸೂರ್ಯ

ಎಂಬ ಅರ್ಥವನ್ನೇ ನೀಡುತ್ತದೆ. ಆದರ್ಶ ರಾಜ್ಯದ ಕಲ್ಪನೆ ನೀಡುವ ಪ್ಲೇಟೋನ ಸಂತತಿಗಾಗಿ ಮಾತ್ರ ಸಂಭೋಗ ಚಿತ್ರವನ್ನು ನೆನೆದಾಗ ವ್ಯಾಸನ ನಿಯೋಗದ ಕಲ್ಪನೆ ನೆನಪಾಗದಿರದು. ಚಿತ್‌ಶಕ್ತಿಯ ಉಪಾಸಕನಾಗಿದ್ದ ಶಾಪನ್‌ಹೌಅರನು ಪ್ರಪಂಚವನ್ನು ಇಚ್ಛೆ, ಮತ್ತು ಭಾವನೆಗಳ ವಿಶ್ವ ಎಂಬುದಾಗಿ ಭಾವಿಸುತ್ತಿದ್ದ. ಪ್ರಜ್ಞೆಯ ಅಂಗವಾದ ಮನಸ್ಸನ್ನು ಶೂನ್ಯಗೊಳಿಸಿ ಚಿದ್ವಿಲಾಸದ ತಾತ್ವಿಕ ಭೂಮಿಕೆಯನ್ನು ಸ್ವೀಕರಿಸಿದ ಉಪನಿಷತ್‌ಗಳು ಇವನಿಗೆ ಪರಮಾನಂದಕಾರಿಯಾದದ್ದು ಸಹಜವೇ ಆಗಿದೆ. ಗೌತಮನಿಗೆ ಜ್ಞಾನೋದಯವಾದದ್ದು ಬೋಧಿವೃಕ್ಷದಡಿಯಲ್ಲಿ ಮತ್ತು ಕ್ರೈಸ್ತ ಮತ್ತು ಹೀಬ್ರೂ ಧರ್ಮಗಳಲ್ಲಿ ಬರುವ ಜ್ಞಾನವೃಕ್ಷದೊಳಗಿನ ಫಲವನ್ನು ತಿನ್ನುವ ಪ್ರಸಂಗ ಈ ಧರ್ಮಗಳ ಮೂಲಸೆಲೆ ಬೌದ್ಧಿಕವಾದುದು ಎಂಬುದನ್ನು ಸೂಚಿಸುತ್ತದೆ.

ಅನುಭವಕ್ಕೆ ಸಿಕ್ಕ ಸತ್ಯವನ್ನು ಅನುಭವದಾಚೆ ಇರುವ ಕಲ್ಪನೆಗೆ ಬಳಸಿದರೆ ಆಗುವ ಆಭಾಸವನ್ನು ಕನಕನ ಕಿಂಡಿ ಪ್ರಸಂಗವು ಸ್ಪಷ್ಟಗೊಳಿಸುತ್ತದೆ. ಕನಕನು ಕಿಂಡಿಯೊಳಗಿಂದ ಭಗವಂತನನ್ನು ನೋಡುತ್ತಿದ್ದ ಎಂಬುದು ಆತನ ಲೈಂಗಿಕಾನುಭವವನ್ನು ಸೂಚಿಸುತ್ತದೆ. ಆತ ಬಯಲು ಆಲಯದ ಒಳಗೆ ಎಂದಾಗ ಬಯಲನ್ನು ಲಿಂಗವೆಂದು ಆತನ ಅನುಭವದ ಹಿನ್ನೆಲೆಯಲ್ಲಿ ನೋಡಿದರೆ ಹೋಲಿಕೆ ಸಹಜವಾಗಿ ಕಾಣುತ್ತದೆ. ಆದರೆ ಕನಕ ಈ ಅನುಭವವನ್ನು ಅದರ ಪರಿಧಿಯಾಚೆ ನೋಡಲು ಹೊರಟಾಗ ಆಲಯವು ಬಯಲಿನಲ್ಲಿ ಎಂದು ಹೇಳಿ ಎಡವುತ್ತಾನೆ. ಹೀಗೆಂದಾಗ ಇಡೀ ಪ್ರಪಂಚವೇ ಆಲಯ, ಎಂದರೆ ಕಿಂಡಿಯಾಗುತ್ತದೆ ಮತ್ತು ಈ ಕಿಂಡಿಯಲ್ಲಿ ಬಯಲು ಅಥವಾ ಲಿಂಗವಿರುವುದು ಸಾಧ್ಯವಿಲ್ಲ ಎನ್ನುವುದು ಆತನಿಗೆ ಹೊಳೆಯುವುದಿಲ್ಲ! ಪುರಂದರದಾಸರ ನಂಬಿ ಕೆಟ್ಟವರಿಲ್ಲವೋ ಎಂಬ ಹಾಡನ್ನು ಇದೇ ನೆಲೆಯಲ್ಲಿ ವಿಮರ್ಶಿಸಬಹುದು. ಮೊದಲು ಸಾರಾಸಗಟಾಗಿ ವಿಚಾರಮಾಡದೇ ನಂಬುವುದೇ ತಪ್ಪು, ಹೋಗಲಿ, ನಂಬಿದ್ದಾದರೂ ಯಾರನ್ನು ಎಂದುಕೊಂಡರೆ ಅವ ಭಗವಂತನ ಅಥವಾ ತೂತಿನಲ್ಲಿ ಮಾತ್ರ ಇರುವವನು ಎಂದು ತಿಳಿದಾಗ ಗೊಂದಲವುಂಟಾಗುತ್ತದೆ. ಮೋಕ್ಷವೆನ್ನುವುದು ವೈಯಕ್ತಿಕವಾದುದರಿಂದಲೇ ಸಾರ್ವತ್ರಿಕ ಸತ್ಯವಾಗುವುದಿಲ್ಲ. ನಾನು ಬೆತ್ತಲಾಗಿ ಇರಬೇಕು ಎಂಬುದು ನನಗನ್ನಿಸಿದರೂ ಇತರರಿಗೆ ನನ್ನ ಬೆತ್ತಲು ಹೇಗೆ ಕಾಣಬಹುದು ಎಂಬುದನ್ನು ಯೋಚಿಸಬೇಕು. ಇದೇ ಕಾರಣದಿಂದ ಜೈನ ಮುನಿಗಳು ಶೋಭಾ ಯಾತ್ರೆಗೆಂದು ಹೊರಟಾಗ ಬ್ರಹ್ಮಸಾಕ್ಷಾತ್ಕಾರವನ್ನು ನೋಡಲು ಯಾರೂ ಇರುವುದಿಲ್ಲ! ಮೇರಿ ಎಂಬ ಕುಮಾರಿಯಿದ್ದಳು ಎಂಬುದು ಸತ್ಯವಾದುದರಿಂದ ಒಪ್ಪತಕ್ಕದ್ದು. ಆದರೆ ಈ ಕುಮಾರಿ ಮೇರಿ ಕ್ರಿಸ್ತನನ್ನು ಹೆತ್ತಳು ಎಂಬುದು ವಾಸ್ತವವಾಗಲಾರದು. ಆದುದರಿಂದ ಕ್ರಿಸ್ತನನ್ನು ಶಿಲುಬೆಗೇರಿಸಲಾಗಿದೆ. ಶಿಲುಬೆಗೇರಿಸಲಾಗಿದೆ ಎಂಬುದನ್ನು ಕ್ರಿಸ್ತ ಇದ್ದ ಅಥವಾ ಇಲ್ಲ ಎಂದು ಎರಡರ್ಥದಲ್ಲಿಯೂ ಸ್ವೀಕರಿಸಬಹುದು. ಕ್ರೈಸ್ತ ಧರ್ಮದ ಪ್ರೇಮವೇ ದೇವರು ಎಂಬ ಮಾತನ್ನು ಹೇಗೆ ಅರ್ಥಮಾಡಿಕೊಳ್ಳಬೇಕು? ಮೊದಲು ಇದು ಕೃಷ್ಣಪಂಥೀಯ ಹೆಣ್ಣು-ಗಂಡುಗಳ ಸಂಬಂಧದಂಥ ಭಾವವನ್ನು ಹೊಂದಿರುವುದನ್ನು ಕಾಣಬಹುದು. ಎರಡನೆಯದಾಗಿ, ರಾಜಕೀಯದಲ್ಲಿ ಒಂದು ಪಕ್ಷದಲ್ಲಿ ಭಿನ್ನಮತವೆದ್ದಾಗ ಆ ಪಕ್ಷದ ಎಲ್ಲರೂ ಹೇಳುವ ಸಾಮಾನ್ಯ ಮಾತು: ''ನಮ್ಮ ಪಕ್ಷದಲ್ಲಿ ಭಿನ್ನಮತವಿಲ್ಲ, ಎಲ್ಲರೂ ಒಗ್ಗಟ್ಟಾಗಿದ್ದೇವೆ.'' ಆ ಪಕ್ಷ ಹೀಗೆ ಹೇಳುತ್ತಿದೆ ಎಂಬುದರಿಂದಲೇ ಆ ಪಕ್ಷದಲ್ಲಿ ಭಿನ್ನಮತವಿದೆ ಎಂಬುದನ್ನು ಸಮರ್ಥಿಸುತ್ತದೆ. ಅದೇ ರೀತಿ Love is God ಎಂದಾಗ ಪ್ರೀತಿಯ ವಿರುದ್ಧದ ದ್ವೇಷ ಎಂಬ ಭಾವವೂ ಇದೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹೀಗೆ ವ್ಯಕ್ತಿಯಾಧಾರಿತ ಧರ್ಮಗಳು ಬುದ್ಧಿಪೂರ್ವಕವಾಗಿದ್ದು ಆ ಕಾರಣದಿಂದಲೇ ಹೀನಯಾನ- ಮಹಾಯಾನ, ದಿಗಂಬರ-ಶ್ವೇತಾಂಬರ, ಕ್ಯಾಥೋಲಿಕ್- ಪ್ರೊಟೆಸ್ಟಂಟ್, ಶಿಯಾ-ಸುನ್ನಿ ಹೀಗೆ ಒಡೆಯುತ್ತ ಹೋಗುವುದನ್ನು ನೋಡಬಹುದು. ಒಟ್ಟಿನಲ್ಲಿ ಈ ಬುದ್ಧಿಪೂರ್ವಕ ಧರ್ಮಗಳಲ್ಲಿ 'ಕಣ್' ಎಂಬುದು ಸ್ಥಾಯಿಯಾಗಿ ಈ ಕಣ್ ಎಂಬುದು ಪುರುಷವೋ ಸ್ತ್ರೀಯೋ ಎಂದು •ನೋಡುವ ಆಟದಲ್ಲಿ ತೊಡಗಿರುವುದನ್ನು ಕಾಣಬಹುದು. ಷೇಕ್ಸ್‌ಪಿಯರನ 'ಕಾಮಿಡಿ ಆಫ್ ಎರರ್ಸ್' ಎಂಬ ನಾಟಕದಲ್ಲಿನ ಅವಳಿಗಳನ್ನು ಸರಿಯಾಗಿ ಗುರುತಿಸುವಲ್ಲಿ ಎಡವುವಂತೆ ಈ 'ಕಣ್' ಒಬ್ಬೊಬ್ಬರ ಕಣ್ಣಿನ ನೇರಕ್ಕೆ ಪುರುಷ ಅಥವಾ ಸ್ತ್ರೀಯಾಗಿ ತೋರುತ್ತದೆ. ಆದರೆ ಇದು ದುರಂತಕಾರಿ ಅವಾಂತರ . ಪುರೀ ಎಂದರೆ ಗವಿ, ಶಯೀ ಎಂದರೆ ಮಲಗಿದವನಾದ ಪುರುಷ ಸದೃಶ ಅಶ್ವತ್ಥವೃಕ್ಷದ ಸುತ್ತ ಮಕ್ಕಳಾಗದ ಹೆಣ್ಣು ತಿರುಗುವ ಸಾಂಕೇತಿಕತೆಯಿಂದ ಶಂಬಾದಲ್ಲಿನ ಪ್ರತಿನಾಯಕ ಕೆರಳುತ್ತಾನೆ. ಧರ್ಮಗಳಲ್ಲಿನ ಅಸಂಗತಿ ಅನೈತಿಕ ಅನೂಹ್ಯತೆಗಳ ಮೂಲಕ ಹೊರಬರುವುದನ್ನು ಕಂಡು ಶಂಬಾ ವ್ಯಗ್ರ ಯುವಕನಂತೆ ಪ್ರತಿಭಟನೆಯ ಧಾಟಿಯಲ್ಲಿ ಪ್ರತಿಕ್ರಿಯಿಸಿ ಸಂಪ್ರದಾಯವಾದಿಗಳ ರೊಚ್ಚನ್ನು ಕೆರಳಿಸುತ್ತಾರೆ. ಹಾಗೆ ಒಂಟಿಯಾಗಿ ನಿಂತು ಕೆರಳಿಸುವುದರಿಂದಲೇ ಶಂಬಾ ವಿಚಾರವಂತರ ಮೆಚ್ಚುಗೆಗೆ ಪಾತ್ರರಾಗುತ್ತಾರೆ.

ಮಾರ್ಕ್ಸಿಸ್ಟ್ ಚಿಂತಕ ದೇವಿಪ್ರಸಾದ ಚಟ್ಟೋಪಾಧ್ಯಾಯ ಮತ್ತು ಶಂಬಾ ಹಿಂದೂಧರ್ಮ ಸಮಾಜವಿರೋಧಿ ಎಂಬ ಒಂದೇ ನಿಲುವಿಗೆ ಬರುತ್ತಾರೆ. ಆದರೆ ದೇವಿಪ್ರಸಾದರಿಗೆ ಹಿಂದೂಧರ್ಮ ಭೌತಿಕ ತತ್ವವನ್ನು ನಿರಾಕರಿಸುವ ಧರ್ಮವಾಗಿ ಕಂಡರೆ ಶಂಬಾರವರಿಗೆ ಅದರಲ್ಲಿ ಭೌತಿಕೀಕರಣದ ವಿಜೃಂಭೀಕರಣ ಕಾಣುತ್ತದೆ. ಒಂದೊಂದು ಕೋನದಿಂದ ನೋಡಿದರೆ ಹಿಂದೂಧರ್ಮ ಒಂದೊಂದು ಥರ ಆಗಿ ಕಾಣುವುದೇ ಎಂಬ ವಿಸ್ಮಯ ಮೂಡುತ್ತದೆ. ಶಂಬಾ ಹಿಂದೂಧರ್ಮ ಲೈಂಗಿಕ ಪಾತಳಿಯ ಮೇಲೆ ನಿಂತಿದೆ ಎಂಬುದನ್ನು ನಿರೂಪಿಸುವ ರೀತಿಯನ್ನು ನೋಡಿ: ಪ್ರಜ್ಞಾನೇತ್ರದ ಪ್ರಭಾವದಲ್ಲಿ ಮನುಷ್ಯನು ಬಹಿರ್ಮುಖಿಯಾಗಿ ಹೊರಟಿರುವುದರಿಂದ ಇವನನ್ನು ಅಂತರ್ಮುಖಿಯನ್ನಾಗಿಸಬೇಕು. ಇದಕ್ಕಾಗಿ ಇವನು ಆವೃತ್ತ ಚಕ್ಷು ಆಗಿ ತನ್ಮಯತೆಯಲ್ಲಿ ಓಂಕಾರ ಬ್ರಹ್ಮನಲ್ಲಿ ಲೀನನಾಗಬೇಕು. ಆಗ ಪ್ರಜ್ಞಾನಾಶವಾಗಿ ಶೂನ್ಯಸ್ಥಿತಿ ಉಂಟಾಗುತ್ತದೆ. ಈ ಶೂನ್ಯಸ್ಥಿತಿಯ ಪ್ರಣವನಾದ ಸಂಭೋಗದ ಶಬ್ದಕ್ಕಿಂತ ಭಿನ್ನವಲ್ಲ ಮತ್ತು ಇದರ ಅನುಭವ ಯೋನಿ ಲಿಂಗೈಕ್ಯದ ಅನುಭವಕ್ಕಿಂತ ಬೇರೆಯಲ್ಲ. ಈ ಅನುಭವಸಿದ್ಧಿಯ ವಿವರ ಮಾಂಡೂಕ್ಯ ಉಪನಿಷತ್‌ನಲ್ಲಿ ಬರುತ್ತದೆ. ಶಂಕರಾಚಾರ್ಯರ ದೃಷ್ಟಿಯಲ್ಲಿ ಈ ಮಾಂಡೂಕ್ಯ ಉಪನಿಷತ್ 'ವೇದಾಂತದ ಸಾರ ಸಂಗ್ರಹ'. ವಯಸ್ಸಾದಂತೆ ಮನುಷ್ಯನ ತೊಡೆಯಲ್ಲಿನ ಶಕ್ತಿ ತಲೆಗೆ ಸಾಗುತ್ತದೆ ಎಂದು ಖುಷ್‌ವಂತ್ ಸಿಂಗ್ ತಮ್ಮ ಇತ್ತೀಚಿನ 'ಕಂಪನಿ ಆಫ್ ವಿಮೆನ್'ದಲ್ಲಿ ಬರೆಯುತ್ತಾರೆ. ವಯಸ್ಸಿರುವಾಗಲೇ ಇದನ್ನು ಮಾಡಿನೋಡಬಹುದು ಎಂಬುದನ್ನು ಪ್ರಣವಸಿದ್ಧಿ ಎಂದೋ ಸಾಧಿಸಿ ತೋರಿಸಿದೆ!

ಪೈಥಾಗೊರಸ ಇತಿಹಾಸಕ್ಕೆ ಶೂನ್ಯರೂಪ ಕೊಟ್ಟ, ಅದನ್ನೇ ಮಾತಾಗಿಸಿದ ಗ್ರೀಕ್ ತತ್ವ ಇತಿಹಾಸ ಮರುಕಳಿಸುತ್ತದೆ ಎಂದಿತು. ಈ ಇತಿಹಾಸ ಪುನರಾವರ್ತನೆಗೊಳ್ಳುವುದೇ ಬುದ್ಧಿ ವಾದಿಗಳ ಧರ್ಮದಿಂದ ಎಂಬುದು ಶಂಬಾರ ಇನ್ನೊಂದು ವಾದ. ನಾನೇ ಬುದ್ಧಿ ಎಂದ ಕೃಷ್ಣನನ್ನು ಒಪ್ಪಿಕೊಳ್ಳದಿದ್ದರೆ ನಾವು ಬುದ್ಧಿಯೇ ನಾನು, ರಾಜಾ ಪ್ರತ್ಯಕ್ಷ ದೇವತಾ ಎಂಬುದನ್ನು ಒಪ್ಪಿ ಕೊಳ್ಳುತ್ತಿರಲಿಲ್ಲ, ಅದನ್ನು ಒಪ್ಪಿರದಿದ್ದರೆ ತುರ್ತುಸ್ಥಿತಿಯನ್ನು ಒಪ್ಪುತ್ತಿರಲಿಲ್ಲ, ತುರ್ತುಸ್ಥಿತಿಯನ್ನು ಒಪ್ಪಿರದಿದ್ದರೆ ಇಂದಿಗೂ ಭಾರತವನ್ನು ಒಂದೇ ಕುಟುಂಬಕ್ಕೆ ಗುತ್ತಿಗೆಗೆ ಕೊಡುವ ಅವಿವೇಕತನಕ್ಕೆ ಒಪ್ಪುತ್ತಿರಲಿಲ್ಲ. ಹೀಗೆ ನಾವು ಅಲ್ಲಲ್ಲಿ ಹಿಂತಿರುಗಿ ನೋಡಿದ್ದರೆ ಇತಿಹಾಸ ಮರುಕಳಿಸುತ್ತದೆ ಎಂಬ ಮಾತು ಸುಳ್ಳಾಗುತ್ತಿತ್ತು. ಹಾಗೆ ನಾವು ಹಿಂದಿರುಗಿ ನೋಡದಂತೆ ಮಾಡಿದ್ದು ನಾವು ಬುದ್ಧಿಯನ್ನು ನಂಬಿದ್ದರಿಂದ. ಯಾಕೆಂದರೆ ಬುದ್ಧಿ ತತ್ಕಾಲಿಕವಾದರೆ ಹೃದಯ ತ್ರೈಕಾಲಿಕ. ನಾವು ಹೃದಯಪೂರ್ವಕವಾಗಿ ವರ್ತಿಸದಿದ್ದುದರಿಂದಲೇ ಸಾಮಾಜಿಕ ತತ್ವಗಳಾದ ಕುಟುಂಬ, ದೇಶಗಳನ್ನು ಮರೆತು 'ಹೋಟೆಲ್' ಸಂಸ್ಕೃತಿಯವರಾಗಿ ಎಲ್ಲಿ ದುಡ್ಡು ಹೆಚ್ಚು ಸಿಗುತ್ತದೆಯೋ ಆ ಆ ದೇಶಗಳಿಗೆ ವಲಸೆ ಹೋಗುತ್ತಿದ್ದೇವೆ. ಕಂಪ್ಯೂಟರ್ ಸಂಸ್ಕೃತಿ ಮಾನ್ಯವಾಗಿ, ಯೋಚಿಸುವ ಅಗತ್ಯವನ್ನೇ ಕಳೆದುಕೊಳ್ಳುತ್ತಿದ್ದೇವೆ. ಬುದ್ಧಿವಂತರಾದುದರಿಂದಲೇ ಮತ್ತೆ ಬಹುರಾಷ್ಟ್ರೀಯ ಕಂಪನಿಗಳ ಅಡಿಯಾಳುಗಳಾಗುತ್ತಿದ್ದೇವೆ.

ಬುದ್ಧಿ ಪ್ರಬಲವಾಗತೊಡಗಿದಂತೆ 'ಅಹಂ' ಜಾಗೃತಗೊಂಡು ಮನುಷ್ಯ ನಿಗೂಢತೆಯ ಆಸೆಗೆ ಬಲೆಬೀಳುತ್ತಾನೆ. ಗುಡಿಗೆ ಗರ್ಭಗುಡಿ ಬೇಕಾಗುತ್ತದೆ. ಗರ್ಭಗುಡಿಯಲ್ಲಿ ಶೇಷನಿರುವನು ಎಂಬ ಹಳಹಳಿಕೆ ನಮ್ಮ ಮರಿಶೇಷ ಅಲ್ಲಿರಬೇಕು ಎಂಬುದರ ಒಳ ಆಸೆಯ ಪ್ರತಿರೂಪ. ಇರುವುದನ್ನು ಬಿಟ್ಟು ಇರದುದರೆಡೆಗೆ ಮನಸ್ಸು ಎಳೆಯತೊಡಗುತ್ತದೆ. ಮನಸ್ಸಿನ ಮೂಲದೇವರು ಪ್ರಜ್ಞೆ ಅಥವಾ ಸೂರ್ಯ, ಸಾಮಾಜಿಕವಾದುದು ವೈಯಕ್ತಿಕವಾಗತೊಡಗಿದಾಗ ಈ ಸೂರ್ಯನನ್ನು ಮುಳುಗಿಸುವ ಪ್ರಯತ್ನ ನಡೆಯುತ್ತದೆ. ಸೂರ್ಯನ ಸ್ಥಾನವನ್ನು ಕಿತ್ತುಹಾಕಿ ಬೇರೊಂದು ದೇವರನ್ನು ಆ ಜಾಗದಲ್ಲಿ ನಿಲ್ಲಿಸುವ ಪ್ರಯತ್ನ. ಈ ದೇವರು ಬುದ್ಧಿ ಯೋಜಿತ ದೇವರಾದುದರಿಂದ ಈತ ನಾರಾಯಣ, ಆದುದರಿಂದ ಸೂರ್ಯ, ಸೂರ್ಯನಾರಾಯಣ (ನಾರಾಯಣ - ಲಿಂಗ ರೇತದ ಹೊಂಡ). ಅದಿತಿಯ ಮಗನಾದ ಆದಿತ್ಯ ಸೂರ್ಯನಾಗುತ್ತಾನೆ. ಗ್ರೀಕ್ ತತ್ವಜ್ಞಾನದ ಬಗೆಗೆ ಗಿಲ್ಬರ್ಟ್ ಹೇಳಿದಂತೆ ಇದು ಒಂದು ರೀತಿಯಲ್ಲಿ ನರನಾಡಿಗಳ ಸೋಲು ಅಥವಾ ನರಸತ್ತ ಸತ್ಯವನ್ನು ಮರೆಮಾಚುವ ಯತ್ನ. ಅದಿತಿಯ ಮಗನಾದ ಈ ಆದಿತ್ಯ ಆಕೆಯ ಪತಿಯೂ ಆಗುತ್ತಾನೆ. ಪಿಂಡ ಬ್ರಹ್ಮಾಂಡ ಕಲ್ಪನೆ

ಈಡಿಪಸ್ ಕಾಂಪ್ಲೆಕ್ಸ್ ತೋರುವಂತೆ ಬುದ್ಧಿದೇವತೆ ಸರಸ್ವತಿ ಮಗಳು ಗಂಡತನವನ್ನು ಸೂಚಿಸುತ್ತಾಳೆ. ಈ ತೆರೆನ ಕಥೆಗಳು ಗ್ರೀಕ್ ಧರ್ಮದಲ್ಲಿಯೂ ಸಿಗುತ್ತವೆ. ಮೃತಾತ್ ಅಂಡಾತ್ ಜಾತ ಅಂದರೆ ಜಲದಿಂದ ಹುಟ್ಟಿದವನು ಮಾರ್ತಾಂಡನಾಗಿ ಸೂರ್ಯನ ಸ್ಥಾನವನ್ನು ಆಕ್ರಮಿಸುತ್ತಾನೆ.

ಸೂರ್ಯನನ್ನು ಅಸ್ತಂಗತಗೊಳಿಸುವ ಈ ಮೋಸವನ್ನು ವಿರೋಧಿಸಿ ವಿಶ್ವಾಮಿತ್ರ ಸವಿತೃ ಎಂದರೆ ಸೂರ್ಯನನ್ನು ಪುನಃ ಚಾಲ್ತಿಗೆ ತರುವ ಪ್ರಯತ್ನ ಮಾಡಿದ. ಸ್ಥಳ ಅಥವಾ ದೇಹ ಮತ್ತು ಕಾಲ, ಅಥವಾ ಲಿಂಗ ಇವೆರಡು ಮುಖ್ಯವಲ್ಲದ ಇದರಾಚೆಗಿನ ಪ್ರಜ್ಞೆಗೆ ಪ್ರಾಶಸ್ತ್ಯವನ್ನು ಕೊಡುವ ವಿಶ್ವಾಮಿತ್ರನ ಸವಿತೃವನ್ನು ಸಾವಿತ್ರಿಯನ್ನಾಗಿಸಲಾಯಿತು.

ಸೂರ್ಯನನ್ನು ಇಲ್ಲವಾಗಿಸುವ ಇನ್ನೊಂದು ಪ್ರಯತ್ನ ಚಂದ್ರನನ್ನು ಪ್ರಕಾಶಗೊಳಿಸುವುದು. ಭೂಮಿ ತಿರುಗುತ್ತ ಕತ್ತಲಾಗುವುದನ್ನು ಅನುಕೂಲವನ್ನಾಗಿಸಿಕೊಂಡು ರಾತ್ರಿಗೆ ಮಹತ್ವ ಸಿಕ್ಕಿತು. ಶಂಬಾ ಈ ತಿರುಗುವಿಕೆಯನ್ನು ಬುದ್ಧಿ ಪೂರ್ವಕ ಧರ್ಮದ ಮೊದಲಿನವರು ಛಾಯಾ ಭಗವತೀ ಎಂದು ಗುರುತಿಸಿದ್ದರು. ಈ ಛಾಯಾ ಭಗವತೀಗೆ ಭೂಮಿಯನ್ನು ಬಿಟ್ಟು ಸ್ವಂತದ ಅಸ್ತಿತ್ವವಿಲ್ಲವೆನ್ನುತ್ತಾರೆ. ಆದರೆ ಭಗವಂತನನ್ನು ತೂತಿನೊಳಗಿರುವವ ಎಂದು ಜಾಲಾಡುವ ಅವರು ಭಗವತಿ ಬಗೆಗೆ ಚಕಾರವೆತ್ತದಿರುವುದು ವಿಚಿತ್ರವೆನ್ನಿಸುತ್ತದೆ. ಚಂದ್ರನ ಬಗೆಗಿರುವ ಕತೆಗಳು ಆಕಸ್ಮಿಕವಲ್ಲವೆನ್ನುತ್ತಾರೆ ಶಂಬಾ. ಕಾಮುಕನಾದ ಚಂದ್ರನ ಮಗನೇ ಬುಧ ಅಥವಾ ಬುದ್ಧಿ. ಈ ಬುದ್ಧಿಯ ಅಪ್ಪ ಚಂದ್ರ ಕಾಮುಕನಾದುದರಿಂದ ಕ್ಷಯಪೀಡಿತನಾಗುತ್ತಾನೆ. 'ಲೂನ' ಎಂದರೆ ಚಂದ್ರ, 'ಲೂನಟಿಕ್' ಎಂದರೆ ಹುಚ್ಚ. ಚಂದ್ರನಿಂದ ತಲೆ ಕೆಡುತ್ತದೆ ಎಂಬುದನ್ನು ಶಬ್ದಗಳೂ ಹೇಗೆ ಸಮರ್ಥಿಸುತ್ತವೆ. ಇಷ್ಟೆಲ್ಲ ಹೇಳಿದುದರಿಂದ ಬದುಕಿನಲ್ಲಿ ಬುದ್ಧಿಗೆ ಸ್ಥಾನವಿಲ್ಲೆಂಬುದನ್ನು ಖಂಡಿತ ತಿಳಿಯಬೇಕಾಗಿಲ್ಲ. ಆದರೆ ಆ ಸ್ಥಾನ ಸಂಗೀತದಲ್ಲಿ ಹುಸಿ ತಾಳಕ್ಕಿರುವ ಸ್ಥಾನದ ಬಗೆಯದು. ಬುದ್ಧಿ ಇರಬೇಕು, ಆದರೆ ಅದು ಹೃದಯದ ಅಧೀನದಲ್ಲಿರಬೇಕು.

ಇದು ಸ್ಥೂಲವಾಗಿ ಶಂಬಾ ಬುಧನ ಜಾತಕದಲ್ಲಿ ಮಂಡಿಸಿದ ವಿಚಾರ. ಇಷ್ಟೊಂದು ಆಳವಾದ ಗ್ರಹಿಕೆಗಳು ಜನರನ್ನು ತಟ್ಟಲಿಲ್ಲವೇಕೆ ಎಂದು ಚಿಂತಿಸಿದಾಗ ಶಂಬಾಗಿದ್ದ ಅಭಿವ್ಯಕ್ತಿಯ ಸಮಸ್ಯೆ ಎದ್ದುಕಾಣುತ್ತದೆ. ಜನಬಳಕೆಯ ಮೂಲಕವೇ ಭಾಷೆ ಜೀವಂತಿಕೆಯನ್ನು ಪಡೆಯುತ್ತದೆ ಎಂದ ಶಂಬಾ ಜನಬಳಕೆಯಲ್ಲಿ ಬರಲಿಲ್ಲವೆಂಬುದು ವಿಚಿತ್ರವಾದರೂ ಸತ್ಯ. ದೇಶೀ ಸಾಮಗ್ರಿ ಅಂದರೆ ಭಾರತೀಯ ಪರಂಪರೆಯ ಮೂಲ ಬೇರನ್ನು ಸಂಪೂರ್ಣವಾಗಿ ಅರಿತಿದ್ದ ಶಂಬಾ ಅದನ್ನು ಐನ್‌ಸ್ಟೈನನ ವಿಚಾರಗಳಿಗೆ ತಂದು ನಿಲ್ಲಿಸುವ ಪ್ರಯತ್ನ ಮಾಡಿದ್ದು ಅನಗತ್ಯವೆನ್ನಿಸುತ್ತದೆಯಲ್ಲದೆ, ಶಂಬಾರ ಮೂಲಸತ್ವ ಇದರಿಂದ ಮಸಕಾಗುತ್ತದೆ. ರೂಢಿಯಲ್ಲಿರುವ ಧರ್ಮಗಳ ಬಗೆಗಿನ ಶಂಬಾ ವಾದವನ್ನು ಒಪ್ಪುತ್ತಾ ಹೋದರೂ ಕೊನೆಗೆ ಅವರು ಹೇಳುವ ವಿಶ್ವನಿಯಮವೊಂದಿದೆ ಎಂಬುದನ್ನು ಯಾವ ಆಧಾರದ ಮೇಲೆ ಒಪ್ಪಬೇಕೆಂಬುದು ಪ್ರಶ್ನೆಯಾಗುತ್ತದೆ.

ಶಬ್ದ ಮತ್ತು ಶಬ್ದಾರ್ಥಗಳ ಸುತ್ತಲೇ ತಿರುಗುವ ಶಂಬಾ 'ಶಬ್ದಗಳು ಅಷ್ಟು ಮುಖ್ಯವೇ' ಎಂದು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳುವಂತೆ ಪ್ರೇರೇಪಿಸುತ್ತಾರೆ. ಶಬ್ದವೆಂಬುದು ನೆನಪಿನ ಚಲನೆ, ಅದನ್ನು ಬಿಟ್ಟು ಸಾಗಿದಾಗ ಮಾತ್ರ ನಾವು ಯಾರನ್ನಾದರೂ ನಿಜವಾಗಿ ನೋಡಬಲ್ಲೆವು ಎಂಬ ವಾದ ನೆನಪಾಗುತ್ತದೆ. ಮೇಲ್ವರ್ಗ ಕೆಳವರ್ಗ ಈ ಶಬ್ದಗಳ ಅರ್ಥವಿಶ್ಲೇಷಣೆಯನ್ನು ಶಬ್ದಗಳ ಮಧ್ಯದಲ್ಲಿಯೇ ಎಷ್ಟರ ಮಟ್ಟಿಗೆ ಮಾಡಲು ಸಾಧ್ಯ ? ಮೇಲ್ವರ್ಗ ಎಂದರೆ ಯಾವುದರಲ್ಲಿ ಮೇಲು, ಕೆಳವರ್ಗ ಎಂದರೆ ಯಾವುದರಲ್ಲಿ ಕೆಳಗೆ ಎಂಬುದರ ಬುಡ ಶೋಧಿಸಲು ಹೊರಟರೆ ಅರ್ಥಗಳ ಉಲ್ಟಾಪಲ್ಟಾ ಆಗುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ದುಃಖ ಎಂಬುದು ಅಪೇಕ್ಷಿತವೋ ಅನಪೇಕ್ಷಿತವೋ ಎಂದು ಯೋಚಿಸಿದಾಗ ಘಟಿಸಿದ ಕಾಲಕ್ಕೆ ನೋವು ಕೊಡುವ ಆಘಾತ ಹೆಚ್ಚಿನದಾದರೂ ಆ ಅನುಭವ ಮನುಷ್ಯನನ್ನು ಬೆಳೆಸುವುದನ್ನು ಕಂಡಾಗ ದುಃಖವೆಂಬುದು ದುಃಖವೇ ಎಂಬ ಹೊಸ ಪ್ರಶ್ನೆ ಎದ್ದು ನಿಲ್ಲುತ್ತದೆ. ಶಂಬಾ ಧರ್ಮಗಳ ಉಗಮದ ಬಗೆಗೆ ಬರೆಯುತ್ತಾ ಉಪಯುಕ್ತತೆಯ ಕಾರಣದಿಂದಲೂ ಧರ್ಮ ಹುಟ್ಟಿತು ಎಂದು ಬರೆಯುತ್ತಾರೆ. ಶಂಬಾ ಟೀಕಿಸುವ ಧರ್ಮದ ಆಸರೆಯಲ್ಲಿಯೇ ಬೆಳೆದ ಡಿವಿಜಿ, ದೇವುಡು ನರಸಿಂಹಶಾಸ್ತ್ರಿ ಬಹಳ ಉಪಯುಕ್ತವಾಗಿಯೇ ತಾವು ನಂಬಿದ ಧರ್ಮವನ್ನು ಬಳಸಿಕೊಂಡರು. ಮಗನನ್ನು ಕಳೆದುಕೊಂಡ ದೇವುಡು 'ನಮಗೆ ತಿಳಿಯದ ಕಾರಣಕ್ಕೆ ಇದು ಅನ್ಯಾಯ ಎನ್ನಿಸಬಹುದು, ಆದರೆ ತಿಳಿವಿನ ಪರಿಧಿಯನ್ನು ಮೀರಿದ ನಿಯಮದಿಂದಾಗಿದ್ದರಿಂದ ಇದು ನ್ಯಾಯವೆ' ಎಂದದ್ದು ನೋಡಿದಾಗ ಅವರು ನಂಬಿದ್ದ ಧರ್ಮ ಅವರಿಗೆ ಎಷ್ಟು ಶಕ್ತಿಯನ್ನು ನೀಡಿತ್ತು ಎಂದು ಅರ್ಥವಾಗುತ್ತದೆ. ಹೀಗೆಂದಾಗಲೂ ಶಂಬಾರನ್ನು ಅಲ್ಲಗಳೆದಂತಲ್ಲ. ತಿಲಕರನ್ನು - ಅರವಿಂದರನ್ನು - ಗಾಂಧೀಜಿಯನ್ನು ಅನುಸರಿಸುತ್ತಲೇ ಅವರ ದಾರಿಯನ್ನು ಪ್ರಶ್ನಿಸಿದ, ಚಾಲ್ತಿಯಲ್ಲಿರುವ ಧರ್ಮ ಎಂಬುದು ಸುಳ್ಳು ಎಂದು ಗೊತ್ತಾದರೂ ಉಪಯುಕ್ತ ಜೀವನವನ್ನು ಕ್ಷಣ ಕ್ಷಣಕ್ಕೂ ಬೆಳೆಯುತ್ತಲೇ ಬಾಳಿದ ಶಂಬಾ ಅದ್ವಿತೀಯರು.

ಪಾಂಡುರಂಗ ಗುಡಿ
೮-೧೧-೩೪೯/೩೮, ಲಕ್ಷ್ಮಿಪುರಂ ಬಡಾವಣೆ
ಬೋಳಮ್ಮನದೊಡ್ಡಿ ರಸ್ತೆ ಪಕ್ಕ, ರಾಯಚೂರು - ೫೮೪ ೧೦೩

# ನನ್ನೆದುರ ಬಾಹುಬಲಿ

ಈ ಕೊಣಪ ಕಂಬಳಿ ಹುಳ
ನೇರನಿಂತು ಗೋಲದೋಪಾದಿ
ಕಣ್ಣುಗಳ ಕೀಲಿಸದೇ ನನ್ನ ನೋಡುತಿದೆ -
ಅದರ ಜಗ ಅದಕೆ -
ತನ್ನ ಪಾಡಿಗೆ ತಾನು ಚಿಗುರೆಲೆ ತಿಂದು
ಹಕ್ಕಿ ಹಾವ ಕಣ್ಣಗೊಲಿಯದೆ
ಜೀವ ಜತನದ ಅಂಗುಲಂಗುಲ
ತೆವಳಿ ಹೇಗೋ ಈಗ ನೇರ ನಿಂತಿದೆ.

ತನ್ನದೇ ಜೀರ್ಣ ಜೊಲ್ಲ ತಂತಲ್ಲಿ
ಜೀವಕೋಶದ ಮುದ್ರೆಯಣತಿ ಹೊತ್ತು
ಕೋಶವೆಳೆದು ಕೂರಲಿದೆ
ಎಂದು ನನಗೆ ಗೊತ್ತು.
ಈ ಬಣ್ಣ, ಬಟ್ಟಲುಗಣ್ಣ, ಕತ್ತಿ ಕೊಂಬು
ಬಳಸಿ ಬೆದರಿಸಿ ಬದುಕಿದೆ
ನನಗಿದೂ ಗೊತ್ತು.

ಈ ಬಟ್ಟಲುಗಣ್ಣು ಕಣ್ಣಲ್ಲವೇ ಅಲ್ಲ.
ಬಣ್ಣ ಮೆತ್ತಿದ ಬೆದರು ಅಂಡು
ನಿಜದ ಕಣ್ಣ ಹಸಿರ ರೆಂಬೆಗೂರಿದೆ
ಯೋಗಾಸನದ ಭಂಗಿಯಲ್ಲಿ
ನಾಳೆ ಕೋಶವೊಡೆದು ಗಾಳಿ ಪಥದಲ್ಲಿ
ತೇಲು ನೌಕೆ.

ಆದರೀಗಲೀಗ ಈ ಪೂರ್ವ ಸ್ಥಿತಿಯಲ್ಲಿ
ಎಂಥ ನಿರಾಮಯ ಧೈರ್ಯ;
ನಭ ಭೂಮಿ ಮಧ್ಯೆ
ಗಾಳಿ ಸವಾರಿಯವಸ್ಥೆ ಹೇರುವ ಮುನ್ನ
ಧ್ಯಾನ ನಿರ್ಲಕ್ಷ್ಯದೀ ಸ್ತಬ್ಧಸ್ಥಿತಿ
- ನನಗಿದು ಗೊತ್ತಿರಲಿಲ್ಲ.

ಸುರೇಶ ಕೆ. ಪಿ.
ಕಂಜರ್ಪಣೆ ಮನೆ, ಕುಕ್ಕಜಡ್ಕ ಅಂಚೆ, ಮಾರ್ಗ ಸುಳ್ಯ, ದ. ಕ. ಜಿಲ್ಲೆ



# ಮಕ್ಕಳನ್ನು ರೂಪಿಸಲು ಹೆತ್ತವರು ಕಲಿಯೋಣ

ಅಡ್ಡೂರು ಕೃಷ್ಣರಾವ್

ಮಕ್ಕಳನ್ನು ತಿದ್ದುವುದನ್ನೇ ಕಾಯಕ ಮಾಡಿಕೊಂಡ ಹೆತ್ತವರನ್ನು ನಾವು ಕಾಣುತ್ತಲೇ ಇರುತ್ತೇವೆ. ಮಕ್ಕಳನ್ನು ಆತ್ಮವಿಶ್ವಾಸದ ವ್ಯಕ್ತಿಗಳನ್ನಾಗಿ ರೂಪಿಸಲು ತಾವೇನು ಮಾಡಬಹುದು ಎಂದು ಹೆತ್ತವರು ಯೋಚಿಸಬೇಕಾದ ಅಗತ್ಯ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ.

ನನ್ನ ಮಗಳು ೩ ವರುಷದವಳಿದ್ದಾಗ ಮಂಗಳೂರಿನ ನವಕರ್ನಾಟಕದ ಪುಸ್ತಕದಂಗಡಿಯಿಂದ ಚಿತ್ರಗಳಿರುವ ೧೦೩ ಪುಸ್ತಕಗಳನ್ನು ಖರೀದಿಸಿ ತಂದೆ. ಯಾಕೆಂದರೆ ಮಕ್ಕಳಿಗೆ ಭಾಷೆ ಹಾಗೂ ವಿಷಯ ಕಲಿಸಲು ಪುಸ್ತಕಗಳು ಸಹಕಾರಿ. ಚಿತ್ರಗಳನ್ನು ತೋರಿಸುತ್ತ ಮಾತಾಡುತ್ತ ಕತೆ ಹೇಳುತ್ತಿದ್ದರೆ ಮಕ್ಕಳು ಚಿತ್ರಗಳನ್ನೂ ಶಬ್ದಗಳನ್ನೂ ನೆನಪಿನಲ್ಲಿ ತುಂಬಿಕೊಳ್ಳುತ್ತಾರೆ. ಅನಂತರ ಮಗಳು ಸುಮ ಯಾವುದಾದರೊಂದು ಪುಸ್ತಕ ತಗೊಂಡು ಬರುತ್ತಿದ್ದಳು. ಅದರಲ್ಲಿನ ಚಿತ್ರಗಳನ್ನು ತೋರಿಸುತ್ತ ಅವಳಿಗೆ ಚಿತ್ರಗಳ ಬಗ್ಗೆ ತಿಳಿಸುತ್ತಿದ್ದೆ. ಅನೇಕ ದಿನಗಳು ಇದೇ ಪರಿಪಾಠ ನಡೆದುಬಂತು.

ಒಂದು ದಿನ ಪುಟ್ಟ ಮಗಳು ಪಕ್ಷಿಗಳ ಚಿತ್ರಗಳಿದ್ದ ಪುಸ್ತಕವೊಂದನ್ನು ತಂದಳು. ಅವಳು ಒಂದೊಂದೆ ಪುಟ ತಿರುವಿ ಹಾಕುತ್ತಿದ್ದಂತೆ, ಆ ಪುಟದಲ್ಲಿದ್ದ ಚಿತ್ರದ ಪಕ್ಷಿಯ ಬಗ್ಗೆ ನನಗೆ ತಿಳಿದದ್ದನ್ನು ಹೇಳುತ್ತಿದ್ದೆ. ಗಿಡುಗ, ಪಾರಿವಾಳ, ಮಿಂಚುಳ್ಳಿ, ಕೋಗಿಲೆ, ಬಾತುಕೋಳಿ ಹೀಗೆ ಅನೇಕ ಪಕ್ಷಿಗಳ ಬಗ್ಗೆ ಅವಳಿಗೆ ಹೇಳಿದ್ದಾಯಿತು. ಮುಂದಿನ ಪುಟ ಅವಳು ತೆರೆದು ತೋರಿದಾಗ, ನಾನು ಮೌನವಾಗಬೇಕಾಯಿತು. ಅದು ಆ ಮುಂಚೆ ನಾನು ಕಂಡಿರದ ಪಕ್ಷಿಯ ಚಿತ್ರವಾಗಿತ್ತು. ನನ್ನ ಮೌನ ಗಮನಿಸಿದ ಸುಮ ಕೇಳಿದಳು ''ಇದ್ಯಾವ ಪಕ್ಷಿ ?'' ಇದೂ ಗೊತ್ತಿಲ್ಲವಲ್ಲ ಅಂತ ನನಗೆ ನನ್ನ ಮೇಲೆ ಸಿಟ್ಟು. ''ಗೊತ್ತಿಲ್ಲ'' ಅಂತ ಮಗುವಿನೊಂದಿಗೆ ಒಪ್ಪಿಕೊಂಡು ಸಣ್ಣದಾಗಲು ನನ್ನ ದೊಡ್ಡತನ ಅಡ್ಡಿ. ಪುಟದ ಕೆಳಗಿರುವ ವಿವರಣೆ ಓದಿ ತಿಳಿಯೋಣ ಅಂದರೆ ಅದು ರಷ್ಯನ್ ಭಾಷೆಯಲ್ಲಿ ಮುದ್ರಿತವಾದ ಪುಸ್ತಕ. ಈ ಸಂದಿಗ್ಧದಿಂದ ಪಾರಾಗಲು ದೊಡ್ಡವರ ಬುದ್ಧಿವಂತಿಕೆ ಬಳಸಿ, ''ಮುಂದಿನ ಪುಟ ತೆಗಿ'' ಅಂದೆ. ''ಇಲ್ಲ, ಇದೇನು ಹೇಳಿ'' ಅಂತ ಸುಮ ಅದನ್ನೇ ತೋರಿಸುತ್ತ ಕೇಳಿದಳು. ''ಅದು ಇರಲಿ ಬಿಡು, ಆಚೆ ಪುಟದ್ದು ನೋಡೋಣ'' ಅಂತ ಪುಸಲಾಯಿಸಿದೆ. ಅವಳು ನನ್ನನ್ನು ಒಂದು ಕ್ಷಣ ದಿಟ್ಟಿಸಿ ನೋಡಿದಳು. ಏನೆನ್ನಿಸಿತೋ, ಪುಸ್ತಕ ಮಡಿಚಿಟ್ಟು ಹೋದಳು.

ಇಂಥ ಸಂದರ್ಭಗಳಲ್ಲಿ ನಾವು ಬೇರೆ ಬೇರೆ ರೀತಿಯಲ್ಲಿ ಮಕ್ಕಳನ್ನು ಮ್ಯಾನಿಪುಲೇಟ್ ಮಾಡಬಹುದು. ''ಹೋಗು, ಅಮ್ಮನೊಂದಿಗೆ ಆಡಿಕೋ'', ''ಬಾ, ಟಿವಿ ನೋಡೋಣ'', ''ಆ ಬಾಲ್ ತಗೊಂಡು ಬಾ, ಆಟವಾಡೋಣ'' ಇತ್ಯಾದಿ. ಅದರ ಬದಲಾಗಿ, ನಮ್ಮ ಮಕ್ಕಳಿಗೆ ಕಲಿಸಲಿಕ್ಕಾಗಿ ನಾವೇ ಕಲಿಯಲು ಶುರು ಮಾಡೋಣ ಅಂತ ಹೆತ್ತವರು ನಿರ್ಧರಿಸುವುದಿದೆಯೇ ? ಆ ದಿನ ನನಗೆ ಅನಿಸಿತು: ಈಗ ನಾನೇ ಹಕ್ಕಿಗಳ ಬಗ್ಗೆ ಕಲಿಯಬೇಕು; ಇಲ್ಲವಾದರೆ ಅವಳು ಹಕ್ಕಿಗಳ ಬಗ್ಗೆ ಆಸಕ್ತಿ ಕಳೆದುಕೊಂಡಾಳು. ಹೀಗೆಯೇ ಅವಳು ಮುಂದೆ ಶಾಲಾ ಪಠ್ಯ ವಿಷಯಗಳಲ್ಲೂ ಆಸಕ್ತಿ ಕಳೆದುಕೊಂಡರೆ ಅದಕ್ಕೆ ಯಾರು ಹೊಣೆ ?



ಆಗ ಮಕ್ಕಳ ಶಾಲೆಯ ಮೇಲೆ, ಶಿಕ್ಷಕರ ಮೇಲೆ ಅಥವಾ ಸಿಲೆಬಸ್ಸಿನ ಮೇಲೆ ತಪ್ಪು ಹೊರಿಸಬಹುದು. ಆದರೆ ಹೆತ್ತವರ ಜವಾಬ್ದಾರಿ ಏನು ? ಶಾಲಾಪಾಠಗಳಲ್ಲಿ ಮಕ್ಕಳ ಆಸಕ್ತಿ ಕುದುರಿಸುವ ಬಗ್ಗೆ ಹೆತ್ತವರಿಗೆ ಜವಾಬ್ದಾರಿ ಇಲ್ಲವೇ ? ಖಂಡಿತ ಇದೆ. ನಾವು ಹೆತ್ತವರು ದಿನವೂ ಒಂದಷ್ಟು ಹೊತ್ತು ಓದಿನಂತಹ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿ, ನಮ್ಮ ಮಕ್ಕಳಿಗೂ ಅಂಥದ್ದರಲ್ಲಿ ಆಸಕ್ತಿ ಮೂಡಿಸಬೇಕಾಗಿದೆ.

**ಚಿಟ್ಟೆಗಳಿಂದ ಗಣಿತಕ್ಕೆ**

''ಇದೇನು ? ಚಿಟ್ಟೆಗಳಿಗೂ ಗಣಿತಕ್ಕೂ ಏನು ಸಂಬಂಧ ?'' ಅಂತ ಕೇಳುತ್ತೀರಾ ? ಅದರಲ್ಲೇ ಇರೋದು ಸ್ವಾರಸ್ಯ. ಮಕ್ಕಳೊಂದಿಗೆ ತಾನೂ ಮಗುವಾಗಿಬಿಡುತ್ತಿದ್ದ ಶಿಕ್ಷಕಿಯೊಬ್ಬರ ಪ್ರಸಂಗ ನೆನಪಾಗುತ್ತಿದೆ. ಶಾಲಾ ಓದಿನಲ್ಲಿ ಹಿಂದೆ ಬಿದ್ದ ಮಕ್ಕಳನ್ನು ಹೆತ್ತವರು ಈಕೆಯ ಬಳಿ ಕಳಿಸುತ್ತಿದ್ದರು. ಅಂಥ ಮಕ್ಕಳಿಗೆ ಓದಿನಲ್ಲಿ ಆಸಕ್ತಿ ಕುದುರಿಸಲು ವಿನೂತನವಾದ ಆದರೆ ಸರಳವಾದ ವಿಧಾನವೊಂದನ್ನು ಅವರು ಬಳಸುತ್ತಿದ್ದರು. ಮಕ್ಕಳೊಂದಿಗೆ ಮಾತಾಡುತ್ತ, ಆಟವಾಡುತ್ತ ಮಕ್ಕಳಿಗೆ ಯಾವುದರಲ್ಲಿ ಆಸಕ್ತಿ ಇದೆಯೆಂದು ಅವರು ಪತ್ತೆ ಹಚ್ಚುತ್ತಿದ್ದರು. ಅನಂತರ ಆ ವಿಷಯದಿಂದಲೇ ಮಗುವಿಗೆ ಕಲಿಸಲು ಶುರುಮಾಡುತ್ತಿದ್ದರು.

ತಮ್ಮ ಮಗಳನ್ನು ಇವರ ಬಳಿ ಕರೆತಂದ ತಾಯಿಯೊಬ್ಬಾಕೆ ಹೇಳಿದರು, ''ಇವಳಿಗೆ ಗಣಿತ ಎಂದರೆ ಆಗದು. ಅದು ಕಷ್ಟ ಅನ್ನುತ್ತಾಳೆ. ಈ ಬಾರಿ ಗಣಿತದಲ್ಲಿ ಫೇಲಾಗಿದ್ದಾಳೆ. ಏನಾದರೂ ಮಾಡಿ ಇವಳಿಗೆ ಗಣಿತ ಕಲಿಸಿ.'' ಆಕೆ ಅತ್ತ ಹೋದೊಡನೆ, ಈ ಶಿಕ್ಷಕಿ ಏಳನೆಯ ಕ್ಲಾಸಿನ ಆ ಬಾಲಕಿಯೊಂದಿಗೆ ಮಾತನಾಡಲು ಶುರು ಮಾಡಿದರು. ಸುಮಾರು ಒಂದು ತಾಸು ಮಾತಾಡಿದರು. ಆದರೆ ಅವರು ಗಣಿತದ ಬಗ್ಗೆ ಒಂದು ಮಾತನ್ನೂ ಆಡಲಿಲ್ಲ.

ಎರಡನೆಯ ದಿನವೂ ಹೀಗೆಯೇ ಆಯಿತು. ನಿಜ ಹೇಳಬೇಕೆಂದರೆ, ಎರಡನೆಯ ದಿನ ಬಾಲಕಿಯೇ ಮಾತಾಡಿದ್ದು ಜಾಸ್ತಿ - ಚಿಟ್ಟೆಗಳ ಬಗ್ಗೆ. ಆ ಬಾಲಕಿಗೆ ಬಹಳ ಖುಷಿ. ಯಾಕೆಂದರೆ ಅವಳು ಗಣಿತ ಕಲಿಯಲು ಬಂದಿದ್ದರೂ, ಶಿಕ್ಷಕಿ ಗಣಿತದ ಬಗ್ಗೆ ಚಕಾರ ಎತ್ತಿರಲಿಲ್ಲ. ಬದಲಾಗಿ ಅವಳು ಚಿಟ್ಟೆಗಳ ಬಗ್ಗೆ ಇವಳ ಮಾತನ್ನೇ ಕೇಳುತ್ತಿದ್ದರು. ಯಾಕೆಂದರೆ, ಆ ಬಾಲಕಿಗೆ ಚಿಟ್ಟೆಗಳೆಂದರೆ ಬಹಳ ಇಷ್ಟ ಎಂಬುದನ್ನು ಪತ್ತೆ ಮಾಡಿದ್ದ ಅವರು, ಚಿಟ್ಟೆಗಳ ಬಗ್ಗೆ ಅವಳಿಗಿದ್ದ ಮಾಹಿತಿಯನ್ನು ಮೆಚ್ಚಿಕೊಂಡಿದ್ದರು.

ಮೂರನೆಯ ದಿನ, ಶಿಕ್ಷಕಿಯ ಸೂಚನೆಯಂತೆ ಬಾಲಕಿ ತನ್ನ ಚಿಟ್ಟೆಗಳ ಸಂಗ್ರಹ ತಗೊಂಡು ಬಂದಳು. ಅವನ್ನು ನೋಡಿ ಅಚ್ಚರಿಪಟ್ಟ ಶಿಕ್ಷಕಿ ಚಿಟ್ಟೆಗಳ ರೆಕ್ಕೆಗಳ ಆಕಾರದ ಬಗ್ಗೆ ಮಾತಾಡಿದರು. ಅನಂತರ ಆ ರೆಕ್ಕೆಗಳಲ್ಲಿರುವ ವಿನ್ಯಾಸಗಳ ಬಗ್ಗೆ; ಅವುಗಳಿಗೂ ತ್ರಿಕೋನ, ಆಯತ, ವೃತ್ತದಂತಹ ಜ್ಯಾಮಿತಿಯ ಆಕೃತಿಗಳಿಗೂ ಇರುವ ಸಂಬಂಧದ ಬಗ್ಗೆ. ಬಳಿಕ ವಿವಿಧ ವಿನ್ಯಾಸಗಳ ಸಂಖ್ಯೆಗಳು ಹಾಗೂ ಆ ಸಂಖ್ಯೆಗಳ ಪರಸ್ಪರ ಸಂಬಂಧದ ಬಗ್ಗೆ. ಅದಾದ ಬಳಿಕ ಚಿಟ್ಟೆಗಳು ಹಾರುವ ಬಗೆ ಹಾಗೂ ಹಾರಾಟ ಪಥದ ಗಣಿತದ ಬಗ್ಗೆ. ಅವರೀಗ ಗಣಿತದ ಪಾಠವನ್ನೇ ಮಾಡುತ್ತಿದ್ದರು. ಆದರೆ ಆ ಬಾಲಕಿಗೆ ಅದು ಗಣಿತದ ಪಾಠ ಅನ್ನಿಸಲೇ ಇಲ್ಲ. ಅವಳ ಮಟ್ಟಿಗೆ ಅದು ಚಿಟ್ಟೆಗಳ ಪಾಠವಾಗಿತ್ತು. ಅವಳಿಗೆ ಕಷ್ಟವಾಗಿದ್ದ

ಗಣಿತದ ಪಾಠ ಅವಳಿಗೆ ಇಷ್ಟವಾಗಿದ್ದ ಚಿಟ್ಟೆಗಳ ಪಾಠವಾಗಿ ಮಾರ್ಪಾಡಾಗಿತ್ತು - ಜಾಣ ಶಿಕ್ಷಕಿಯ ನೈಪುಣ್ಯದಿಂದಾಗಿ.

ಇಂಥ ನೈಪುಣ್ಯವನ್ನು ಹೆತ್ತವರೆಲ್ಲರೂ ಕಲಿಯಬಹುದಾಗಿದೆ. ಮಕ್ಕಳಿಗೆ ಯಾವುದಾದರೂ ವಿಷಯ ಕಷ್ಟವೆನಿಸಿದಾಗ, ಟ್ಯೂಷನ್ನಿಗೆ ಕಳಿಸಿ, ನಮ್ಮ ಜವಾಬ್ದಾರಿಯಿಂದ ಪಲಾಯನ ಮಾಡುತ್ತೇವೆ, ಅಲ್ಲವೇ ? ಅದರ ಬದಲಾಗಿ, ನಮ್ಮ ಮಕ್ಕಳಿಗೆ ಆಸಕ್ತಿಯಿರುವ ವಿಷಯದಿಂದ ಶುರುಮಾಡಿ, ಆ ಆಸಕ್ತಿಯನ್ನು ಅವರಿಗೆ ಕಷ್ಟವಾದ ವಿಷಯದತ್ತ ತಿರುಗಿಸಿದರೆ, ಮಕ್ಕಳು ತಾವಾಗಿಯೇ ಕಲಿಯಲು ಶುರುಮಾಡುತ್ತಾರೆ. ಆಗ ನಮ್ಮ ಮಕ್ಕಳಿಗೆ ಟ್ಯೂಷನ್ನಿನ ಅಗತ್ಯವೇ ಇರುವುದಿಲ್ಲ, ಅಲ್ಲವೇ ?

**ಅದು ಮಾಡಬೇಡ, ಇದು ಮಾಡಬೇಡ**

ಬೆಳಗ್ಗೆ ಎದ್ದ ಮಗು ರಾತ್ರಿ ಮಲಗುವವರೆಗೆ ಹೆತ್ತವರಿಂದ ಎಂತಹ ಮಾತುಗಳನ್ನು ಹೆಚ್ಚಾಗಿ ಕೇಳುತ್ತದೆ ? ಹಾಸಿಗೆಯಿಂದೆದ್ದು ಮುಖ ತೊಳೆಯಲಿಕ್ಕಾಗಿ ಮಗು ನೀರು ತೆಗೆಯಲು ಹೋದರೆ, ''ನೀನು ನೀರು ತೆಗೀಬೇಡ, ನೀನು ಚೆಲ್ಲುತ್ತಿ, ನಾನೇ ಕೊಡ್ತೇನೆ.'' ಆ ಮಗು ಮೆಟ್ಟಲು ಇಳಿಯಲು ಹೋದರೆ, ''ಇಳೀಬೇಡ, ಇಳೀಬೇಡ, ಜಾರಿ ಬೀಳ್ತೀಯಾ. ನಾನೇ ಇಳಿಸ್ತೇನೆ.'' ಅದೇ ಮಗು ಮೆಟ್ಟಲು ಹತ್ತಲು ಹೋದರೆ, ''ಹತ್ತಬೇಡ, ಹತ್ತಬೇಡ, ಬಿದ್ ಬಿಡ್ತೀಯಾ. ನಾನೇ ಹತ್ತಿಸ್ತೇನೆ.''

ಇಂಥ ''ಬೇಡ ಬೇಡ'' ಅನ್ನುವ ಮಾತುಗಳು ಮಕ್ಕಳ ಆತ್ಮವಿಶ್ವಾಸವನ್ನೇ ಮುದುಡಿಸುತ್ತವೆ. ತಾನು ಯಾವುದಕ್ಕೂ ನಾಲಾಯಕ್ಕು ಎಂಬ ಭಾವನೆಯನ್ನು ಮಗುವಿನಲ್ಲಿ ಬೆಳೆಸುತ್ತವೆ. ಇದೇ ಮಾತುಗಳನ್ನು ಧನಾತ್ಮಕವಾಗಿ ''ಹೀಗೆ ಮಾಡು'' ಎಂಬ ರೀತಿಯಲ್ಲಿ ಮಗುವಿಗೆ ಹೇಳಲು ಹೆತ್ತವರು ಕಲಿತರೆ...... ಉದಾಹರಣೆಗೆ, ಮಗು ಮೆಟ್ಟಲು ಇಳಿಯುವಾಗ, ''ನಿಧಾನವಾಗಿ ಇಳಿ. ಮೆಟ್ಟಲು ನೋಡ್ಕೊಂಡು, ಒಂದೊಂದೇ ಮೆಟ್ಟಲಿಳಿ'' ಅಂತ ಪ್ರೋತ್ಸಾಹಿಸಬಹುದು. ಬಾಲ್ಯದಲ್ಲಿ ಕೇಳಿದ ಇಂಥ ಮಾತುಗಳು ಬದುಕಿನುದ್ದಕ್ಕೂ ವ್ಯಕ್ತಿಗೆ ಧನಾತ್ಮಕ ಸಂದೇಶವನ್ನೇ ನೀಡಬಲ್ಲವು. ತನಗೆದುರಾದ ಅವಕಾಶಗಳೆಲ್ಲದರ ಬಾಗಿಲು ತೆರೆಯುವ ಪ್ರಬಲ ಇಚ್ಛಾಶಕ್ತಿಯನ್ನು ವ್ಯಕ್ತಿಯಲ್ಲಿ ಮೂಡಿಸಬಲ್ಲವು.

**ಅದೇನು ? ಇದೇನು ?**

ಮಗು ಪ್ರಶ್ನೆ ಕೇಳುವುದು ಸಹಜ. ಆದರೆ ಮುಗ್ಧ ಮಗು ಹೆತ್ತವರೊಂದಿಗೆ ಪ್ರಶ್ನೆಗಳನ್ನು ಕೇಳಿದಾಗ ಏನಾಗುತ್ತದೆ ?

ಐದು ವರ್ಷಗಳ ಮಗುವೊಂದು ತನ್ನ ತಂದೆಯೊಂದಿಗೆ ನಡೆದು ಹೋಗುತ್ತಿದ್ದ ಪ್ರಸಂಗವೊಂದು ನೆನಪಾಗುತ್ತಿದೆ. ರಸ್ತೆ ಪಕ್ಕದ ಮರವೊಂದನ್ನು ತೋರಿಸುತ್ತ ಮಗು ಕೇಳಿತು, ''ಅಪ್ಪ, ಅದ್ಯಾವ ಮರ ?'' ''ಅದು ಮಾವಿನ ಮರ, ಬೇಗ ನಡಿ'' ಎಂಬ ಉತ್ತರ ತಂದೆಯಿಂದ. ತುಸು ದೂರ ಹೋಗುವಷ್ಟರಲ್ಲಿ, ''ಅಪ್ಪ, ಇದ್ಯಾವ ಮರ ?'' ಎಂಬ ಮಗುವಿನ ಪ್ರಶ್ನೆಗೆ, ''ಏನೋ ಒಂದು ಮರ. ನಿಂಗೆ ಮಾತಾಡದೆ ಬರೋಕಾಗಲ್ವ ?'' ಎಂಬ ಗದರಿಕೆಯೇ ಅಪ್ಪನ ಉತ್ತರವಾಯಿತು. ಅದಾಗಿ ಸ್ವಲ್ಪ ಹೊತ್ತಿನಲ್ಲಿ ಮಗು ಅಂಜುತ್ತಲೇ ಕೇಳಿತು. ''ಅಪ್ಪ, ಅದೆಂಥ ಮರ ?'' ಈಗ ಅಪ್ಪ ಕಣ್ಣು ಕೆರಳಿಸಿ ಮಗುವಿನತ್ತ ತಿರುಗಿ ''ಬಾಯಿ ಮುಚ್ಕೊಂಡು ಬಾರದಿದ್ರೆ ಎರಡು ಬಿಗೀತೇನೆ ನೋಡು'' ಅಂದಾಗ, ಮಗುವಿನ ಪ್ರಶ್ನೆಗಳೆಲ್ಲ ಗಂಟಲಿನಲ್ಲೇ ಉಳಿದವು. ಹೀಗೆ ಬಾಡಿಹೋದ ಮಕ್ಕಳ ಪ್ರಶ್ನಿಸುವ ಹೂಮನ ಮತ್ತೆ ಅರಳೀತೇ ? ಹೀಗಾಗದಂತಿರಲು ಹೆತ್ತವರಿಂದು ಪ್ರಶ್ನೆ ಕೇಳಲು ಮಕ್ಕಳನ್ನು ಪ್ರೋತ್ಸಾಹಿಸಬೇಕಾಗಿದೆ. ಅದಕ್ಕಾಗಿ ಮಕ್ಕಳ ಪ್ರಶ್ನೆಗಳನ್ನು ಎದುರಿಸುವ ತಾಳ್ಮೆಯನ್ನೂ, ಉತ್ತರಿಸುವ ಕೌಶಲ್ಯವನ್ನೂ ಕಲಿಯಬೇಕಾಗಿದೆ. ಇಲ್ಲವಾದರೆ, ಗಿಡ ಮರ ಬಳ್ಳಿಗಳ ಬಗ್ಗೆ, ಪಕ್ಷಿ ಪ್ರಾಣಿ ಜಲಚರಗಳ ಬಗ್ಗೆ, ವಿಶ್ವದ ವಿಸ್ಮಯಗಳ ಬಗ್ಗೆ ನಮ್ಮ ಮಕ್ಕಳಲ್ಲಿ ಕುತೂಹಲ ಬೆಳೆಯದಿರುವುದಕ್ಕೆ ನಾವೇ ಹೊಣೆಗಾರರಾಗುತ್ತೇವೆ.

**''ಕುಣಿಯಲು ಗೊತ್ತಿಲ್ಲದವನು.....''**

ಈ ಗಾದೆ ಮಾತು ನಮಗೆಲ್ಲರಿಗೂ ಗೊತ್ತು. ಆದರೆ ಈ ಪ್ರವೃತ್ತಿ ಮೂಡಲು ಹೆತ್ತವರು ಎಷ್ಟರಮಟ್ಟಿಗೆ ಕಾರಣರು ?

ಹೊಟ್ಟೆ ತೆವಳಿಕೊಂಡು ಸಾಗುವ ಮಗು, ಕೈಯೂರಿ ಎದ್ದು ನಡೆಯಲು ಕಲಿಯುವಾಗ ಏನಾಗುತ್ತದೆ ಎಂಬುದನ್ನು ಜ್ಞಾಪಿಸಿಕೊಳ್ಳಿ. ಅಂಥ ಮಗು ಆಯತಪ್ಪಿ ಬಿದ್ದು, ಮುಖ ನೆಲಕ್ಕೆ ಜಜ್ಜಿ, ರಕ್ತ ಒಸರುವಾಗ ಅತ್ತು ರಂಪ ಮಾಡುವುದು ಸಹಜ. ಆಗ ಎಷ್ಟು ಸಂತೈಸಿದರೂ ಮುದ್ದು ಮಾಡಿದರೂ ಮಗು ಅಳು ನಿಲ್ಲಿಸುವುದಿಲ್ಲ. ಆ ಕ್ಷಣದಲ್ಲಿ ಹೆತ್ತವರು ಏನು ಮಾಡುತ್ತಾರೆ ? ಮಗುವಿನ ಅಮ್ಮ ತಟಕ್ಕನೆ ನೆಲಕ್ಕೆ ಕೈಯಿಂದ ಬಡಿದು, ''ಅಬ್ಬ ನೆಲವೇ ! ನನ್ನ ಮಗೂನ್ನ ಬೀಳಿಸಿಬಿಟ್ಟಿತು. ನೆಲದ್ದೇ ತಪ್ಪು. ಏಟು ಕೊಟ್ಟೆ ನೋಡು. ನೀನಿನ್ನು ಅಳಬೇಡ'' ಅಂತ ಮಗುವನ್ನು ಅಪ್ಪಿಕೊಳ್ಳುವುದನ್ನು ನಾವೆಲ್ಲ ಕಣ್ಣಾರೆ ಕಂಡಿದ್ದೇವೆ. ಆಗ ಮಗುವಿನ ಗಮನ ಗಾಯದ ನೋವಿನಿಂದ ಬೇರೆಡೆ ತಿರುಗಿ ಅಳು ನಿಲ್ಲಿಸಬಹುದು. ಆದರೆ, ತಪ್ಪು ತನ್ನದೇ ಆಗಿದ್ದರೂ ಅದಕ್ಕಾಗಿ ಬೇರೆ ವಸ್ತು ಅಥವಾ ವ್ಯಕ್ತಿಯನ್ನು ದೂಷಿಸುವುದು ಸರಿ ಎಂಬ ಸಂದೇಶವನ್ನು ಮಗು ಹೆತ್ತವರಿಂದ ಪಡೆಯುತ್ತದೆ.

ಇದರ ಬದಲಾಗಿ, ಮಗುವಿಗೆ ತನ್ನ ತಪ್ಪು ಒಪ್ಪಿಕೊಳ್ಳಲು ಹೆತ್ತವರು ಕಲಿಸಿದರೆ... ಆದರೆ, ಈ ಹೆತ್ತವರೂ ತಮ್ಮ ಬಾಲ್ಯದಲ್ಲಿ ಅದೇ ಸಂದೇಶ ಪಡೆದವರಲ್ಲವೇ ? ಈಗ ಆ ಅಭ್ಯಾಸ ತೊರೆದು, ತಮ್ಮ ತಪ್ಪು ಒಪ್ಪಿಕೊಳ್ಳಲು ಕಲಿತು, ಅದನ್ನೇ ಮಕ್ಕಳಿಗೂ ಕಲಿಸಬೇಕಾಗಿದೆ - ತಮ್ಮ ಮಕ್ಕಳ ಒಳಿತಿಗಾಗಿ.

**ತಪ್ಪುಗಳಿಂದ ಕಲಿಯುವುದು**

ನಮ್ಮಿಂದಾದ ತಪ್ಪು ಒಪ್ಪಿಕೊಳ್ಳಲು ಕಲಿತರೆ ಮಾತ್ರ ಆ ತಪ್ಪುಗಳಿಂದ ಕಲಿಯಲು ನಮಗೆ ಸಾಧ್ಯವಾಗುತ್ತದೆ. ಈ ಶಿಕ್ಷಣ ನೀಡಬಲ್ಲ ಹೆತ್ತವರು ಹೊಸ ಕಲಿಕೆಯ ಅದ್ಭುತ ಅನುಭವವನ್ನು ಮಕ್ಕಳಿಗೆ ಒದಗಿಸಬಲ್ಲರು. ಒಂದು ಆಕಸ್ಮಿಕ ಘಟನೆಯನ್ನು ಒಬ್ಬಳು ತಾಯಿ ಯಾವ ರೀತಿ ಇಂಥ ಕಲಿಕೆಗಾಗಿ ದುಡಿಸಿಕೊಂಡಳು ಎಂಬುದರಿಂದ ಈ ಮಾತಿನ ಅರ್ಥ ತೆರೆದುಕೊಳ್ಳುತ್ತದೆ. ಆದದ್ದಿಷ್ಟೇ: ಆರು ವರುಷಗಳ ಮಗಳು ಫ್ರಿಜ್‌ನಿಂದ ಜ್ಯೂಸಿನ ಸೀಸೆ ಹೊರತೆಗೆದಾಗ ಅದು ಕೈಜಾರಿ ಬಿದ್ದು ಒಡೆಯಿತು. ಜ್ಯೂಸ್ ನೆಲಕ್ಕೆ ಚೆಲ್ಲಿತು.




ನೀವಾದರೆ ಏನು ಮಾಡುತ್ತಿದ್ದಿರಿ, ಅಂತ ಕಲ್ಪಿಸಿಕೊಳ್ಳಿ. ಅಮ್ಮನಿಂದ ಬಯ್ಗುಳದ ಸುರಿಮಳೆ ನಿರೀಕ್ಷಿಸುತ್ತ ನಿಂತಿದ್ದ ಆ ಬಾಲಕಿಗೆ ಅಚ್ಚರಿ ಕಾದಿತ್ತು.

ಆ ತಾಯಿ ಮಗಳ ಮೈದಡವಿ, ''ಜ್ಯೂಸ್ ಚೆಲ್ಲಿ ಹೋಯಿತು. ಹೋಗಲಿ ಬಿಡು. ಈಗ ಏನು ಮಾಡೋಣ ?'' ಅಂತ ಸಮಾಧಾನದಿಂದ ಕೇಳಿದಳು. ''ನೆಲಕ್ಕೆ ಚೆಲ್ಲಿದ ಜ್ಯೂಸಿನಲ್ಲಿ ಕಡ್ಡಿ ಆಡಿಸುತ್ತಾ ಒಂದಷ್ಟು ಹೊತ್ತು ಆಟವಾಡಿಕೋ. ಇದೊಂದು ಹೊಸ ಆಟ ನಿನಗೆ'' ಅಂತ ಹೇಳಿ ಅಮ್ಮ ಅತ್ತ ಹೋದಳು. ಮಗಳು ನಿಧಾನವಾಗಿ ಹೊಸ ಆಟಕ್ಕಿಳಿದಳು. ಹತ್ತು ನಿಮಿಷಗಳಲ್ಲಿ ಇತ್ತ ಬಂದ ಅಮ್ಮ ಕೇಳಿದಳು, ''ಹೇಗಿತ್ತು ಹೊಸ ಆಟ ? ಚೆನ್ನಾಗಿತ್ತು ಅಲ್ವ ?'' ಈಗ ಮಗಳ ಆತಂಕವೆಲ್ಲ ಮಾಯವಾಗಿತ್ತು. ಮಗಳು ಮುಗುಳ್ನಗುತ್ತಿದ್ದಂತೆ ಅಮ್ಮ ಹೇಳಿದಳು ''ಇದನ್ನೆಲ್ಲಾ ಶುಚಿ ಮಾಡೋಣ. ನನಗೆ ಸ್ವಲ್ಪ ಸಹಾಯ ಮಾಡು. ಕಸಬರಿಕೆ ತಾ. ನೆಲ ಒರಸುವ ಬಟ್ಟೆ ತಾ. ಜೋಪಾನವಾಗಿ ಗಾಜಿನ ಚೂರು ತೆಗೆದು, ಚೆಲ್ಲಿದ ಜೂಸ್ ಒರೆಸೋಣ.'' ಅದೇ ರೀತಿ, ಇಬ್ಬರೂ ಸೇರಿ ನೆಲ ಶುಚಿ ಮಾಡಿದರು.

ಈಗ ಅಮ್ಮ ಮಗಳನ್ನು ಫ್ರಿಜ್ಜಿನ ಬಳಿಗೆ ಕರೆದೊಯ್ದಳು. ಮಗಳ ಕೈಗೆ ನೀರು ತುಂಬಿದ ಪ್ಲಾಸ್ಟಿಕ್ ಸೀಸೆ ಕೊಟ್ಟಳು. ''ಇದನ್ನೀಗ ಫ್ರಿಜ್‌ನಲ್ಲಿಟ್ಟು ಹೊರ ತೆಗಿ. ಇದು ಬಿದ್ದರೂ ಪರವಾಗಿಲ್ಲ.'' ಮಗಳು ಹಾಗೆಯೇ ಮಾಡಿದಳು. ಆದರೆ ಆ ಸೀಸೆಯೂ ಕೈ ಜಾರಿ ಬಿತ್ತು. ''ಹಾಗಲ್ಲ ಹೀಗೆ. ಎರಡೂ ಕೈಗಳ ಬೆರಳುಗಳಿಂದ ಸೀಸೆಯ ಕತ್ತು ಹಿಡಿದು ಎತ್ತು'' ಅಂತ ಅಮ್ಮ ತೋರಿಸಿಕೊಟ್ಟಳು. ಕೆಲವೇ ನಿಮಿಷಗಳಲ್ಲಿ ಫ್ರಿಜ್‌ನಿಂದ ಸೀಸೆಯನ್ನು ಕೈಜಾರದಂತೆ ಹೊರತೆಗೆಯುವ ವಿಧಾನವನ್ನು ಮಗಳು ಕಲಿತುಬಿಟ್ಟಳು.

ಅಂದು ಆ ಮಮತೆಯ ತಾಯಿ ತನ್ನ ಮಗಳಿಗೆ ಈ ಒಂದು ಪುಟ್ಟ ಪಾಠದಿಂದ ಬದುಕಿನ ಪಾಠವನ್ನೇ ಕಲಿಸಿದಳಲ್ಲವೇ ? ನಾವು ಹೆತ್ತವರು ನಮ್ಮ ಮಕ್ಕಳಿಗೆ ಇದೇ ರೀತಿ ಕಲಿಸಲು ಕಲಿಯಬೇಕಾಗಿದೆ.

ಹೆತ್ತವರು ತಮ್ಮ ಮಕ್ಕಳಿಗೆ ಎಂಥ ಶಿಕ್ಷಣ ನೀಡಿದ್ದಾರೆ ಎಂಬುದನ್ನು ಹೇಗೆ ತಿಳಿಯಬಹುದು ? ಮಕ್ಕಳನ್ನು ಯಾವ ಶಾಲೆಗೆ ಸೇರಿಸಿದ್ದಾರೆ ? ಅದಕ್ಕಾಗಿ ಎಷ್ಟು ಡೊನೇಷನ್ ಕೊಟ್ಟಿದ್ದಾರೆ ? ಯಾರ ಬಳಿ ಟ್ಯೂಷನಿಗೆ ಕಳಿಸುತ್ತಿದ್ದಾರೆ ? – ಇವುಗಳಿಂದ ತಿಳಿಯಲು ಸಾಧ್ಯವೇ ? ಇಲ್ಲ. ಅಪ್ಪ-ಅಮ್ಮ ಇಬ್ಬರೂ ಮನೆಯಲ್ಲಿ ಇಲ್ಲದಿರುವಾಗ, ಅವರ ಮಕ್ಕಳು ಹೇಗೆ ಮನೆ ನಡೆಸುತ್ತಾರೆ ಎಂಬುದರಿಂದ ಮಾತ್ರ ತಿಳಿಯಬಹುದು – ಆ ಹೆತ್ತವರು ಬದುಕನ್ನು ಎದುರಿಸಲಿಕ್ಕಾಗಿ ತಮ್ಮ ಮಕ್ಕಳನ್ನು ಯಾವ ರೀತಿ ರೂಪಿಸಿದ್ದಾರೆ ಎಂಬುದನ್ನು.


**ಅಡ್ಡೂರು ಕೃಷ್ಣರಾವ್**
ವ್ಯವಸ್ಥಾಪಕರು, ಕಾರ್ಪೊರೇಷನ್ ಬ್ಯಾಂಕ್, ಎಂ. ಜಿ. ರಸ್ತೆ
ಚಿಕ್ಕಮಗಳೂರು - ೫೭೭ ೧೦೧

# ಆಳ ಸಾಗರದ ಖನಿಜ ನಿಕ್ಷೇಪ

ಸಾಮಾನ್ಯವಾಗಿ ನಾವೆಲ್ಲ ಸಾಗರವನ್ನು ಉಪ್ಪು ಹಾಗೂ ಮೀನುಗಳ ಆಗರವೆಂದು ಅರಿತಿದ್ದೇವೆ. ನಮ್ಮ ಗ್ರಹದ ಸುಮಾರು ಎಪ್ಪತ್ತು ಪ್ರತಿಶತ ಮೇಲ್ಭಾಗವನ್ನು ಆವರಿಸಿದ ಈ ಉಪ್ಪುನೀರಿನ ಜಲಗೋಳ ಭೂಮಿಯ ಮೇಲೆ ಸದಾ ನಡೆಯುತ್ತಿರುವ ನೈಸರ್ಗಿಕ ಕ್ರಿಯೆಗಳನ್ನು ನಿಯಂತ್ರಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಎಂದರೆ ಆಶ್ಚರ್ಯವಾಗಬಹುದು. ಜೀವಜಗತ್ತಿನ ಉಗಮದಿಂದ ಹಿಡಿದು ಭೂಮಿಯ ಮೇಲಿನ ವಾತಾವರಣ, ಮಳೆ, ಗಾಳಿ ಇತ್ಯಾದಿಗಳನ್ನೆಲ್ಲ ನಿಯಂತ್ರಿಸುವ ಸಾಗರ ಅಥವಾ ಸಮುದ್ರ ಬಹಳ ವಿಸ್ಮಯಕಾರಿಯಾಗಿರುವುದು. ಇಂತಹ ವಿಸ್ಮಯಗಳಲ್ಲೊಂದು, ಆಳಸಾಗರ ತಳದ ಮೇಲಿರುವ ಮ್ಯಾಂಗನೀಸ್ ಗಡ್ಡೆಗಳ ನಿಕ್ಷೇಪ (ಚಿತ್ರ ೧). ಈ ಗಡ್ಡೆಗಳಿಗೆ ಫೆರೋಮ್ಯಾಂಗನೀಸ್ ನಾಡ್ಯೂಲ್ಸ್, ಪಾಲಿಮೆಟ್ಯಾಲಿಕ್ ನಾಡ್ಯೂಲ್ಸ್, ಮ್ಯಾಂಗನೀಸ್ ನಾಡ್ಯೂಲ್ಸ್ ಎಂದು ವಿಧವಿಧವಾಗಿ ಕರೆಯುವರು. ಭಾರತದ ದೃಷ್ಟಿಯಿಂದ ನೋಡಿದರೆ, ಈ ಗಡ್ಡೆಗಳಲ್ಲಿ ಹೆಚ್ಚಿನಂಶದಲ್ಲಿರುವ ಕಬ್ಬಿಣ ಮತ್ತು ಮ್ಯಾಂಗನೀಸ್ ಲೋಹಕ್ಕಿಂತ ಅಧಿಕ ಮಹತ್ವವಿರುವುದು ಕಡಿಮೆ ಅಂಶದಲ್ಲಿರುವ ತಾಮ್ರ, ನಿಕ್ಕಲ್ ಹಾಗೂ ಕೊಬಾಲ್ಟ್ ಲೋಹಗಳಿಗೆ. ಇದಕ್ಕೆ ಕಾರಣ, ಮುಂದಿನ ಶತಮಾನಕ್ಕೆ ಸಾಕಾಗಿ ಉಳಿಯುವಷ್ಟು ಕಬ್ಬಿಣ ಹಾಗೂ ಮ್ಯಾಂಗನೀಸ್ ಲೋಹಗಳ ಶ್ರೀಮಂತ ನಿಕ್ಷೇಪಗಳು ನಮ್ಮ ದೇಶದ ಭೂಪ್ರದೇಶದಲ್ಲಿಯೇ ಇರುವುದು. ಹೀಗಾಗಿ ಈ ಗಡ್ಡೆಗಳಿಗೆ ಮಹತ್ವವಿರುವುದು, ೫–೨೦% ಇರುವ ಕಬ್ಬಿಣ, ೨೦-೩೦% ಇರುವ ಮ್ಯಾಂಗನೀಸ್ ಲೋಹಗಳಿಂದಲ್ಲ, ಸುಮಾರು ೧% ನಷ್ಟಿರುವ ತಾಮ್ರ, ೧% ನಷ್ಟಿರುವ ನಿಕ್ಕಲ್ ಹಾಗೂ ೦.೫% ಗಿಂತ ಕಡಿಮೆ ಇರುವ ಕೊಬಾಲ್ಟ್ ಲೋಹಗಳಿಂದ. ನಮ್ಮ ದೇಶದ ಭೂಪ್ರದೇಶದಲ್ಲಿ ಕೊಬಾಲ್ಟ್ ನಿಕ್ಷೇಪಗಳಿಲ್ಲದ್ದರಿಂದ ಆಯಾತವನ್ನೇ ಅವಲಂಬಿಸಬೇಕಾಗಿದೆ. ನಿಕ್ಕಲ್ ನಿಕ್ಷೇಪ ಉತ್ತರ ಭಾರತದ ಕೆಲ ಪ್ರದೇಶಗಳಲ್ಲಿ ಸಿಕ್ಕಿದ್ದರೂ ಇಂದಿನ ಗಣಿ ಉದ್ದಿಮೆಗೆ ಲಾಭ ನೀಡುವಷ್ಟು ಪ್ರಮಾಣದಲ್ಲಿ ಲೋಹದಂಶ ಹೊಂದಿಲ್ಲ. ಇನ್ನು ತಾಮ್ರದ ನಿಕ್ಷೇಪಗಳಂತೂ ಕ್ಷೀಣಿಸಿವೆ. ಒಂದೆಡೆ ಈ ನಿಕ್ಷೇಪಗಳ ಕೊರತೆ, ಇನ್ನೊಂದೆಡೆ ಹೈ-ಟೆಕ್ ಯಂತ್ರೀಕರಣದಲ್ಲಿ ಹೆಚ್ಚುತ್ತಿರುವ ಈ ಲೋಹಗಳ ಉಪಯೋಗ, ನಮ್ಮ ಸಾಗರ ವಿಜ್ಞಾನಿಗಳು ಹಿಂದೂ ಮಹಾಸಾಗರದಡಿಯಲ್ಲಿರುವ ಮ್ಯಾಂಗನೀಸ್ ಗಡ್ಡೆಯ ನಿಕ್ಷೇಪಗಳನ್ನು ಹುಡುಕುವುದಕ್ಕಾಗಿ ಪ್ರೇರೇಪಿಸಿತು.

ಒಂದು ಶತಮಾನದಷ್ಟು ಹಿಂದೆಯೇ (೧೮೭೩) ಸಾಗರ ತಳದಲ್ಲಿರುವ ಈ ಗಡ್ಡೆಗಳು ಎಚ್. ಎಮ್. ಎಸ್. ಚಾಲೆಂಜರ್ ಎಂಬ ಹಡಗನ್ನು ಉಪಯೋಗಿಸಿ ಶಾಂತಸಾಗರದಲ್ಲಿ ನಡೆಸಿದ ಶೋಧನೆಯಿಂದ ಬೆಳಕು ಕಂಡಿದ್ದರೂ, ಅವುಗಳಿಗೆ ಆರ್ಥಿಕ ಮಹತ್ವ ಸಿಕ್ಕಿದ್ದು ೧೯೬೫ರಲ್ಲಿ ಮೆರೊ ಎನ್ನುವ ವಿಜ್ಞಾನಿಯ ಸಂಶೋಧನೆಯಿಂದ ! ನಂತರ ಜಗತ್ತಿನ ಮುಂದುವರೆದ ಬಲಿಷ್ಠ ರಾಷ್ಟ್ರಗಳು ಮ್ಯಾಂಗನೀಸ್ ಗಡ್ಡೆಯ ನಿಕ್ಷೇಪಗಳ ಬೇಟೆಗಾಗಿ ಎಲ್ಲ ಮಹಾಸಾಗರಗಳನ್ನು ಹಲವಾರು ವರ್ಷಗಳವರೆಗೆ ಜಾಲಾಡಿಸಿದವು. ಆಮೇಲೆ ಜಗತ್ತನ್ನು ಚಕಿತಗೊಳಿಸಿದ್ದೇನೆಂದರೆ..., ಜಗತ್ತಿನ ಎಲ್ಲ ಸಾಗರ ತಳದ ಸುಮಾರು ೪೦ ಮಿಲಿಯನ್ ಚದುರ ಕಿಲೊಮೀಟರ್ ಪ್ರದೇಶದಲ್ಲಿ ಕಾರ್ಪೆಟ್ಟಿನಂತೆ ಹರಡಿರುವ ಈ ಗಡ್ಡೆಗಳು (ಚಿತ್ರ ೧) ಏನಿಲ್ಲವೆಂದರೂ ೨ ರಿಂದ ೩ ಲಕ್ಷ ಕೋಟಿ (೨-೩ ಟ್ರಿಲಿಯನ್) ಟನ್ನುಗಳ ಖನಿಜ ನಿಕ್ಷೇಪವೆಂದು ಅರಿವಾದಾಗ. ಈ ಗಡ್ಡೆಗಳನ್ನು ಜಲಜನಿತ (ಹೈಡ್ರೊಜನೆಟಿಕ್) ಹಾಗೂ ಮಟ್ಟಿಜನಿತ (ಡಯಜನೆಟಿಕ್) ಎಂದು ಮುಖ್ಯವಾಗಿ ವಿಭಾಗಿಸಬಹುದು. ಜಲಜನಿತ ಗಡ್ಡೆಗಳು, ನೀರಿನಲ್ಲಿ ನಡೆಯುವ ರಾಸಾಯನಿಕ ಕ್ರಿಯೆಯಿಂದ ಲಭ್ಯವಾದ ವಿವಿಧ ಲೋಹಗಳ ಆಕ್ಸೈಡ್‌ಗಳಿಂದ ರಚಿತವಾದರೆ, ಮಟ್ಟಿಜನಿತ ಗಡ್ಡೆಗಳು ಸಾಗರ ತಳದಲ್ಲಿರುವ ಮಣ್ಣಿನಲ್ಲಿ ಆಕ್ಸಿಜನ್ ಕೊರತೆಯಿಂದಾಗಿ ನಡೆಯುವ ರಾಸಾಯನಿಕ ಕ್ರಿಯೆಗಳಿಂದ ಹೊರಸೂಸಿದ ಲೋಹಗಳಿಂದ ರಚಿತವಾದವುಗಳು. (ಸಾಮಾನ್ಯವಾಗಿ ಈ ಎರಡೂ ಕ್ರಿಯೆಗಳ ಪರಿಣಾಮದಿಂದ ಗಡ್ಡೆಗಳ ರಚನೆಯಾಗಿರುವುದನ್ನು ತಿಳಿಯಬಹುದು). ಕಪ್ಪು ಬಟಾಟೆಯಂತೆ ತೋರುವ ಈ ಗಡ್ಡೆಗಳ ಮಧ್ಯದಲ್ಲೊಂದು ಹಣ್ಣಿನಲ್ಲಿ ಬೀಜವಿರುವ ಹಾಗೆ ಬೀಜ ಅಥವಾ ಕೋಶ (ನ್ಯುಕ್ಲಿಯಸ್) ಇರುವುದು. ಈ ಬೀಜದ ಸುತ್ತಲೂ ನೀರುಳ್ಳಿಯ ಪಕಳೆಗಳಂತೆ ಬೆಳೆದ ಹಲವಾರು ಲೋಹಗಳ ಆಕ್ಸೈಡಿನಿಂದ ರೂಪಿತವಾದ ಪದರುಗಳಿರುವವು (ಚಿತ್ರ ೨). ಈ ಪದರುಗಳ ರಚನೆ, ರಾಸಾಯನಿಕ ಸಂಯೋಜನೆ ಇತ್ಯಾದಿಗಳನ್ನು ವಿಶ್ಲೇಷಿಸಿ ಸಾಗರೀಯ ಭೂವಿಜ್ಞಾನಿಗಳು ಲಕ್ಷಾಂತರ ವರ್ಷಗಳ ಹಿಂದಿನಿಂದ ಸಾಗರದಲ್ಲಿ ನಡೆದಿರಬಹುದಾದ ವಿವಿಧ ನೈಸರ್ಗಿಕ ಕ್ರಿಯೆಗಳನ್ನು ಕಂಡುಹಿಡಿಯುತ್ತಾರೆ. ಈ ಗಡ್ಡೆಗಳ ಬೆಳವಣಿಗೆಯ ವೇಗ ಅತ್ಯಂತ ನಿಧಾನವಾಗಿದ್ದು, ಬರೀ ೧-೧೦ ಮಿಲಿಮೀಟರ್ ಪ್ರತಿ ದಶಲಕ್ಷ ವರ್ಷದಲ್ಲಿ ಬೆಳೆಯುತ್ತವೆ. ಆದ್ದರಿಂದ ಇವುಗಳನ್ನು ನಶಿಸುವ ನಿಕ್ಷೇಪಗಳೆಂದು (ಪುನರುತ್ಪಾದಿಸಲಾಗದ) ಕರೆಯಬಹುದು.

ಡಾ॥ ವಿರುಪಾಕ್ಷ ಬಣಕಾರ

ಈ ನಿಕ್ಷೇಪಗಳ ದಿಸೆಯಲ್ಲಿ ಭಾರತ ೧೯೮೭ರ ಆಗಸ್ಟ್ ತಿಂಗಳಿನ ೧೭ನೇ ದಿನಾಂಕದಂದು ಜಗತ್ತನ್ನೇ ಬೆರಗುಗೊಳಿಸಿತು. ಆ ದಿನ ನ್ಯೂಯಾರ್ಕಿನಲ್ಲಿ ಸಂಯುಕ್ತ ರಾಷ್ಟ್ರಸಂಘದ ಸಾಗರ ಕಾನೂನುಗಳನ್ನು ನಿಯಂತ್ರಿಸುವ ಕೌನ್ಸಿಲ್ (ಯುನೈಟೆಡ್ ನೇಶನ್ಸ್ ಕೌನ್ಸಿಲ್ ಫಾರ್ ಲಾಸ್ ಆಫ್ ಸೀಸ್), ಭಾರತಕ್ಕೆ, ಮಧ್ಯ ಹಿಂದೂ ಮಹಾಸಾಗರದ ಈ ಗಡ್ಡೆಗಳ ನಿಕ್ಷೇಪದ ಒಡೆತನದ ಅಧಿಕಾರ ನೀಡಿತು. ಹೀಗೆ ಅಂತರರಾಷ್ಟ್ರೀಯ ಸಮುದಾಯಕ್ಕೆ ಹೊಂದಿದ ಸಾಗರ ತಳದ ನಿಕ್ಷೇಪಗಳ ಒಡೆತನ ಪಡೆದ ರಾಷ್ಟ್ರಗಳಲ್ಲಿ ಭಾರತ ಮೊದಲ ರಾಷ್ಟ್ರವಾಯಿತು. ಈಗ ನಮ್ಮ ದೇಶದ ಒಡೆತನದಲ್ಲಿ

(೩೦ನೇ ಪುಟಕ್ಕೆ)




*೫ ಕಿಲೋಮೀಟರ್ ನೀರಿನಾಳದ ಸಾಗರ ತಳದ ಮೇಲೆ ಹರಡಿರುವ ಫೆರೋಮ್ಯಾಂಗನೀಜ ಗಡ್ಡೆಗಳು. ಈ ಚಿತ್ರವನ್ನು ವಿಶೇಷ ರೀತಿಯ ಅಂತರ್ಜಲ ಫೋಟೋಗ್ರಫಿ ಉಪಕರಣದಿಂದ ಸೆರೆಹಿಡಿಯಲಾಗಿದೆ. ಈ ಗಡ್ಡೆಗಳ ಸರಾಸರಿ ವ್ಯಾಸ ಸುಮಾರು ೬ ಸೆಂ. ಮೀ.*

# ವಿದ್ಯುನ್ಮಾನ ನಗರ ಬೆಂಗಳೂರಿನ ಶ್ರೀಸಾಮಾನ್ಯರ ಬದುಕಿನ ಪುಟಗಳು

**ಚೆ**ಣ್ಣೇರಾವ್ ಹೆಸರು ಕೇಳಿ ಯಾರೋ ವಯೋವೃದ್ಧರೆಂದೆಣಿಸದಿರಿ. ಕೇವಲ ೧೪ರ ವಯಸ್ಸು. ವಿಳಾಸ ಕಷ್ಟವಿಲ್ಲ. ಮಾಗಡಿ ರಸ್ತೆಯ ಭಿಕ್ಷುಕರ ಕಾಲೊನಿ ಹಿಂಭಾಗದ ಕೊಳೆಗೇರಿ. ವೃತ್ತಿ ಏನೆಂದು ಕೇಳುತ್ತೀರಾ ? ವಿದ್ಯಾರ್ಥಿಯಾಗಿರಬೇಕೆಂದು ನಿಮ್ಮ ಅನಿಸಿಕೆ ಸಹಜ. ಆದರೆ ಚೆಣ್ಣೆರಾವ್‌ಗೆ ಓದಿನ ಸಹವಾಸ ೭ನೆಯ ಇಯತ್ತೆಗೆ ಇತಿಶ್ರೀ. ಈಗ ಮೂರು ವರ್ಷದಿಂದ ಒಂದು ಖಾಸಗಿ ವರ್ಕ್‌ಶಾಪ್‌ನಿಂದ ಮತ್ತೊಂದಕ್ಕೆ ಅಲೆಯುತ್ತಿದ್ದಾನೆ. ಮುಂಜಾನೆಯ ಎಂಟರಿಂದ ಸಂಜೆಯ ಆರರ ತನಕದ ದುಡಿತ. ಈಗಿನ ಯಜಮಾನನಿಂದ ರೂ. ೨೦೦/-ರ ಮಾಸಿಕ ವೇತನದ ಭರವಸೆ ! ಆದರೆ ಅದು ಖಚಿತವಿಲ್ಲ. ಯಜಮಾನನ ಮರ್ಜಿ ಚೆನ್ನಾಗಿದ್ದಾಗ ಎಂದೋ ಒಂದು ದಿನ ಸಂಬಳ ಬಟವಾಡೆ. ಕೊಳೆಗೇರಿಯ ಗುಡಿಸಲಿಗೂ ದುಡಿಮೆಯ ಸ್ಥಳಕ್ಕೂ ನಾಲ್ಕು ಕಿ.ಮೀ. ಅಂತರ. ತಿಂಗಳ ದುಡಿಮೆಯ ಸಂಬಳದ ಹಣವನ್ನು ಶರಾಯಿ ಜೇಬಿನಿಂದ ಒಮ್ಮೆ ನಗರ ಸಾರಿಗೆ ಬಸ್‌ನಲ್ಲಿ ಕಿಡಿಗೇಡಿಗಳು ಲಪಟಾಯಿಸಿಬಿಟ್ಟರು. ಅಂದಿನಿಂದ ನಗರ ಬಸ್ ಕಂಡರೆ ಭಯ. ಅಷ್ಟೇ ಅಲ್ಲ. ಮೂರು ರೂ. ಉಳಿಸಬಹುದೆಂಬ ಆಲೋಚನೆಯಿಂದ ಚೆಣ್ಣೇರಾವ್ ಕಾಲ್ನಡಿಗೆಗೆ ಶರಣು ಹೋಗುತ್ತಾನೆ. ಹತ್ತರ ಹರೆಯದ ತಮ್ಮನದು ದರ್ಶಿನಿ ಹೋಟೆಲ್ ದುಡಿಮೆ. ತಂದೆಗೆ ನೂಲು ಹುರಿಯ ಗಿರಣಿಯಲ್ಲಿ ನೌಕರಿ. ಸಂಜೆ ಲಗುಬಗೆಯಿಂದ ಮನೆಗೆ ಬಾಲಕ ಮರಳುತ್ತಾನೆ. ಅಮ್ಮನೊಂದಿಗೆ ಊದುಕಡ್ಡಿ ಉಜ್ಜುತ್ತಾನೆ.

ಹೊಸ ಬದುಕಿನ ಹೊಂಗನಸು ಹೊತ್ತು ಹಾಲೇಶಿ ವಿದ್ಯುನ್ಮಾನ ನಗರಕ್ಕೆ ಶರಣು ಬಂದ. ಜತೆಯಲ್ಲಿ ನವವಿವಾಹಿತ ಹೆಂಡತಿ. ಹಾಲೇಶಿಯ ಪ್ಲಾಸ್ಟಿಕ್ ಹಾಳೆಯ ಕಡತದಲ್ಲಿ ಪದವಿ ಪ್ರಮಾಣ ಪತ್ರವಿದೆ. ರಾಜ್ಯದ ಪ್ರಖ್ಯಾತ ಧರ್ಮ ಕೇಂದ್ರದಲ್ಲಿ ಪಡೆದ ಅಪಾರ ಅನುಭವವಿದೆ ಆತನಲ್ಲಿ. ಕೊನೆಗೊಮ್ಮೆ ಆ ಕೇಂದ್ರಕ್ಕೆ ಶಾಶ್ವತ ವಿದಾಯ ಹೇಳಿ ಹೊರಬರುವ ನೋವಿನ ನೆನಪುಗಳೂ ಮನದಾಳದಲ್ಲಿವೆ. ೨೫೦ ಕಿ.ಮೀ. ದೂರದ ಹಳ್ಳಿಯ ಪುಟ್ಟ ಜಮೀನು, ಜಾನುವಾರು, ಮೇಕೆಯ ವರಮಾನದಿಂದ ಹೊಟ್ಟೆ ಹೊರೆಯುವ ಅಮ್ಮ, ತಮ್ಮ, ಗಂಡ ಬಿಟ್ಟ ತಂಗಿಯ ಸಂಸಾರ ಭಾರದ ಹೊಣೆಯ ಅರಿವು ಹಾಲೇಶಿಗಿದೆ. ಕಂಡ ಕಂಡವರನ್ನು ಕಾಡಿದ, ಬೇಡಿದ, ಅಲೆದಾಡಿದ. ಹಾಲೇಶಿಯ ಹೊಟ್ಟೆ ಹೊರೆಯುವ ನೌಕರಿ ಹಗಲುಗನಸಾಯಿತು. ಅಮೆರಿಕದ 'ರಿಸೆಷನ್' (ಇಳಿತ) ಕಾವು ತಟ್ಟಿದ ಸಿದ್ಧ ಉಡುಪು ಕೇಂದ್ರಗಳ್ಯಾವುವೂ ಹಾಲೇಶಿಯ ಮಡದಿಯ ಹೊಲಿಗೆ ಅನುಭವಕ್ಕೆ ಕದ ತೆರೆಯಲಿಲ್ಲ. ಗರಿಗರಿ ಶರಟು, ಬೂಟು, ಪ್ಯಾಂಟ್ ಕಳಚಿದ ಹಾಲೇಶಿಗೆ ನೌಕರಿ ದೊರಕಿತು. ಲುಂಗಿ, ಹಳೆ ಶರಟು ಧರಿಸಿದ. ಬರಿಗಾಲಿನಲ್ಲಿ ಸಿದ್ಧನಾದ. ಕಟ್ಟಡ ಕೆಲಸದಲ್ಲಿ ಸಿಮೆಂಟು ಕಲಸಿದ. ವಾರದ ಬಟವಾಡೆ ಕೈಗೆ ಬರಹತ್ತಿದೆ. ಮಿತ್ರನ ತಾತ್ಕಾಲಿಕ ಆಸರೆ ಗೂಡಿನಲ್ಲಿ ನೆರಳಿದೆ. ವಾರಾಂತ್ಯದ ಸಂಪಾದನೆ ಹಣ ಸದ್ಯದ ಖರ್ಚಿಗೆ ಸಾಕಾಗಿದೆ. ಕೆಲಸಕ್ಕೆ ಬಾಗಿಲು ಬಾಗಿಲು ಅಲೆಸುವ ಪದವಿ ಪತ್ರದ ಸಹವಾಸದಿಂದ ಹಾಲೇಶಿ ಇದೀಗ ವಿಮುಕ್ತ. ಅಂಥ ವೃಥಾ ಅಲೆತಕ್ಕೆ ಆತನ ಬಳಿ ಸಮಯವಿಲ್ಲ.

ಮತ್ತೊಬ್ಬ ಶ್ರೀಸಾಮಾನ್ಯ ವೆಂಕಟೇಶಪ್ಪ. ವಯಸ್ಸು ಸುಮಾರು ಐವತ್ತು. ಅರಣ್ಯ ಇಲಾಖೆಯ 'ವಾಚರ್' ಉದ್ಯೋಗ. ನರ್ಸರಿಗಳಲ್ಲಿ ಹೊಸ ಸಸಿ ಬೆಳೆಯುವ ಕಾಯಕ. ಹಸಿರಿನ ಸಿರಿ ಉಕ್ಕಿಸುವ ಕೈಂಕರ್ಯದಲ್ಲಿ ಅಪರಿಮಿತ ಉತ್ಸಾಹ. ಎಲ್ಲ ಸಹೋದ್ಯೋಗಿಗಳು ಕಛೇರಿ ವೇಳೆ ಮುಗಿಯುವ ಮುನ್ನವೇ ಸೈಕಲ್ ಏರಿ ಕಣ್ಮರೆಯಾಗುತ್ತಾರೆ. ಆದರೆ ದುಡಿಮೆಯ ಗೂಡಿನಿಂದ ವೆಂಕಟೇಶಪ್ಪನ ಸೈಕಲ್ ಮಾತ್ರ ಒಲುಮೆಯ ಏರೋವಳ್ಳಿಯ ಗುಡಿಸಲಿಗೆ ತಕ್ಷಣ ಧಾವಿಸುವುದಿಲ್ಲ. ಹಾದಿ ಬದಿಯ ಹಳೆಯ ಮರ ಕಂಡರೆ ಆತನಿಗೆ ಬಲು ಅಕ್ಕರೆ. ಭಾರಿ ಗಾತ್ರದ ರಸ್ತೆ ಬದಿ ಮರಗಳ ಬುಡದಲ್ಲಿ ವೆಂಕಟೇಶಪ್ಪನಿಗಿದೆ ಕೆಲಸ. ಆಲದ ಮರದ ಬುಡದಲ್ಲಿ

ವೆಂಕಟೇಶಪ್ಪನ ಹೆಂಡತಿ ಹೆತ್ತದ್ದು ೨ ಗಂಡು ಮಕ್ಕಳನ್ನು ಮಾತ್ರ. ಆದರೆ ಅವರಿಗೆ ೩ ಜನ ಗಂಡುಮಕ್ಕಳಿದ್ದಾರೆ. ಹೇಗೆಂದು ಹುಬ್ಬೇರಿಸದಿರಿ. ಮೂರನೇ ಮಗ ಈಗ ಹಾಗೂ ಹೀಗೂ ಏಳನೆಯ ಮೆಟ್ಟಿಲಲ್ಲಿದ್ದಾನೆ. 'ವಿದ್ಯೆ ಎಂಬ ಎರಡಕ್ಷರಕ್ಕೆ ಈ ಮುಟ್ಠಾಳ ಮೂಗು ಮುರಿಯುತ್ತಾನೆ' ಎಂಬ ದೂರು ವೆಂಕಟೇಶಪ್ಪನದು. ಆತನ ಮೂರನೆಯ ಮಗ ಸ್ವಂತದ್ದಲ್ಲ. 'ಇಪ್ಪೆ ಬೀಜ ಸಂಗ್ರಹಿಸಲು ಒಮ್ಮೆ ಕಾಡಿಗೆ ಹೋಗಿದ್ದೆ ಸ್ವಾಮಿ. ಈಗ ಹದಿನಾರು ವರ್ಷದ ಹಿಂದಿನ ಮಾತು. ಕಾಡಿನಲ್ಲಿ ಒಂಟಿ ಗಂಡು ಮಗು ಅಳುತ್ತಾ ತಿರುಗುತ್ತಿತ್ತು. ಸಂಜೆಯಾಯಿತು. ಕತ್ತಲಾಯಿತು. ಯಾರೂ



ಉರುಳಾಡುವ ಕೆಂಪನೆ ಬಣ್ಣದ ಗೋಲಿ ಗಾತ್ರದ ಹಣ್ಣುಗಳನ್ನು ಆಯ್ದುಕೊಳ್ಳುತ್ತಾನೆ. ಕೆಲಸದ ಸ್ಥಳಕ್ಕೊಯ್ಯುತ್ತಾನೆ. ಒಣಗಿಸಿ ಪುಡಿಗೈಯುತ್ತಾನೆ. ಪುಡಿ ಉದುರಿಸಿದ ತೊಟ್ಟಿಗಳಲ್ಲಿ ಹೊಸ ಸಸಿ ಕುಡಿಯೊಡೆಯುತ್ತದೆ. ಆದರೆ ಸೋಮೇಶ್ವರ ಕವಿ ಹೇಳುವಂತೆ ಮಾತ್ರ ವೆಂಕಟೇಶಪ್ಪನ ಬಾಳಿನಲ್ಲಿ ಬದಲಾವಣೆ ಆಗುತ್ತಲೇ ಇಲ್ಲ. ಆಲದ ಹೊಸ ಸಸಿ ಪೆರ್ಮರವಾಗುವುದೇನೋ ನಿಜ. "ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ ಹರಹರಾ ಶ್ರೀ ಚೆನ್ನಸೋಮೇಶ್ವರಾ ?"

ವೆಂಕಟೇಶಪ್ಪನ ಜಮೀನು ಬಿ.ಇ.ಎಲ್. ನೌಕರರ ಸಂಘದ ಹೊಸ ಬಡಾವಣೆಗೆ ಗ್ರಾಸವಾಯಿತು. ಇಬ್ಬರು ಪುತ್ರರು ಎಸ್ಸೆಸ್ಸೆಲ್ಸಿ ಅಂಕಪಟ್ಟಿಯೊಂದಿಗೆ ಹೊಸ ಹೊಸ ಅರ್ಜಿ ಹಿಡಿದು ಧಾವಿಸಿ ನಿರಾಸೆಗೊಳ್ಳುತ್ತಿದ್ದಾರೆ. ಆತನ ಉದ್ಯೋಗ, ತಿಂಗಳ ಸಂಬಳದ ಭರವಸೆ ಇನ್ನು ಕೆಲವು ವರ್ಷ ಮಾತ್ರ. ಮುಂದೇನೆಂಬ ಆತಂಕ ಎಲ್ಲರಿಗಿದೆ.

ಬರಲೇ ಇಲ್ಲ. ಮಧ್ಯಾಹ್ನದ ಬುತ್ತಿ ಹಂಚಿಕೊಂಡು ತಿಂದೆವು. ಸಾವಂದಪ್ಪನ ಇಚ್ಛೆ ಇದೇ ಆಗಿತ್ತೇನೋ. ಇವತ್ತಿನವರೆಗೆ ನಾವು ನಮ್ಮ ಮುದ್ದೆ, ಅನ್ನ, ಸಾರು ಹಂಚಿಕೊಳ್ಳುತ್ತಿದ್ದೇವೆ. ಮುಂದೆ ಹೇಗೋ ಏನೋ ದೇವರಿಚ್ಛೆ ಸ್ವಾಮಿ' ಎಂದು ಕವಳ ತುಂಬಿದ ಕೆಂಪು ತುಟಿಯಿಂದ ವೆಂಕಟೇಶಪ್ಪನ ಬದುಕಿನ ಕತೆಯ ಮೂರನೆಯ ಅಧ್ಯಾಯ ತಿಳಿಯಿತು. "ಸ್ವಾಮೀ, ಬೆಳಗಿನಿಂದ ಸಂಜೆವರೆಗೆ ಒಂದೇ ಸಮನೆ ದುಡೀತೀನಿ. ನನ್ನ ಮನತೃಪ್ತಿಗಾಗಿ ದುಡೀತೀನಿ. ಹದಿನಾಲ್ಕು ಗಂಟೆ ದುಡಿಯುತ್ತೇನೆ. ನನ್ನ ಸಂಬಳದಷ್ಟೇ ಬೇರೆಯವರಿಗೂ ಇದೆ. ಒಂದೇ ವ್ಯತ್ಯಾಸ. ಅವರು ದುಡಿಯರು, ನಾನು ದುಡೀತೀನಿ."

'ನಾಸತ್ಯ', (ಡಾ|| ಸತ್ಯನಾರಾಯಣ ಭಟ್)
೨೯, ೫ನೇ ರಸ್ತೆ ಕೊನೆ, ವೆಂಕಟಪ್ಪ ಬಡಾವಣೆ
ಸಂಜಯನಗರ, ಬೆಂಗಳೂರು-೫೬೦೦೯೪

"ಮಾಹಿತಿ-ಹಕ್ಕು ಕಾಯ್ದೆ - 2000" – ಇದು ಇತ್ತೀಚೆಗೆ ಕರ್ನಾಟಕ ಸರಕಾರವು ಜಾರಿಗೆ ತಂದಿರುವ ವಿಶೇಷ ಕಾಯ್ದೆ. ರಾಜ್ಯದ ಪ್ರಜೆ ತನಗೆ ಬೇಕಾಗುವ ಯಾವುದೇ ಮಾಹಿತಿಯನ್ನು ಸಂಬಂಧಿಸಿದವರಿಂದ ಕಾನೂನುಬದ್ಧವಾಗಿ ಪಡೆಯುವ ಹಕ್ಕನ್ನು ಈ ಕಾಯ್ದೆ ನೀಡುತ್ತದೆ. ಇಂತಹ ಒಂದು ಕಾಯ್ದೆ ದೇಶಕ್ಕೆ ಸ್ವಾತಂತ್ರ್ಯ ಬಂದು 5 ದಶಕಗಳಾದ ನಂತರ ಜಾರಿಗೆ ಬರುತ್ತಿರುವುದು ನಮ್ಮ ನಾಗರಿಕತೆಯ ಪಥಚಲನದ ಸೂಚಕ ಎನ್ನೋಣವೇ ? ಹಾಗೆ ನೋಡಿದರೆ ಹಸಿವಿಗಾಗಿ ಸಾಯುತ್ತಿರುವ, ಬಡತನದ ಬೇಗೆಯಲ್ಲಿ ಸಾಯುತ್ತಿರುವ ನಮ್ಮ ಜನಕ್ಕೆ ಈ ಮಾಹಿತಿ ತೆಗೆದುಕೊಂಡು ಮಾಡುವುದಾದರೂ ಏನು ? ಅಷ್ಟಕ್ಕೂ ದೇಶದಲ್ಲಿ ಅನಕ್ಷರಸ್ಥರ ಸಂಖ್ಯೆ ಅಸಂಖ್ಯವಾಗಿರುವಾಗ ಮಾಹಿತಿ ಹಕ್ಕು ಕಾಯ್ದೆ ಅವರ ಪಾಲಿಗೆ ಇದ್ದೂ ಇಲ್ಲದಂತೆಯೇ ಹೌದು.

ರಾಜ್ಯದ ಮಾಹಿತಿ ತಂತ್ರಜ್ಞಾನದ ಮಂತ್ರಿ ಪ್ರೊ. ಬಿ. ಕೆ. ಚಂದ್ರಶೇಖರ್ ಹೇಳುತ್ತಾರೆ –"ರಾಜ್ಯದಲ್ಲಿ ಆರ್ಥಿಕ ಬಿಕ್ಕಟ್ಟಿನ ನಿವಾರಣೆಗೆ ಇದೊಂದು ಸೂಕ್ತ ಹಾಗೂ ನಿರಾಳ ಮಾರ್ಗ ಎಂಬುದು ಜಗತ್ತಿನ ಮುಂದುವರೆದ ಶ್ರೀಮಂತ ರಾಷ್ಟ್ರಗಳ ನಂಬಿಕೆ. ಆದಕ್ಕಾಗಿಯೇ ಮಾಹಿತಿ ಎಂಬ ಸರಕಿನ ಮಾರುಕಟ್ಟೆಯ ಮೇಲೆ ಏಕಸ್ವಾಮ್ಯ ಸಾಧಿಸಲು ಈ ದೇಶಗಳು ಶತಾಯಗತಾಯ ಪ್ರಯತ್ನ ನಡೆಸಿವೆ.

ಹೌದು ! ಇಂದು ಮಾಹಿತಿ ಎಂಬುದು ಅಮೂಲ್ಯವಾದ ಸರಕು. ತುಂಬ ಬೇಡಿಕೆಯಲ್ಲಿರುವ ವಸ್ತು. ಮಾಹಿತಿಯೊಂದು ಪ್ರಗತಿಯ ತಾಂತ್ರಿಕ ಅನುಕೂಲಕ್ಕೆ ಹೆದ್ದಾರಿ ಮಾಡಿಕೊಟ್ಟಾಗ ಅದು ಪೂರ್ಣ ಮಾಹಿತಿ ಇಲ್ಲವೆ ಮಾಹಿತಿ ತಂತ್ರಜ್ಞಾನವೆಂದು ಕರೆಯಲ್ಪಡುತ್ತದೆ. ಕಾರ್ಮಿಕರಿಗೆ ಕಾರ್ಖಾನೆಯ ಮಾಹಿತಿ, ರೈತರಿಗೆ ಆಧುನಿಕ ಕೃಷಿಯೊಂದಿಗೆ ಹೊಲಗದ್ದೆಗಳ ಮಾಹಿತಿ, ಮೀನುಗಾರನಿಗೆ ಸಾಗರದ ಹಾಗೂ ಹವಾಮಾನದ ಮಾಹಿತಿ ದೊರೆಯಬೇಕು. ಮಾಹಿತಿ ಬೇಡಿ ಬರುವ ಗ್ರಾಹಕನಿಗೆ ಅವನು ಕೇಳುವ ವಿಷಯಕ್ಕೆ ಸಂಬಂಧಿಸಿದಂತೆ 'ಫಾರಂ-ಎ' ಮೂಲಕ ಅರ್ಜಿ ಸಲ್ಲಿಸಬೇಕು. ಬೇಕಾದ ದಾಖಲೆಗಳನ್ನು ಪಡೆಯಲು ನಿಗದಿತ ಹಣವನ್ನು ಮುಂಚಿತವಾಗಿಯೇ ಪಾವತಿಸಬೇಕು. ಮಾಹಿತಿ ಕೊಡುವ ಅಧಿಕಾರಿಗೆ ಸದರಿ ಮಾಹಿತಿ ಕೊಡಬೇಕೋ ಬೇಡವೋ ಎಂದು ನಿರ್ಧಾರ ತೆಗೆದುಕೊಳ್ಳಲು 15 ದಿವಸ ಸಮಯವಿರುತ್ತದೆ. ಮಾಹಿತಿ ನೀಡುವುದನ್ನು ತಿರಸ್ಕರಿಸಿದರೆ ಅದಕ್ಕೆ ಆ ಅರ್ಜಿಯ ಹಿಂಬದಿಗೆ ಕಾರಣಗಳನ್ನು ವಿವರವಾಗಿ ಬರೆಯಬೇಕು.

ತನಗೆ ಮಾಹಿತಿ ನೀಡುವುದನ್ನು ನಿರಾಕರಿಸಿದ ನಂತರ ಅರ್ಜಿದಾರನು 30 ದಿನಗಳ ನಂತರ ಮೇಲಧಿಕಾರಿಗಳಿಗೆ ಮೇಲ್ಮನವಿಯನ್ನು ಸಲ್ಲಿಸುವ ಅವಕಾಶವಿದೆ. ಒಂದು ವೇಳೆ ಅಧಿಕಾರಿಯು ವಿನಾಕಾರಣವಾಗಿ ಅರ್ಜಿ ತಿರಸ್ಕರಿಸಿದರೆ ಈ ಕಾಯ್ದೆಯ ಪ್ರಕಾರ ಅವನಿಗೆ 2000 ರೂ.ಗಳ ದಂಡ ಇಲ್ಲವೆ ಇಲಾಖಾ ಕ್ರಮ ಜರುಗಿಸುವ ನಿಯಮವಿದೆ.

ಮಾಹಿತಿ ಹಕ್ಕು ಕಾಯ್ದೆ-2000ದಲ್ಲಿ ಎಂತಹ ವಿಷಯಗಳನ್ನು ಕುರಿತು ಮಾಹಿತಿ ಕೇಳಬಾರದು

# ಮಾಹಿತಿ - ಹಕ್ಕು ಕಾಯ್ದೆ - 2000: ಎಷ್ಟು ಸಶಕ್ತ?

ಆಡಳಿತಾತ್ಮಕ ಪಾರದರ್ಶಕತೆಯನ್ನು ತರುವ ಏಕೈಕ ಉದ್ದೇಶದಿಂದ ಈ ಕಾಯ್ದೆಯನ್ನು ಜಾರಿಗೆ ತರಲಾಗಿದೆ." ಈ ಕಾಯ್ದೆಯಿಂದಾಗಿ ರಾಜ್ಯದ ಪ್ರಜೆಗಳು ಸರಕಾರ ಮತ್ತು ವಿವಿಧ ಸರ್ಕಾರಿ ಕ್ಷೇತ್ರಗಳ ಕಾರ್ಯವೈಖರಿ ಕುರಿತು ಸಾಕಷ್ಟು ಮಾಹಿತಿ ಪಡೆಯಬಹುದಾಗಿದೆ. ಮಾಹಿತಿ ತಂತ್ರಜ್ಞಾನ ಕಾಯ್ದೆ ನಮ್ಮ ಸಂವಿಧಾನದ ಪರಿಚ್ಛೇದ 19(ಎ)ಯ ಮೂಲ ಸತ್ವಾಂಶವನ್ನು ಹೊಂದಿದೆ ಎನ್ನಲಾಗಿದೆ. ಈ ಪರಿಚ್ಛೇದವು ಪ್ರಜೆಗಳಿಂದ ಚುನಾಯಿತ ಸರಕಾರದ ಯಾವುದೇ ಕ್ಷೇತ್ರದ ಪ್ರಗತಿಯನ್ನು, ಕಾರ್ಯವೈಖರಿಯನ್ನು ತಿಳಿದುಕೊಳ್ಳುವ ಹಕ್ಕನ್ನು ಪ್ರಜೆಗಳಿಗೆ ನೀಡಿದೆ. ಆದರೆ ಸ್ವಾತಂತ್ರ್ಯ ಬಂದು ಅರ್ಧಶತಮಾನ ಕಳೆದ ಮೇಲೆ ನಮ್ಮ ಸರಕಾರಗಳು ಪ್ರಜೆಗಳಿಗೆ ಮಾಹಿತಿ ಪಡೆಯುವ ಹಕ್ಕನ್ನು ನೀಡಲು ಮುಂದಾಗಿರುವುದು ವಿಪರ್ಯಾಸವೇ ಹೌದು. ಆದರೂ ಈಗಲಾದರೂ ಕಾಯ್ದೆಯಾಗಿ ಜಾರಿಗೆ ಬಂದಿರುವ ಮಾಹಿತಿ ಹಕ್ಕು ಕಾಯ್ದೆಯ ಪ್ರಯೋಜನವನ್ನು ಪ್ರಜೆಗಳು ಪಡೆಯಬೇಕು. ಇದಕ್ಕಾಗಿ ಈ ಕಾಯ್ದೆಯ ಸ್ವರೂಪವನ್ನು, ಇದರಿಂದ ಜನರಿಗಾಗುವ ಅನುಕೂಲಗಳನ್ನು ಜನಸಾಮಾನ್ಯರಿಗೆ ತಿಳಿಸಿಕೊಡುವ ಕಾರ್ಯವನ್ನು ಮಾಧ್ಯಮಗಳು ಹಾಗೂ ಪ್ರಜ್ಞಾವಂತ ನಾಗರಿಕರು ಮಾಡಿಕೊಡುವುದು ಅವಶ್ಯಕ ಕಾರ್ಯವಾಗಿದೆ.

**ಸರಕಾದ ಮಾಹಿತಿ**

ಮಾಹಿತಿ ಈಗ ಒಂದು ಲಾಭದಾಯಕ ಸರಕು. ಭಾರೀ ಬಂಡವಾಳ ಬಳೆದುಕೊಳ್ಳುವ ಮಾರುಕಟ್ಟೆ ಇದು ಅಮೆರಿಕಾ ನೇತೃತ್ವದ ಸೈಬರ್‌ಲೋಹದ ಕೊಡುಗೆ. ಜಗತ್ತಿನಲ್ಲಿಂದು ಚಲಾವಣೆಯಲ್ಲಿರುವ ಯಾವುದೇ ಸರಕಿಗಿಂತಲೂ ಹೆಚ್ಚಿನ ಬೆಲೆ ಮಾಹಿತಿಗಿದೆ. ದುಡ್ಡು ಕೊಟ್ಟು ಮಾಹಿತಿ ಪಡೆಯುವ ಕಾಲವಿದು. ಬುದ್ಧಿಮತ್ತೆಯನ್ನು ಸರಕನ್ನಾಗಿಸಿ ಶ್ರೀಮಂತರಾಗುವ ಯುಗವಿದು. ತಮ್ಮ ಪರಿಪೂರ್ಣ ಮಾಹಿತಿ ದೊರೆಯಬೇಕು. ಪಕ್ಷಿನೋಟ ಕೊಡುವುದಷ್ಟೇ ಮಾಹಿತಿಯಾಗಲಾರದು. ಕೃಷಿಕ ನೊಬ್ಬನು ಮಾಹಿತಿ ಬೇಡಿ ಬಂದಾಗ ಅಲ್ಲಿ ಅವನ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರೆಯಬೇಕು. ಆ ಸಮಯದಲ್ಲಿ ಅವನು ತನ್ನ ಹೊಲದ ಮಣ್ಣಿಗೆ ಅನುಸರಿಸಿ ಬೆಳೆಯುವ ಬೆಳೆ, ಆ ಬೆಳೆಯ ಸಂರಕ್ಷಣೆಯ ಬಗೆ, ಅದಕ್ಕೆ ಮಾರುಕಟ್ಟೆಯಲ್ಲಿರುವ ಬೇಡಿಕೆ ಹಾಗೂ ಬೆಲೆ,

ಶ್ರೀಮತಿ ಅನಸೂಯಾ

ತನಗಾಗುವ ಲಾಭ...... ಈ ಎಲ್ಲ ಮಾಹಿತಿ ಅವನಿಗೆ ದೊರೆತಾಗ ಮಾತ್ರ ಅದೊಂದು ಪೂರ್ಣ ಮಾಹಿತಿ ಯಾಗುತ್ತದೆ. ಗ್ರಾಹಕರು ಮಾಹಿತಿ ಬೇಡಿ ಬಂದ ಆಯಾ ಕ್ಷೇತ್ರಗಳ ಪ್ರಸ್ತುತ ಪರಿಪೂರ್ಣ ವಾಸ್ತವ ಪರಿಸ್ಥಿತಿ, ಸಾಧಕ-ಬಾಧಕಗಳು, ಬಾಧಕಗಳನ್ನು ಸಾಧಕಗಳನ್ನಾಗಿ ಸಲು ಎದುರಾಗುವ ಸಮಸ್ಯೆಗಳು, ಆ ಸಮಸ್ಯೆಗಳ ಪರಿಹಾರಗಳು.... ಇತ್ಯಾದಿ ಪೂರ್ಣ ಮಾಹಿತಿಯನ್ನೇ ಮಾಹಿತಿ ತಂತ್ರಜ್ಞಾನ ಎನ್ನಲಾಗುತ್ತದೆ.

**ಮಾಹಿತಿ – ಹಕ್ಕು ಕಾಯ್ದೆ – 2000**

ಈ ಕಾಯ್ದೆಯ ಪ್ರಕಾರ ಯಾರೇ ಆಗಲಿ ಕರ್ನಾಟಕ ಸಾರ್ವಜನಿಕ ಸೇವಾ ಆಯೋಗವು ಸೇರಿದಂತೆ ಸರಕಾರಿ ಕಾರ್ಯಾಲಯ, ಮಂಡಳಿ, ನಿಗಮ, ಸಂಸ್ಥೆ, ಸಹಕಾರಿ ಸಂಘ ಮುಂತಾದವುಗಳಿಂದ ತಮಗೆ ಅಗತ್ಯವಾದ ಮಾಹಿತಿ ಪಡೆಯಲು ಅರ್ಜಿ ಸಲ್ಲಿಸಬಹುದಾಗಿದೆ. ಎಂಬುದರ ಬಗೆಗೂ ಪ್ರಸ್ತಾಪವಿದೆ. ಕೇಂದ್ರ ಸರಕಾರಿ ಕಛೇರಿಗಳು ಸೇರಿದಂತೆ, ರಕ್ಷಣಾ ಇಲಾಖೆ, ವೈಜ್ಞಾನಿಕ ಕಾರ್ಯತಂತ್ರ, ವಿದೇಶೀ ನೀತಿ ಮುಂತಾದ ಸಂಗತಿಗಳನ್ನು ಕುರಿತು ಮಾಹಿತಿಗಾಗಿ ಅರ್ಜಿ ಸಲ್ಲಿಸುವುದನ್ನು ನಿಷೇಧಿಸಲಾಗಿದೆ.

**ಎಷ್ಟು ಸಶಕ್ತ?**

ಕರ್ನಾಟಕದ "ಮಾಹಿತಿ - ಹಕ್ಕು ಕಾಯ್ದೆ - 2000"ನ್ನು ಪೂರ್ಣವಾಗಿ ಅಧ್ಯಯನ ಮಾಡಿದಾಗ ಇದರ ಅಸ್ತಿತ್ವವೇ ಅರ್ಥಹೀನವೆನಿಸುತ್ತದೆ. ಕಾಯ್ದೆಯಲ್ಲಿ ಮೇಲ್ನೋಟಕ್ಕೆ ಅನೇಕ ಭರವಸೆಗಳು ಕಂಡರೂ ಸೂಕ್ಷ್ಮವಾಗಿ ಪರಿಶೀಲನೆಗೆ ತೊಡಗಿದಾಗ ಇದು ನೀಡುವ ಮಾಹಿತಿ ಯಾರಿಗೂ ಬೇಡವೆನಿಸುತ್ತದೆ. ಯಾಕೆಂದರೆ ಕೇಂದ್ರ ಕಛೇರಿಗಳು ಹಾಗೂ ಕೆಲವು ಪ್ರಮುಖ ಇಲಾಖೆಗಳಿಗೆ ಸಂಬಂಧಿಸಿದಂತೆ ಮಾಹಿತಿಗಾಗಿ ಅರ್ಜಿ ಸಲ್ಲಿಸುವಂತಿಲ್ಲ. ಅಂಚೆ, ತಂತಿ, ರೈಲ್ವೆ, ರಕ್ಷಣೆ, ಆರ್ಥಿಕತೆ ಮತ್ತು ಅಂತರರಾಷ್ಟ್ರೀಯ ನೀತಿ ಕುರಿತು ಮಾಹಿತಿ ಪಡೆಯಲು ಅವಕಾಶವಿಲ್ಲವೆಂದ ಮೇಲೆ ಇನ್ನು ಉಳಿದಿದ್ದಾದರೂ ಏನು ?

ಈ ಕಾಯ್ದೆಯ ಪ್ರಕಾರ ಈಗ ತೆಹಲ್ಕಾ ಡಾಟ್ ಕಾಮ್ ಹೊರಹಾಕಿರುವ ರಕ್ಷಣಾ ಇಲಾಖೆಯ ಅವ್ಯವಹಾರದ ಬಗೆಗೆ ಪ್ರಶ್ನಿಸುವಂತಿಲ್ಲ. ಇನ್ನು ವಿದೇಶಾಂಗ ನೀತಿಯ ಬಗೆಗೆ ಕೇಳುವಂತಿಲ್ಲ. ಭಾರತವು ವಿಶ್ವ ವಾಣಿಜ್ಯ ಸಂಸ್ಥೆಯೊಂದಿಗೆ ಮಾಡಿಕೊಂಡ ಒಪ್ಪಂದ, ಅದರಿಂದ ರೈತರ ಮೇಲಾಗುವ ಪರಿಣಾಮ.... ಇಂತಹ ಇನ್ನಾವುದೇ ವಿದೇಶಾಂಗ ನೀತಿಗೆ ಸಂಬಂಧಿಸಿದಂತೆ ಮಾಹಿತಿ ಕೇಳುವ ಹಾಗಿಲ್ಲ. ಹೀಗೆ ನೋಡಿದಾಗ ಈ ಕಾಯ್ದೆಯು ಮಾಹಿತಿ ನೀಡುವುದಕ್ಕಿಂತ ಮಾಹಿತಿಯನ್ನು ಮುಚ್ಚಿಡುವುದಕ್ಕೇ ಹೆಚ್ಚು ಗಮನ ಹರಿಸಿದಂತೆ ಕಾಣುತ್ತದೆ.

ಮಾಹಿತಿ ಕೊಡುವ ಬಿಡುವ ಅವಕಾಶವನ್ನು

ಅಧಿಕಾರಿಗೆ ನೀಡಿದ್ದು ಈ ಕಾಯ್ದೆಯ ಸಿಂಧುತ್ವವನ್ನೇ ಜಾಲಾಡಿದಂತಾಗಿದೆ. ಅರ್ಜಿಯನ್ನು ತಿರಸ್ಕರಿಸಲು ಅಧಿಕಾರಿಗಳಿಗೆ ನೂರೆಂಟು ಕಾರಣಗಳಿರುತ್ತವೆ. ಅರ್ಥವಿಲ್ಲದ ಕಾರಣಗಳಿಗೆ ಅರ್ಥ ತುಂಬಿ ಕಾರಣಗಳನ್ನಾಗಿಸುವ ಅಧಿಕಾರಶಾಹಿ ನಮ್ಮಲ್ಲಿ ಕಡಿಮೆಯೇನೂ ಇಲ್ಲ. ಕೆಲವು ದರ್ಪದ ಅಧಿಕಾರಿಗಳು ಮಾಹಿತಿ ಬೇಡಿ ಬಂದ ಅರ್ಜಿಗಳನ್ನು ಕಾರಣ ನೀಡದೇ ತಿರಸ್ಕರಿಸಲೂಬಹುದು. ಇಂತಹವರಿಗೆ ಈ ಕಾಯ್ದೆ ನೀಡುವ ದಂಡ ಕೇವಲ 2000 ರೂ.! ಇದು ಕೂಡ ಅರ್ಜಿದಾರ ಮೇಲ್ಮನವಿ ಸಲ್ಲಿಸಿದ ಮೇಲೆ ಅಲ್ಲಿ ಅದು ಸಾಬೀತಾದ ಮೇಲೆ !! ಮಾಹಿತಿ ದೊರೆತರೆ ಯಾರಿಗೆ ತೊಂದರೆಯೋ ಆತನೇ ದಂಡದ ಹಣ ಕೊಟ್ಟು ಅಧಿಕಾರಿಯ ಮೂಲಕ ಅರ್ಜಿ ಕಿತ್ತೆಸೆಯಬಲ್ಲ ಭೂಪರಿರುವಾಗ ಅಧಿಕಾರಿಗೇನೂ ನಷ್ಟವಿಲ್ಲ. ಇಂತಿರುವಾಗ ಮಾಹಿತಿ ಬೇಡಿ ಬಂದ ಅರ್ಜಿಗಳನ್ನು ಅಧಿಕಾರಿಗಳು ಯಾವ ರೀತಿಯಾಗಿ ನೋಡುತ್ತಾರೆ ಎಂಬುದನ್ನು ಯಾರಾದರೂ ಅರ್ಥೈಸಿಕೊಳ್ಳಬಹುದು.

ಇನ್ನು ಅರ್ಜಿದಾರನ ತಾಪತ್ರಯ ಕೇಳಲೇಬಾರದು. ಅರ್ಜಿ ಹಿಡಿದುಕೊಂಡು ಮಾಹಿತಿಗಾಗಿ ಓಡಾಡಲಿಕ್ಕೇ 45 ದಿನಗಳು ಕಳೆದುಹೋಗುತ್ತವೆ. ಅದರಲ್ಲೂ ಮುಂಗಡವಾಗಿ ಹಣ ಸಂದಾಯ ಮಾಡಬೇಕು. ಅಧಿಕಾರಿ ಮಾಹಿತಿ ನೀಡದಿದ್ದರೆ, ತಿರಸ್ಕರಿಸಿದರೆ ಮೇಲ್ಮನವಿ ಸಲ್ಲಿಸಬೇಕು.

ಈ ಕಾಯ್ದೆಯು ಅನಕ್ಷರಸ್ಥರಿಗೆ ಹಾಗೂ ಬಡ ಕೂಲಿ ಕಾರ್ಮಿಕರಿಗೆ ಯಾವುದೇ ರೀತಿಯಿಂದ ಸಹಕಾರ ನೀಡದು. ಬಹುಸಂಖ್ಯಾತ ಅನಕ್ಷರಸ್ಥ ಹಾಗೂ ಕಾನೂನಿನ ಅನುಭವ ಕಡಿಮೆ ಇರುವ ಇವರಾರೂ ಇದರ ಸಹಾಯದಡಿ ಮಾಹಿತಿ ಪಡೆಯಲು ಮುಂದಾಗಲಾರರು. ಇದಕ್ಕಾಗಿ ಅರ್ಜಿ ಹಿಡಿದುಕೊಂಡು ಅಡ್ಡಾಡಲು ಇವರಿಗೆ ಸಮಯವಾದರೂ ಎಲ್ಲಿ?




**ಉಪಸಂಹಾರ**

ಕರ್ನಾಟಕ ಸರಕಾರದ 'ಮಾಹಿತಿ - ಹಕ್ಕು ಕಾಯ್ದೆ - 2000' ಕೇವಲ ನಾಮಮಾತ್ರ ಕಾಯ್ದೆಯೇ ಹೊರತು ಹೆಚ್ಚಿನದೇನೂ ಪ್ರಯೋಜನವಿಲ್ಲ. ಮಾಹಿತಿ ಪಡೆಯಲು ಬೇಕಾದ ಮುಕ್ತತೆ ಇಲ್ಲಿಲ್ಲ. ಹಾಗೆ ನೋಡಿದರೆ ಇದನ್ನು ''ಮಾಹಿತಿ ಮುಚ್ಚಿಡುವ ಕಾಯ್ದೆ'' ಎಂದರೂ ತಪ್ಪಾಗಲಿಕ್ಕಿಲ್ಲ. ಯಾಕೆಂದರೆ ಇಲ್ಲಿ ಅರ್ಜಿದಾರನ ಅನುಕೂಲಕ್ಕಿಂತ ಮಾಹಿತಿ ನೀಡುವ ಅಧಿಕಾರಿಯ ಅನುಕೂಲಗಳೇ ಹೆಚ್ಚಾಗಿವೆ. ಇಂತಹ ಅವಕಾಶ ಸಿಕ್ಕ ಮೇಲೆ ನಮ್ಮ ಅಧಿಕಾರಿಗಳ ವರ್ತನೆ ಹೇಗಿರುತ್ತದೆ ಎಂಬುದು ಸರ್ವವ್ಯಕ್ತ ವಿದಿತ. ಅದರಲ್ಲೂ ಬೇಕಾದ ಮುಖ್ಯ ಮಾಹಿತಿಗಳನ್ನು ಪಡೆಯುವುದೇ ನಿಷೇಧಿಸಲ್ಪಟ್ಟಿರುವಾಗ ಇನ್ನು ಇತರ ಮಾಹಿತಿಗಳನ್ನು ಪಡೆದು ಮಾಡುವುದಾದರೂ ಏನು ? ತಂತ್ರಜ್ಞಾನ ಮಂತ್ರಿಯವರ ಪ್ರಕಾರ ಈ ಕಾಯ್ದೆಯು ಆಡಳಿತಾತ್ಮಕ ಪಾರದರ್ಶಕತೆಗೆ ಹೆಚ್ಚು ಸಹಾಯಕ ಎನ್ನಲಾಗಿದೆ. ಆದರೆ ಆಡಳಿತಕ್ಕೆ ಸಂಬಂಧಿಸಿದ ಹೆಚ್ಚು ವಿಷಯಗಳನ್ನು ಗೌಪ್ಯವಾಗಿಡಲು ಹೆಚ್ಚ ಕಸರತ್ತು ಮಾಡಿರುವ ಈ ಕಾಯ್ದೆಯು ಆಡಳಿತದ ಪಾರದರ್ಶಕತೆಗೆ ಅದ್ದೆಗೆ ಪೂರಕವಾಗುತ್ತದೆ ಎಂಬುದೇ ಗೊತ್ತಾಗದು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಇದೊಂದು ಕಾಗದದ ಮೇಲೆ ಉಳಿಯುವ ಕಾಯ್ದೆಯೇ ಹೊರತು ಜನಸಾಮಾನ್ಯರ ಉಪಯುಕ್ತ ಕಾಯ್ದೆಯೇನೂ ಅಲ್ಲ.

**ಶ್ರೀಮತಿ ಅನಸೂಯಾ**
ಮೂಲಿಮನಿ ಕಾಂಪ್ಲೆಕ್ಸ್, ಹಳೆಯ ಎ. ಬಿ. ರಸ್ತೆ, ಚಿತವಾಡಿಗಿ,
ಹೊಸಪೇಟೆ ತಾ॥ ಬಳ್ಳಾರಿ ಜಿಲ್ಲೆ-೫೮೩ ೨೦೧

*೨೬ನೇ ಪುಟದಿಂದ*

ಒಂದೂವರೆ ಲಕ್ಷ ಚದರ ಕಿಲೊಮೀಟರ ಪ್ರದೇಶದಲ್ಲಿ ಪಸರಿಸಿರುವ ಸುಮಾರು ೬೦೦ ಮಿಲಿಯನ್ ಟನ್ನು ಗಡ್ಡೆಗಳಿವೆ. ಈ ಗಡ್ಡೆಗಳಲ್ಲಿ ಕನಿಷ್ಠಪಕ್ಷ ೬ ದಶಲಕ್ಷ ಟನ್ನುಗಳಷ್ಟು ತಾಮ್ರ, ನಿಕ್ಕಲ್ ಹಾಗೂ ಕೊಬಾಲ್ಟ್ ಲೋಹಗಳ ಭಂಡಾರವಿದೆ. ಈ ಪ್ರದೇಶ ದಕ್ಷಿಣ ಗೋಳಾರ್ಧದಲ್ಲಿ, ೧೦ ರಿಂದ ೧೫ ಡಿಗ್ರೀ ದಕ್ಷಿಣ ರೇಖಾಂಶಗಳ ಹಾಗೂ ೭೦ ರಿಂದ ೭೫ ಡಿಗ್ರೀ ಪೂರ್ವ ಅಕ್ಷಾಂಶಗಳ ಪರಿಮಿತಿಯೊಳಗೆ ಇದೆ. ಇಲ್ಲಿರುವ ಗಡ್ಡೆಗಳನ್ನು ನಾವು ಬೇಕೆಂದೆನಿಸಿದಾಗ ಮೇಲೆತ್ತಿ ಲೋಹಗಳನ್ನು ಸಂಸ್ಕರಿಸಬಹುದು. ಸುಮಾರು ಐವತ್ತು ಸಾಗರೀಯ ಭೂವಿಜ್ಞಾನಿ ಹಾಗೂ ತಂತ್ರಜ್ಞರ ತಂಡ ನಾಲ್ಕು ಸಂಶೋಧನಾ ಹಡಗುಗಳನ್ನುಪಯೋಗಿಸಿ ಸತತವಾಗಿ ಎಂಟು ವರ್ಷಗಳಷ್ಟು ಪರಿಶ್ರಮ ಪಟ್ಟಾಗ ಈ ಅಂತರರಾಷ್ಟ್ರೀಯ ಮನ್ನಣೆಯನ್ನು ದೊರಕಿಸಿಕೊಳ್ಳುವುದು ಸಾಧ್ಯವಾಯಿತು. ಈ ಪರಿಶ್ರಮದ ಸಿಂಹಪಾಲು ಗೋವಾದಲ್ಲಿರುವ ರಾಷ್ಟ್ರೀಯ ಸಾಗರವಿಜ್ಞಾನ ಸಂಸ್ಥೆಗೆ ಸೇರುತ್ತದೆ.

ಈ ಗಡ್ಡೆಗಳ ಗಣಿಯನ್ನು ಇಂದಿನ ದಿನಗಳಲ್ಲಿ ಲಾಭದಾಯಕ ಕೈಗಾರಿಕೆಯನ್ನಾಗಿ ಮಾಡಬೇಕಾದರೆ, ಪ್ರತಿ ವರ್ಷ ಸುಮಾರು ನಾಲ್ಕು ಮಿಲಿಯನ್ ಟನ್ನು ಗಡ್ಡೆಗಳನ್ನು ೫ ಕಿಲೋಮೀಟರ್ ಆಳದಿಂದ ಮೇಲೆತ್ತುವ ಶಕ್ತಿ ಇರುವ ಯಂತ್ರೀಕತೆಯ ಅವಶ್ಯಕತೆ ಇರುವುದು. ಕೇವಲ ಪ್ರಾಯೋಗಿಕ ಹಂತದಲ್ಲಿ ಯಶಸ್ವಿಯಾಗಿರುವ ಇಂತಹದೊಂದು ತಂತ್ರಜ್ಞಾನ ಇನ್ನೂ ವಿಕಸಿತವಾಗಬೇಕಾಗಿದೆ. ಈ ದಿಸೆಯಲ್ಲಿ ಸಾಕಷ್ಟು ಪ್ರಯತ್ನಗಳೂ ನಡೆದಿವೆ. ಈ ಗಡ್ಡೆಗಳು ಮಾನವ ಕುಲಕ್ಕೆ ಅತ್ಯವಶ್ಯವೆನಿಸಿದಾಗ, ಮಂಗಳನನ್ನೇ ಮುಟ್ಟಿದ ಮಾನವನಿಗೆ ಅಂತಹದೊಂದು ಗಣಿ ಯಂತ್ರವನ್ನು ವಿಕಸಿತಗೊಳಿಸುವುದು ಅಸಾಧ್ಯವೇನಲ್ಲ.




*ಮ್ಯಾಂಗನೀಸ್ ಗಡ್ಡೆಯನ್ನು ಇಬ್ಭಾಗವಾಗಿ ಹೆಚ್ಚಿದಾಗ ಕಾಣುವ ಕೋಶ (ನ್ಯುಕ್ಲಿಯಸ್) ಹಾಗೂ ಅದರ ಸುತ್ತಲೂ ಬೆಳೆದ ಲೋಹಗಳ ಆಕ್ಸೈಡ್‌ಗಳ ಪದರುಗಳು*

ಇಲ್ಲಿ ನಾವೆಲ್ಲ ಪ್ರಾಮುಖ್ಯವಾಗಿ ಚಿಂತಿಸಬೇಕಾಗಿರುವುದೇನೆಂದರೆ.., ಇಲ್ಲಿಯವರೆಗೂ ಮಾನವನ ದುರಾಸೆ ತುಂಬಿದ ಕಪಿ-ಚೇಷ್ಟೆಯ ಪ್ರಭಾವದಿಂದ ದೂರವಾಗಿದ್ದ ಅತಿ ಕಡಿಮೆ ತಾಪವುಳ್ಳ (-೨ ಡಿಗ್ರೀ ಸೆಲ್ಸಿಯಸ್), ಭಾರಿ ಒತ್ತಡದಲ್ಲಿರುವ (-೫೦೦ ವಾಯು ಭಾರ) ಕಾರ್ಗತ್ತಲು ತುಂಬಿದ ಈ ಆಳ ಸಾಗರದ ಪರ್ಯಾವರಣದ ಮೇಲೆ ಹಾಗೂ ಇಲ್ಲಿ ಜೀವಿಸಿರುವ ವಿಶೇಷ ರೀತಿಯ ಜೀವಜಂತುಗಳ ಮೇಲೆ ಯಾವ ರೀತಿಯ ಪ್ರಭಾವವಾಗಬಹುದೆಂದು ನಿಚ್ಚಳವಾಗಿ ಅರಿಯಬೇಕಾಗಿದೆ. ಅದನ್ನರಿಯದೇ ಆಳಕ್ಕೆ ಧುಮುಕಿದರೆ ಮರುಸುಧಾರಣೆ ಮಾಡಲಸಾಧ್ಯವಾದ ಅಪಘಾತವನ್ನು ಆಮಂತ್ರಿಸಿದಂತಾಗುವುದು.

[redacted] ವಿರುಪಾಕ್ಷ ಬಣಕಾರ
ವಿಜ್ಞಾನಿ, ರಾಷ್ಟ್ರೀಯ ಸಾಗರವಿಜ್ಞಾನ ಸಂಸ್ಥೆ ಡೋನಾಪಾಲ್
ಗೋವಾ - ೪೦೩ ೦೦೪

# ತಸ್ಲಿಮಾಗೆ ಮತ್ತೆ ಮುಚ್ಚಿದ ಬಾಂಗ್ಲಾದ ಬಾಗಿಲು



**ಮೊ**ನ್ನೆ ಬಾಂಗ್ಲಾದಲ್ಲಿ ನಡೆದ ಚುನಾವಣೆಯಲ್ಲಿ ಮೂಲಭೂತವಾದಿ ಮುಸ್ಲಿಂ ಪಕ್ಷಗಳ ಬೆಂಬಲ ಪಡೆದಿದ್ದ ಬೇಗಂ ಖಲೀದಾ ಜಿಯಾ ನೇತೃತ್ವದ ಬಾಂಗ್ಲಾ ನ್ಯಾಷನಲ್ ಪಾರ್ಟಿಗೆ ಬಹುಮತ ದೊರೆತು ಬೇಗಂ ಖಲೀದಾ ಪ್ರಧಾನಿಯಾಗಿದ್ದರಿಂದ ಬಾಂಗ್ಲಾ ದೇಶ ತೊರೆದಿರುವ ವಿವಾದಾತ್ಮಕ (?) ಲೇಖಕಿ ತಸ್ಲಿಮಾ ನಸ್ರೀನ್‌ಗೆ ಬಾಂಗ್ಲಾ ಬಾಗಿಲು ಮತ್ತೆ ಮುಚ್ಚಿದಂತಾಗಿದೆ. ಏಕೆಂದರೆ, ೧೯೯೪ರಲ್ಲಿ ತಸ್ಲಿಮಾಳನ್ನು ಬಾಂಗ್ಲಾದಿಂದ ಹೊರಹೋಗುವಂತೆ ಮಾಡಿದ್ದು ಇದೇ ಖಲೀದಾ. ಜೊತೆಗೆ ಖಲೀದಾ ಮೇಲೆ ಮೂಲಭೂತವಾದಿಗಳ ಹಿಡಿತ ಇನ್ನೂ ಹೆಚ್ಚಿದೆ.

೧೯೯೪ರ ಏಪ್ರಿಲ್ ತಿಂಗಳು. ಜಗತ್ತಿನ ಎರಡನೆ ದೊಡ್ಡ ಮುಸ್ಲಿಂ ರಾಷ್ಟ್ರವಾದ ಬಾಂಗ್ಲಾದ ಬೀದಿಗಳ ತುಂಬ ಬೆಂಕಿ. ಅದು ಲೇಖಕಿ ತಸ್ಲಿಮಾ ಅವರ ಆಹುತಿಗಾಗಿ. ಹತ್ಯೆ ಮತ್ತು ಆತ್ಮಹತ್ಯೆ ಮೂಲಕ ಹತ್ಯೆ, ಇವು ಯಾವುದೇ ಮೂಲಭೂತವಾದಿಗಳಿರಲಿ ಅವರ ಅಸ್ತ್ರಗಳು. ಅವತ್ತು ಬಾಂಗ್ಲಾದ ಬೀದಿ ತುಂಬ ಬೆಂಕಿ ಹಾಕಿ ಹೊಗೆಯೆಬ್ಬಿಸಿದವರು ರಾಜಕೀಯ ಜನ. ಮೂಲಭೂತವಾದಿಗಳು. ವೈಯಕ್ತಿಕ ಮತ್ತು ಸಾರ್ವಜನಿಕ ಬದುಕಿನ ನಡುವಿರುವ ವ್ಯತ್ಯಾಸವೇ ಗೊತ್ತಿಲ್ಲದ ಜನ. ಇಂದು ಮತ್ತೆ ಬಾಂಗ್ಲಾದ ಸಂಸತ್‌ಗೆ ಅವರೇ ಆಯ್ಕೆಯಾಗಿದ್ದಾರೆ.

ತಸ್ಲಿಮಾ ಡಾಕ್ಟರಾಗಿದ್ದುಕೊಂಡು ಕವನ ಬರೆಯುತ್ತಿದ್ದಳು. ಅದೂ ಮಹಿಳಾಪರ. ಆದರೆ ಆ ಕವನಗಳ ಬಗ್ಗೆ ಯಾರೂ ಗಮನ ಕೊಡುತ್ತಿರಲಿಲ್ಲ. ಯಾಕೆಂದರೆ ಆಕೆ ಮುಸ್ಲಿಂ. ಆಮೇಲೆ ಗದ್ಯದತ್ತ ಹೊರಳಿದರೂ ಆಕೆಯ ಬಗ್ಗೆ ಬಾಂಗ್ಲಾ ತಲೆ ಕೆಡಿಸಿಕೊಳ್ಳಲಿಲ್ಲ. ಆದರೆ ೯೩ರಲ್ಲಿ ತನ್ನ ಪುಸ್ತಕ ಹೊರತಂದ (ಲಜ್ಜಾ) ತಸ್ಲಿಮಾ ಅದರಲ್ಲಿ ದೇಶದ ಮೂಲಭೂತವಾದಿಗಳ ಸಾಂಪ್ರದಾಯಿಕತೆ ಮೇಲೆ ಭಾರೀ ಪ್ರಹಾರ ಮಾಡಿದ್ದು ಮೂಲಭೂತವಾದಿಗಳು ತತ್ತರಿಸುವಂತಾಯಿತು. ಆಗ ಧಾರ್ಮಿಕ ಮುಖಂಡರ ಅಡಿಯಾಳಾಗಿದ್ದ ಸರ್ಕಾರದ ಸಾರಥಿ ಖಲೀದಾ ಜಿಯಾ ಮೂಲಭೂತವಾದಿಗಳ ಒತ್ತಡಕ್ಕೆ ಮಣಿದು ಆಕೆಯ ಅದೊಂದೇ ಪುಸ್ತಕ (ಲಜ್ಜಾ) ಅಲ್ಲದೆ ಅವರೆಗೆ ಆಕೆ ತಂದಿದ್ದ ಐದೂ ಪುಸ್ತಕಗಳ ಮೇಲೆ ನಿಷೇಧ ಹೇರಿದರು. ಇವತ್ತು ಅದೇ ಖಲೀದಾ ಮತ್ತೆ ಪ್ರಧಾನಿಯಾಗಿದ್ದಾರೆ.

ತಸ್ಲಿಮಾ ಬರೆದ 'ಲಜ್ಜಾ' ಕೃತಿಯಲ್ಲಿ ಏನಿತ್ತೆಂದರೆ ಭಾರತದಲ್ಲಿ ಬಾಬರಿ ಮಸೀದಿ ಕೆಡವಿದಾಗ ಬಾಂಗ್ಲಾದಲ್ಲಿ ಹಿಂದು ಕುಟುಂಬಗಳಿಗೆ ಬಂದೆರಗುವ ಗಂಡಾಂತರದ ಸ್ಥಿತಿ. ಹೌದು, ಇಂದು ಜಗತ್ತಿನ ತುಂಬ ಎಲ್ಲೆಡೆ ಕೇಳುತ್ತಿರುವುದು ಧರ್ಮ ಮೊದಲು ಎನ್ನುವುದು. ಆಫ್ಘನ್ ಮೇಲಿನ ಅಮೆರಿಕಾ ದಾಳಿ ಇನ್ನಾವುದೋ ದೇಶದಲ್ಲಿ ಧರ್ಮ ಆಧಾರಿತದಲ್ಲಿ ಹಿಂಸಾಚಾರಕ್ಕೆ, ಹತ್ಯೆಗೆ ಕಾರಣವಾಗುವ ಸ್ಥಿತಿ ಇಂದಿನದು. ಇಂಥ ಸಂದರ್ಭದಲ್ಲಿ ಯಾವುದೇ ಮಾನವೀಯ ಬರಹಗಾರ ತಾನು ಕಂಡ ಅನ್ಯಾಯವನ್ನು ಬರಹದ ಮೂಲಕ ಖಂಡಿಸದೇ ಇರಲಾರ. ಆ ಕೆಲಸ ಮಾಡಿದ ತಸ್ಲಿಮಾ ಮೇಲೆ 'ಕುರ್ ಆನ್‌ಗೆ ಅಪಚಾರ' ಮಾಡಿದರೆಂಬ ಆರೋಪ ಹೊರಿಸಿ ಆಕೆಗೆ ಗಲ್ಲು ಶಿಕ್ಷೆ ನೀಡಲು ಕೇಳಿಕೊಂಡರು ಮೂಲಭೂತವಾದಿಗಳು. ಸರ್ಕಾರ ಮಣಿಯಿತು. ಆದರೆ ಸರ್ಕಾರದ ನಿರ್ಧಾರಕ್ಕೆ ವಿರುದ್ಧವಾಗಿ ಸಿಡಿದದ್ದು ಕೇವಲ ಬಾಂಗ್ಲಾ ಜಾತ್ಯತೀತ ವಿದ್ಯಾರ್ಥಿ ಸಮುದಾಯ. ಆದರೇನು, ತಸ್ಲಿಮಾ ದೇಶ ತೊರೆದಳು.

ತಸ್ಲಿಮಾಗೆ ಈ ಸ್ಥಿತಿ ಬರಲು ಕಾರಣವೇನು ? ಧರ್ಮವೆಂಬುದು ಇಂತಹ ಹೀನಮಟ್ಟಕ್ಕಿಳಿದಿದೆಯೆ ? ವ್ಯಕ್ತಿಯೊಬ್ಬ ತನ್ನ ತೃಷೆಗೆ ಧರ್ಮದ ಹೆಸರಲ್ಲಿ ಜನರನ್ನು ರೊಚ್ಚಿಗೆಬ್ಬಿಸುತ್ತಿರುವುದೇ ? ಅಥವಾ ಧರ್ಮದ ಕುರುಡು ಅಭಿಮಾನವೇ ಹೀಗಾಗಿಸುತ್ತಿದೆಯೆ ?

೯೪ರಿಂದ ತಸ್ಲಿಮಾ ಬಾಂಗ್ಲಾಕ್ಕೆ ಕಾಲಿಡಲಿಲ್ಲ. ಇಟ್ಟಿಲ್ಲ. ಅಲ್ಲಿ ಇಂದಿಗೂ ಆಕೆಯ ಮೇಲಿನ ಪ್ರಕರಣಗಳು ಕೋರ್ಟಿನಲ್ಲಿ ಕೊಳೆಯುತ್ತಿವೆ. ತಸ್ಲಿಮಾ ತಲೆ ತಂದೊಪ್ಪಿಸಿದವರಿಗೆ ಬಹುಮಾನವಿದೆ. ಕಾರಣ ಬಾಂಗ್ಲಾದಲ್ಲಿ ತಸ್ಲಿಮಾಳ ಬರಹದಿಂದ ಆಪರಿಜನ ರೊಚ್ಚಿಗೆದ್ದಿದ್ದರು. ಇವತ್ತು ಆಫ್ಘನ್ ಮೇಲಿನ ಅಮೆರಿಕ ಧಾಳಿ ವಿರುದ್ಧ ಮೆರವಣಿಗೆ ಹೊರಡುವ ಬಾಂಗ್ಲಾದವರು ಅವತ್ತು ತಸ್ಲಿಮಾ ಬರಹದ ವಿರುದ್ಧ ಹೊರಟಿದ್ದರು. 'ಧರ್ಮನಿಂದನೆ' ವಿರುದ್ಧ ಕಾನೂನು ಮಾಡಲು ಬಾಂಗ್ಲಾದಲ್ಲಿ ಆಗ ದೊಡ್ಡ ಆಂದೋಲನವೇ ನಡೆಯಿತು.

ಬಾಂಗ್ಲಾ ತೊರೆದ ತಸ್ಲಿಮಾ ಭಾರತಕ್ಕೆ ಬರಲಾರಳು ಎನ್ನುವ ಸ್ಥಿತಿಯಲ್ಲಿಯೇ ೯೯ರಲ್ಲಿ ತಸ್ಲಿಮಾ ಭಾರತದ ಪಶ್ಚಿಮ ಬಂಗಾಲದಲ್ಲಿ ಕಾಣಿಸಿಕೊಂಡಳು. ಒಂದು ಮಾತು : ತಸ್ಲಿಮಾಳ ನಿಷೇಧಿತ 'ಲಜ್ಜಾ'ದ ಇಂಗ್ಲಿಷ್ ಆವೃತ್ತಿ ಕಲ್ಕತ್ತದಲ್ಲಿ ಮಾರಾಟಗೊಂಡಾಗ ಇದೇ ಬಿಜೆಪಿಗಳು ಅದನ್ನು 'ಧರ್ಮ ಕಾರ್ಯ'ಕ್ಕಾಗಿ ಬಳಸಿಕೊಂಡರು. ಅಂದರೆ ಮೂಲಭೂತವಾದಿಗಳು ಎಲ್ಲೇ ಇರಲಿ, ಯಾರೇ ಇರಲಿ ಅವರ ಮನಸ್ಸುಗಳು ಹೇಗೆ ಕೆಲಸ ಮಾಡುತ್ತವೆ ಎಂಬುದಕ್ಕೆ ಇದೊಂದು ನಿದರ್ಶನ ಸಾಕು.

ಜೊತೆಗೆ ತಸ್ಲಿಮಾಳನ್ನು ದೇಶದೊಳಕ್ಕೆ ಬಿಟ್ಟುಕೊಂಡ ಭಾರತದ ವಿರುದ್ಧ ಇಂದು ಬಾಂಗ್ಲಾದ ಜನರನ್ನು ಎತ್ತಿಕಟ್ಟುವ ಕೆಲಸವನ್ನು ಮಾಡುವಾಗ ಮೂಲಭೂತವಾದಿಗಳು ತಸ್ಲಿಮಾ ಪ್ರಕರಣವನ್ನೇ ಮುಂದುಮಾಡುತ್ತಾರೆ. ಏಕೆಂದರೆ ಗೆದ್ದಿರುವವರು ಅವರೇ ಅಲ್ಲವೇ ?

ಲಜ್ಜಾದ ವಿಷಯಕ್ಕಿಂತ ಕಲ್ಕತ್ತಾದ 'ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ಪ್ರಕಟಗೊಂಡ ತಸ್ಲಿಮಾಳ 'ಕುರ್ ಆನ್' ಕುರಿತ ಮಾತುಗಳು ದೊಡ್ಡ ಗದ್ದಲ ಎಬ್ಬಿಸಿದವು. 'ಕುರ್ ಆನ್'ನಲ್ಲಿ ಕೆಲ ಅಂಶಗಳು ತಪ್ಪಿವೆ. ಕುರಾನ್ ಪರಿಷ್ಕರಿಸಬೇಕು ಎಂದು ಹೇಳಿದ್ದಾರೆಂಬ ಕಾರಣದಿಂದ ವಿವಾದ ದೊಡ್ಡದಾಯಿತು. ಇಲ್ಲಿ ಎಲ್ಲರೂ ಮೊದಲು ಗಮನಿಸಬೇಕಾಗಿದ್ದೇನೆಂದರೆ ತಸ್ಲಿಮಾ ಭಾರತಕ್ಕೆ ಬಂದದ್ದು, ಅದು ಪ್ರಕಟಗೊಂಡ ದಿನಾಂಕ ಎಲ್ಲವನ್ನೂ ಪರೀಕ್ಷಿಸಬೇಕಾಗಿತ್ತು.

ಮೂಲಕೃತಿಯ ಪರಿಷ್ಕರಣೆ ವಿಚಾರ ತಪ್ಪು. ಬದಲಾಗಿ ಅದರ ಪುನರ್ ಸೃಷ್ಟಿಯಾಗಿ ಹೊಸ ಕೃತಿ ಬರೆಯಬೇಕಿತ್ತು. ಉದಾಹರಣೆಗೆ ಕುವೆಂಪುರವರ ರಾಮಾಯಣ ದರ್ಶನಂ ತರಹ ಎಂದು ಇಲ್ಲಿಯ ಕೆಲವರ ಅಭಿಪ್ರಾಯ. ಏನೇ ಇರಲಿ, ತಸ್ಲಿಮಾಳಲ್ಲಿರುವ ಹೋರಾಟದ ವಿಚಾರಗಳಷ್ಟನ್ನೇ ಸ್ವಾಗತಿಸಬೇಕಿತ್ತು ಬಾಂಗ್ಲಾ, ಆದರೆ ಆಕೆಯ ಅಭಿಪ್ರಾಯವನ್ನಲ್ಲ ಎಂಬ ಮಾತನ್ನು ಆಗಿನ ಖಲೀದಾ ಸರ್ಕಾರ ಅರಿತುಕೊಳ್ಳಬೇಕಿತ್ತು. ಕೇವಲ ಅಭಿಪ್ರಾಯ ವ್ಯಕ್ತಪಡಿಸಿದ ಮಾತ್ರಕ್ಕೆ 'ಫತ್ವಾ' ಹೊರಡಿಸುವುದಾದರೆ ಬಾಂಗ್ಲಾದಲ್ಲಿ ಇನ್ನ್ಯಾಕೆ ಚುನಾವಣೆಗಳು ?

'ಫತ್ವಾ' ಬಗ್ಗೆ ತಸ್ಲಿಮಾಗೆ ಕೇಳಿದ ಪತ್ರಕರ್ತರಿಗೆ ಬಂದ ಉತ್ತರ : "ನನ್ನ ಪಾಲಿಗೆ ಮುಸ್ಲಿಂರಿಲ್ಲ. ಹಿಂದುಗಳಿಲ್ಲ. ಇರುವವರೆಲ್ಲ ಮನುಷ್ಯರು. ನಾನು ಮನುಷ್ಯರನ್ನು ಪ್ರೀತಿಸುತ್ತೇನೆ. ಅವರಿಗಾಗಿ ಬರೆಯುತ್ತೇನೆ."

೧೯೯೯ರಲ್ಲಿ ಭಾರತ ಸರ್ಕಾರ ತಸ್ಲಿಮಾಗೆ ವೀಸಾ ನೀಡಿದ ನೆಪ ಒಡ್ಡಿ ಇಂದು ಬಾಂಗ್ಲಾದ ಸಂಸತ್‌ಗೆ ಆಯ್ಕೆಯಾಗಿರುವ ಮೂಲಭೂತವಾದಿಗಳು ಜನರನ್ನು ದಾರಿ ತಪ್ಪಿಸುವ ಸಂಭವವೂ ಇದೆ. ಒಟ್ಟಿನಲ್ಲಿ ಮಾನ್‌ಸೂನ್ ಪ್ರಕೋಪದಿಂದ ಬರುವ ಅತಿವೃಷ್ಟಿ, ಚಂಡಮಾರುತಗಳಿಂದ ಬಾಂಗ್ಲಾ ನಲುಗುತ್ತಿದ್ದರೆ, ಧರ್ಮದ ಹೆಸರಲ್ಲಿ ನಾಯಕರು ಜನರನ್ನು ಹಾದಿ ತಪ್ಪಿಸುತ್ತಿದ್ದಾರೆ. ಬಾಂಗ್ಲಾದಲ್ಲಿ ಹುಟ್ಟಿದ ತಪ್ಪಿಗೆ ತಸ್ಲಿಮಾ ಎಂಟು ವರ್ಷಗಳಿಂದ 'ಅನಾಥ ಬದುಕು' ಸಾಗಿಸಬೇಕೆ ?

ಹಸೀನಾ ಆಡಳಿತವಿದ್ದಾಗ ತಸ್ಲಿಮಾ ಮರಳಿ ಬಾಂಗ್ಲಾಕ್ಕೆ ಬರಲಿದ್ದಾಳೆ ಎಂಬ ಗಾಳಿ ಸುದ್ದಿ ಹಬ್ಬಿದ್ದರೂ ಹಸೀನಾ ಮಾತ್ರ ಅದರ ಪ್ರಯತ್ನ ಮಾಡಲಿಲ್ಲ. ಈಗ ತಸ್ಲಿಮಾ ದೇಶ ಬಿಡಲು ಕಾರಣರಾದ ಖಲೀದಾ ಮತ್ತೆ ಅಧಿಕಾರಕ್ಕೆ ಬರುವುದರೊಂದಿಗೆ ತಸ್ಲಿಮಾಗೆ ಬಾಂಗ್ಲಾದ ಬಾಗಿಲು ಮುಚ್ಚಿದಂತಾಗಿದೆ.

**ಹುಸೇನ್**
c/o ದಿ ಫ್ರ್ಯಾಂಚ್ ಎಕ್ಸ್‌ಪ್ರೆಸ್ ಕೊರಿಯರ್, ಹುಣಸೆ ಗಿಡದ ಹತ್ತಿರ
ಜವಾಹರ ರಸ್ತೆ, ಕೊಪ್ಪಳ-೫೮೩ ೨೩೧

# ಕವಿ ಹೃದಯದ ವಿದ್ವಾಂಸ ಪ್ರೊ. ಕೋಡಿ ಕುಶಾಲಪ್ಪಗೌಡ



ವಿದ್ವತ್ತು, ವಿನಯಗಳ ಪ್ರತಿನಿಧಿಯಂತಿರುವ ಪ್ರೊ. ಕೋಡಿ ಕುಶಾಲಪ್ಪಗೌಡರು ಕವಿ ಮನೋಧರ್ಮದ ಸಜ್ಜನ; ಸ್ಥೂಲಕಾಯದೊಳಗೆ ತಿಳಿಹಾಸ್ಯಕ್ಕೆ ವಾಸಸ್ಥಳವನ್ನೊದಗಿಸಿದ ಪ್ರಸನ್ನ ಚಿತ್ತದ ಉದಾರಿ. ಇವರನ್ನು ವಿಶ್ವವಿದ್ಯಾನಿಲಯಗಳ ವಿದ್ವಾಂಸರು ಭಾಷಾ ವಿಜ್ಞಾನದ ತಜ್ಞನೆಂದು ಪರಿಗಣಿಸಿದ್ದಾರೆ. ಸಭೆ ಸಮಾರಂಭಗಳಲ್ಲಿ ಇವರ ಹೆಸರಿನ ಮೊದಲು ಅಥವಾ ನಂತರ ಭಾಷಾ ವಿಜ್ಞಾನಿ ಎಂಬ ಪದ ಕಾಣಿಸಿಕೊಳ್ಳುತ್ತದೆ. ಅಣ್ಣಾಮಲೈ, ಮದ್ರಾಸು ಮತ್ತು ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ, ಅಧ್ಯಾಪನ ಮಾಡಿ ಕೀರ್ತಿ ಪ್ರೀತಿಗಳಿಗೆ ಪಾತ್ರರಾಗಿರುವ ಇವರು ೭೦ರ ಅಂಚಿನಲ್ಲಿದ್ದಾರೆ. ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರಾಗಿದ್ದ ಇವರು ನಿವೃತ್ತರಾಗಿ ಸುಳ್ಯದಲ್ಲಿ ನೆಲೆಸಿದ್ದಾರೆ.

ಇವರ ಮೆಚ್ಚಿನ ಕವಿ ಪಂಪ. ಇದಕ್ಕೆ ಇವರು ನೀಡುವ ಕಾರಣಗಳಿವು: ಕಾವ್ಯಧರ್ಮ, ಲೌಕಿಕ ಧರ್ಮ, ನಾಡಪ್ರೇಮ, ಗಾಂಭೀರ್ಯ, ಹಿತಮಿತವಾದ ಮಾತು, ಸಂದರ್ಭಕ್ಕೆ ಸರಿಯಾದ ಪದಪ್ರಯೋಗ, ಉದಾರತೆ, ಆತ್ಮಾಭಿಮಾನ, ರಸಿಕತೆ – ಹೀಗೆ ಹತ್ತು ಹಲವು ಗುಣಗಳು ಪಂಪನಲ್ಲಿ ಮೇಳೈಸಿವೆ. ಶೌರ್ಯ, ಪರಾಕ್ರಮ, ಉದಾತ್ತತೆ, ಮೈತ್ರಿ, ಗುರುಶಿಷ್ಯರ ಸಂಬಂಧ, ಹಿರಿಕಿರಿಯ ನಡವಳಿಕೆಗಳಲ್ಲಿ ಗೌರವ, ಮಾನವ ತುಮುಲಗಳು, ಮುಂತಾದ ಮಾನವ ಜೀವನದ ಮುಖ್ಯ ಮೌಲ್ಯಗಳು ಅವನ ಕಾವ್ಯದಲ್ಲಿವೆ. ಹದಗೆಟ್ಟ ಬದುಕಿಗೆ ದಿಕ್ಸೂಚಿಯಾಗ ಬಲ್ಲಂತ ಕಾವ್ಯ ಪಂಪನದು. ಆದುದರಿಂದ ತಾನು ಪಂಪನನ್ನು ಮೆಚ್ಚುತ್ತೇನೆ ಎನ್ನುವ ಮಾತುಗಳು ಇವರ ಮನೋಧರ್ಮದ ಪರಿಚಯಕ್ಕೂ ಸಹಕಾರಿಯಾಗಿವೆ.

ತಾರುಣ್ಯದಲ್ಲಿ ಕವಿತೆಗಳನ್ನು ಬರೆಯುತ್ತಿದ್ದುದು ಅಲ್ಲದೆ ಹಾಡುವುದೂ ಪ್ರಿಯ ಹವ್ಯಾಸವಾಗಿತ್ತು. ದಾಂಪತ್ಯ ಜೀವನದ ಸರಸ ಕ್ಷಣಗಳನ್ನು ಕಾವ್ಯಮಾಧ್ಯಮದಲ್ಲಿ ದಾಖಲಿಸಿಕೊಂಡು ಜೋಪಾನವಾಗಿ ತನ್ನ ಬಳಿಯೇ ಇರಿಸಿಕೊಂಡಿದ್ದಾರೆ ! ವಿದ್ವಾಂಸರಿಗೂ ವೃದ್ಧಾಪ್ಯ ತಪ್ಪಿದ್ದಲ್ಲ. ತಾತನಾದ ಮೇಲೆ ಮೊಮ್ಮಗಳಿಗೊಂದು ಜೋಗುಳ ಹಾಡು ಬರೆದಿದ್ದಾರೆ.

ಗಿಡ ಬಿಡುವ ಹೂವು, ಹೂವನ್ನರಳಿಸಿ ನಸುನಗುವ ಬೆಳಗಿನ ಎಳೆಬಿಸಿಲು, ಬೀಸುವ ತಂಗಾಳಿ, ದಳಗಳ ಮೇಲೆ ಮಿನುಗುವ ಮಂಜಿನ ಹನಿಮಣಿಗಳು ಸರಳ ಸಂಗತಿಗಳಲ್ಲ. ಬೆಳಗು ಬೈಗುಗಳಲ್ಲಿ, ಹಕ್ಕಿಯ ಕೊರಳ ಕೊಳಲಿನಲ್ಲಿ, ತೊಟ್ಟಿಲ ಮಗುವಿನ ಸುಹಾಸದಲ್ಲಿ ತೋರುವ ಸರಳತೆ ಇದೆ. ಜೀವನ ಸಂಗೀತಕ್ಕೆ ಈ ಸರಳ ಸಂಗತಿಗಳೇ ಶ್ರುತಿ ಹಿಡಿಯುತ್ತಿರುವುದನ್ನು ಈ ಹಾಡು ಕಾಣಿಸುತ್ತದೆ. ತುಂಬು ಚಂದಿರನಿಂದ ಬಂದಿಳಿದ ಬೆಳ್ದಿಂಗಳು, ಮಲ್ಲಿಗೆಯ ಮೈದಡವಿ ಬಂದ ತಂಗಾಳಿ, ಹಾಡುವ ಕೋಗಿಲೆ, ಅರಳಿರುವ ಚೆಂಗುಲಾಬಿ, ಗುಂಜಾರವದ ಕಪ್ಪು

**ಕಿರಣ**

ತುಂಬಿಗಳು, ಕೆಂದಳಿರು ಮುಂತಾದ ನಿಸರ್ಗದ ಚೇತನಗಳು ತೊಟ್ಟಿಲ ಮಗುವನ್ನು ತೂಗಿ ಹಾಡಿ ಸಂತೋಷದಲ್ಲಿ ಭಾಗಿಗಳಾಗುವ ಕಲ್ಪನೆ ವಿಶಿಷ್ಟವಾಗಿರುವಂತೆ ಆಪ್ತವೂ ಹೌದು. ಒಲುಮೆ, ವಾತ್ಸಲ್ಯಗಳ ಅಪೇಕ್ಷೆಯಂತೆ ಪದವಿಡುವ ಪದ್ಯವನ್ನು ಬರೆಯಬಲ್ಲ ವಿದ್ವಾಂಸರಿವರು.

ಬಾಲ್ಯದ ದಿನಗಳನ್ನು ಪ್ರಬುದ್ಧ ವಯಸ್ಸಿನಲ್ಲಿ ನೆನಪಿಸಿಕೊಂಡು ಅವುಗಳನ್ನು ಜೀವನಾನುಭವಗಳ ಮೂಲಕ ಪರೀಕ್ಷಿಸಿ ರಚಿಸಿದ ಲಲಿತ ಪ್ರಬಂಧಗಳು ಹಾಸ್ಯದ ಲೇಪನದಿಂದಾಗಿ ರೋಚಕವಾಗಿವೆ. 'ಊರೊಸಗೆ', 'ಕಡಲತಡಿಯ ಕನವರಿಕೆಗಳು', 'ಬೆಟ್ಟದಾ ಮೇಲೊಂದು ಮನೆಯ ಮಾಡಿ' ಸಂಕಲನಗಳ ಪ್ರಬಂಧಗಳು ಗದ್ಯಕಾವ್ಯಕ್ಕೆ ಉತ್ತಮ ಮಾದರಿಗಳು. ''ಊರೊಸಗೆ'' ಬಹುಪಾಲು 'ಪಯಸ್ವಿನಿ'ಯದೇ ಕತೆಯಾಗಿದೆ. ಆಕಾಶಕ್ಕೆ ಏಣಿಯಿಟ್ಟಂತೆ ಬೆಳೆದ ಬಿದಿರುಗಳು, ನೀರಿಗೆ ತುಳುಂಕೆಂದು ಕಾಯಿಗಳನ್ನು ಉದುರಿಸುವ ಸಿರಿಪೊನ್ನೆ ಮರಗಳು; ಮೀನಿನ ಬೇಟೆಯ ಕೊರಗ, ಚೆನಿಯರು; ನೀರಿಗೆ ಬಿದ್ದ ಹೋಂತಜ್ಜ – ಇಂಥ ಚಿತ್ರಗಳನ್ನು ಬರೆಯುವ ಭಾಷೆ ಕುಶಾಲಪ್ಪ ಗೌಡರಿಗೇ ವಿಶಿಷ್ಟವಾದುದು. ಇಲ್ಲಿ ಬರುವ 'ಬಾಲವಿಲ್ಲದ ನರಿ' ನಮಗೆ ತಿಳಿದಿರುವ ಪಂಚತಂತ್ರಕತೆಗಳ ಗುಂಪಿಗೆ ಹೊಸ ಸೇರ್ಪಡೆ.

ಇವರ ಕಾವ್ಯಶಕ್ತಿ ಪ್ರಕಟವಾಗಿರುವುದು 'ಕಮಲ ನಿಮೀಲನ' ಎಂಬ ಗದ್ಯಕೃತಿಯಲ್ಲಿ. ತನ್ನ ಸಂಶೋಧನೆ, ಶೈಕ್ಷಣಿಕ ಪ್ರಗತಿ, ವಿದ್ವದ್ವಲಯದಲ್ಲಿ ದೊರೆತ ಮನ್ನಣೆ, ಸಾಹಿತ್ಯಿಕ ಸಾಧನೆಗಳ ಹಿಂದಣ ಶಕ್ತಿ, ಸ್ಫೂರ್ತಿಯಾಗಿದ್ದ ಪತ್ನಿಯ ಅಕಾಲಿಕ ಸಾವು ಸೃಷ್ಟಿಸಿದ ಕೃತಿಯಿದು. ಕಳೆದ ದಿನಗಳ ಹಾಸ್ಯ-ಲಾಸ್ಯ, ಪ್ರೇಮ-ಸಲ್ಲಾಪ, ಸಿಹಿಕಹಿಗಳನ್ನು ತನಗೆ ತಾನೇ ಹೇಳಿಕೊಳ್ಳುವ ರೀತಿಯ ಬರವಣಿಗೆ ಇದು. ಸುಖದ ಬೆನ್ನಿನ ಮೇಲೆ ದುಃಖ ಸವಾರಿ ಮಾಡುವ ದೃಶ್ಯ ಕಣ್ಣೆದುರಿಗೆ ಬರುತ್ತಿರುತ್ತದೆ. ನಿಶ್ಚಲವಾಗಿರುವ ಶರೀರದೊಳಗಿದ್ದ ಮನಸ್ಸು, ಒಡನಾಟ, ಕೊಟ್ಟುಕೊಂಡ ಪ್ರೀತಿ, ಗಳಿಸಿದ ಪ್ರಸನ್ನತೆ, ಅರಳಿಕೊಂಡ ಜೀವನ – ಓದುಗನನ್ನು ಸೆರೆಹಿಡಿಯಬಲ್ಲ ವಿವರಗಳು ಕಾವ್ಯಮಯವಾಗಿದೆ.

ಮೇಲಿನದೇ ವಸ್ತು 'ಬೆಟ್ಟದಾ ಮೇಲೊಂದು ಮನೆಯ ಮಾಡಿ' ಪ್ರಬಂಧದಲ್ಲಿ ಮತ್ತೆ ಜೀವಂತವಾಗಿದೆ. ಲಘು ಧಾಟಿಯಲ್ಲಿ ಹರಟುತ್ತಾ ಓದುಗನನ್ನು ತನ್ನೊಂದಿಗೆ ಕರೆದೊಯ್ಯುವ ಈ ಪ್ರಬಂಧ ತನ್ನ ಪ್ರಿಯ ಪತ್ನಿಯ ಅಪೇಕ್ಷೆಯಂತೆ ನಿರ್ಮಿಸಿದ ಮನೆಯನ್ನು ತಾನೊಬ್ಬನೇ ಪ್ರವೇಶ ಮಾಡಬೇಕಾಯಿತೆಂಬ ನೋವನ್ನು ಮುಚ್ಚಿಟ್ಟುಕೊಂಡಿದೆ. ಇದೆಲ್ಲವೂ ಸಹಜ, ಅಂಜಲೇಕೆ ? ಎಂಬ ಧ್ವನಿಯನ್ನು ಶೀರ್ಷಿಕೆ ಹೊರಡಿಸುತ್ತದೆ.

ಈ ಹಿರಿಯರಿಗೆ ಕಿರಿಯರ ಬಗ್ಗೆ ವಿಶೇಷವಾದ ಅಕ್ಕರೆ, ಅಭಿಮಾನಗಳಿವೆ. ಯುವಕರು ಲೋಕಾನುಭವವನ್ನು ಗಳಿಸಿಕೊಳ್ಳಬೇಕು ; ತಾನೇಕೆ ಬರೆಯುತ್ತೇನೆಂಬ ಪ್ರಜ್ಞೆ ಜಾಗೃತವಾಗಿರಬೇಕು: ಬರೆದುದೆಲ್ಲವನ್ನು ಪ್ರಕಟಿಸಬೇಕೆಂಬ ಚಪಲದಿಂದ ಮುಕ್ತರಾಗಬೇಕು ಎಂದು ಹೇಳುತ್ತಿರುತ್ತಾರೆ. ಒಬ್ಬನು ಪ್ರಾಮಾಣಿಕತನದಿಂದ ಯಾವುದೇ ಕಾರ್ಯದಲ್ಲಿ ಮಗ್ನನಾಗಿರಲಿ ಒಂದಲ್ಲ ಒಂದು ದಿನ ಅವನು ಜಯಶೀಲನಾಗಿಯೇ ಆಗುತ್ತಾನೆಂದು ಪ್ರೊ. ಕುಶಾಲಪ್ಪಗೌಡರು ನಂಬುತ್ತಾರೆ.

*ಪ್ರಕಟಿತ ಕೃತಿಗಳು : ಇಂಗ್ಲಿಷ್ ಭಾಷೆಯ ೪ ಪುಸ್ತಕಗಳು ಸೇರಿದಂತೆ ೧೭ ಕೃತಿಗಳು. ಭಾಷಾ ವಿಜ್ಞಾನ, ಸಂಶೋಧನೆ, ಲಲಿತ ಪ್ರಬಂಧಗಳು, ಅನುವಾದಿತ ಕಾವ್ಯ – ಹೀಗೆ ಬೇರೆ ಬೇರೆ ಪ್ರಕಾರಗಳಿಗೆ ಸೇರಿದ ಹೆಚ್ಚಿನ ಪುಸ್ತಕಗಳು ಮದ್ರಾಸು, ಅಣ್ಣಾಮಲೈ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳಿಂದ ಪ್ರಕಟವಾಗಿವೆ. ಸುಮಾರು ೭೮ ಸಂಶೋಧನಾತ್ಮಕ ಪ್ರೌಢ ಪ್ರಬಂಧಗಳನ್ನು ವಿದ್ವತ್ ಗೋಷ್ಠಿಗಳಲ್ಲಿ ಮಂಡಿಸಿದ್ದಾರೆ; ಪ್ರಬುದ್ಧ ಕರ್ನಾಟಕ, ವಾರ್ಷಿಕಾಂಕ, ಸ್ಮರಣ ಸಂಚಿಕೆಗಳಲ್ಲಿ ಪ್ರಕಟಿಸಿದ್ದಾರೆ. ಆಗಾಗ ಕವಿತೆಗಳನ್ನೂ ಬರೆದು ಜೀವನ, ಜಯಕರ್ನಾಟಕಗಳಲ್ಲಿ ಬೆಳಕು ಕಾಣಿಸಿದ್ದಾರೆ.*

*ಪ್ರಶಸ್ತಿ, ಗೌರವ : ಸೋವಿಯತ್ ಲ್ಯಾಂಡಿನ ಚಿನ್ನದ ಪದಕ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಶಸ್ತಿ (ಎರಡು ಬಾರಿ) ಮತ್ತೊಮ್ಮೆ ಗೌರವ ಪ್ರಶಸ್ತಿ, ಕಂಚಿ ಕಾಮಕೋಟಿ ಮಠದ ಚಿನ್ನದ ಪದಕ, ಸುಳ್ಯ ತಾಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.*

## ಪ್ರೊ॥ ಕುಶಾಲಪ್ಪ ಗೌಡ ಅವರಿಗೆ ಕೆಲವು ಪ್ರಶ್ನೆಗಳು

*ಪ್ರ : ನೀವು ಮದ್ರಾಸಿನಲ್ಲಿದ್ದವರು. ತಮಿಳು-ಕನ್ನಡ ಸಂಪರ್ಕ, ಸಾಮರಸ್ಯಗಳ ಬಗ್ಗೆ ನಿಮ್ಮ ಅನುಭವ ತಿಳಿಸುತ್ತೀರಾ ?*

ಉ : ನನ್ನ ವಿದ್ಯಾರ್ಥಿ ಜೀವನದ ನಂತರದ ವೃತ್ತಿ ಜೀವನವೆಲ್ಲ ತಮಿಳುನಾಡಿನಲ್ಲೇ ಕಳೆಯಿತು. ಮೊದಲ ಭಾಗ ೧೮ ವರ್ಷ ಅಣ್ಣಾಮಲೈ ಯೂನಿವರ್ಸಿಟಿಯಲ್ಲಿ. ಇದೊಂದು ಪ್ರಮುಖ ತಮಿಳಿನ ಸಾಂಸ್ಕೃತಿಕ ಕೇಂದ್ರ. ಹಿಂದೆ ನಮ್ಮ 'ತಿರುಳ್ಗನ್ನಡ ಪ್ರದೇಶ'ವೆಂಬಂತೆ ಇದೂ 'ಶೆಂದಮಿಳ್' ಪ್ರದೇಶವೆನ್ನಬಹುದು. ಟ, ಅ ಉಚ್ಚಾರಣೆ ಸ್ಪಷ್ಟವಾಗಿದೆ. ಕನ್ನಡದ ಸಂಪರ್ಕ ತಮಿಳಿಗೆ ಇಲ್ಲಿ ಅಷ್ಟಾಗಿ ಇರಲಿಲ್ಲ. ನನ್ನ ಸಂಪರ್ಕಕ್ಕೆ ಬಂದವರೆಲ್ಲ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಕುತೂಹಲದಿಂದ ವಿಚಾರಿಸುತ್ತಿದ್ದರು. ತಮ್ಮದರ ಬಗ್ಗೆ ಅಭಿಮಾನಪಡುತ್ತಿದ್ದರು. ಸ್ನೇಹಪರರು. ಸುಸಂಸ್ಕೃತರು. ನಾನು ಅನ್ಯನೆಂಬ ಭಾವನೆ ನನಗೆ ಬಾರದಂತೆ ವರ್ತಿಸುತ್ತಿದ್ದರು. ಅಲ್ಲಿಯ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಉತ್ಸವಗಳಲ್ಲಿ ನಾನೂ ಸೇರಿಕೊಂಡು ಆನಂದಿಸುತ್ತಿದ್ದೆ. ಭಾಷಾ ವಿಜ್ಞಾನದ ಎಂ.ಎ. ತರಗತಿಗೆ ಇತರ ವಿಷಯಗಳೊಡನೆ ಕನ್ನಡ ಭಾಷೆಯನ್ನೂ ಬೋಧಿಸುತ್ತಿದ್ದೆ. ವಿದ್ಯಾರ್ಥಿಗಳು ತುಂಬಾ ಉತ್ಸುಕರಾಗಿರುತ್ತಿದ್ದರು.

ಮದ್ರಾಸು ವಿ. ವಿ.ದ ಕನ್ನಡ ವಿಭಾಗದ ಮುಖ್ಯಸ್ಥನಾಗಿ ೧೯೭೭ರಲ್ಲಿ ಸೇರಿದ ಮೇಲೆ, ತಮಿಳರೊಡನೆ ಮೊದಲಿನಷ್ಟು ನಿಕಟ ಸಂಪರ್ಕವಿಲ್ಲದಿದ್ದರೂ ತಮಿಳು ಹಾಗೂ ಇತರ ವಿಭಾಗದವರೊಟ್ಟಿಗೆ ಬೆರೆಯುವ ಸ್ನೇಹಮಯ ವಾತಾವರಣವಿತ್ತು. ತಮಿಳಿಗೆ ೨-೩ ಪ್ರತ್ಯೇಕ ವಿಭಾಗಗಳಿದ್ದವು. ಆ ಮುಖ್ಯಸ್ಥರುಗಳಲ್ಲಿ 'ಕವಿಗೆ ಕವಿ ಮುನಿವಂ' ಎಂಬಂತೆ ಪರಸ್ಪರ ದ್ವೇಷಾಸೂಯೆಗಳಿರುತ್ತಿದ್ದುವು. ಆದರೆ ನನ್ನೊಡನೆ ಎಲ್ಲರೂ ಸ್ನೇಹದಿಂದಲೇ ವರ್ತಿಸುತ್ತಿದ್ದರು. ನಮ್ಮ ವಿಭಾಗವಿದ್ದ ಕ್ಯಾಂಪಸ್‌ನಲ್ಲಿ ಸೀನಿಯರ್ ಆಗಿದ್ದ ಪ್ರೊಫೆಸರರನ್ನು ಮೇಲ್ವಿಚಾರಕ (Correspondent) ಎಂದು ನೇಮಿಸುತ್ತಿದ್ದರು. ತಮಿಳು ವಿಭಾಗದ ಹಿರಿಯ ಪ್ರೊಫೆಸರರು ಈ ಹುದ್ದೆಯಲ್ಲಿದ್ದರು. ಕೆಲಕಾಲಾನಂತರ ಅವರಿಗೆ ಈ ಹುದ್ದೆಯಲ್ಲಿ ಮುಂದುವರಿಯಲಾಗಲಿಲ್ಲ. ಹಾಗೆ ನನ್ನನ್ನು ಅದಕ್ಕೆ ನೇಮಿಸಿದರು. ಮುಂದೆ ಕೆಲವು ಸಮಯ ಎಲ್ಲವೂ ಸೂತ್ರಬದ್ಧವಾಗಿ ನಡೆಯುತ್ತಿತ್ತು. ತನ್ನಿಂದ ಸಾಧ್ಯವಾಗದ ಕೆಲಸ ಈತನಿಂದ ಸಾಧ್ಯವಾಗುತ್ತದೆಂದು ನೋಡಿ ಆ ಹಿರಿಯ ಪ್ರೊಫೆಸರರಿಗೆ ಇರಿಸು ಮುರಿಸು ಉಂಟಾಯ್ತು. ಮುಂದೆ ನನಗೆ ಕಿರುಕುಳ ಕೊಡಲಾರಂಭಿಸಿದರು. ವಿ.ವಿ. ದ ಹಿರಿಯ ಅಧಿಕಾರಿಗಳಿಗೆ ನನ್ನ ಬಗ್ಗೆ ಇಲ್ಲದ ಸಲ್ಲದ ದೂರು ಕೊಡಲಾರಂಭಿಸಿದರು. ನನ್ನನ್ನು ಆ ಹುದ್ದೆಯಿಂದ ವಜಾ ಮಾಡಬೇಕೆಂಬ ಅವರ ಹುನ್ನಾರಕ್ಕೆ ಅವರು ಕಿವಿಗೊಡದಿದ್ದು ನಿರಾಶರಾಗಿ, ನಾನಾಗಿಯೇ ರಾಜಿನಾಮೆ ಕೊಡಬೇಕೆಂದು ಒತ್ತಡ ಹೇರಿದರು. ಆದರೆ ನಾನು ಅವರು ನಿವೃತ್ತಿಯಾಗುವವರೆಗೆ ರಾಜಿನಾಮೆ ಕೊಡುವುದಿಲ್ಲ ಎಂದು ಹೇಳಿ ತಿರಸ್ಕರಿಸಿದೆ. ಮತ್ತೆ ತಣ್ಣಗಾದರು. ಇದೊಂದು ಮಾತ್ರ ನನಗಾದ ಕಹಿ ಅನುಭವ.

ಅಣ್ಣಾಮಲೈ ವಿ. ವಿ.ದ ತಮಿಳು ಪ್ರೊಫೆಸರರು ಟಿ. ಪಿ. ಮೀನಾಕ್ಷಿ ಸುಂದರಂ ನನ್ನ ಸಂಶೋಧನೆಯ ಮಾರ್ಗದರ್ಶಕ ಗುರುಗಳು. ತಮ್ಮ ಜನರಿಗಿಂತ ಹೆಚ್ಚು ನನ್ನಲ್ಲಿ ಮಮತೆಯಿಟ್ಟಿದ್ದವರು. ನನ್ನ ಪ್ರಗತಿಗೆ ದಾರಿ ತೋರಿದ ಹಿರಿಯರು. ಮುಂದೆ ಮಧುರೈ ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲರ್ ಆದವರು. ಅವರಂಥ ವಿಶಾಲ ಹೃದಯಿಗಳು ಅಪರೂಪ. ಅವರನ್ನು ನೆನೆಯುವುದರಲ್ಲಿ ನನಗೆ ತುಂಬ ಸಂತೋಷ.

*ಪ್ರ : ಕರ್ನಾಟಕದಲ್ಲಿ ತಮಿಳುನಾಡಿನ ವಿರುದ್ಧ ಚಳುವಳಿಗಳು ನಡೆದ ಸಂದರ್ಭಗಳಲ್ಲಿ ತಮಿಳುನಾಡಿನಲ್ಲಿ ಕನ್ನಡಿಗರ ಸ್ಥಿತಿಗತಿಗಳೇನಾದರೂ ಮುಗ್ಗಟ್ಟಿಗೆ ಸಿಲುಕುತ್ತಿದ್ದುವೆ ? ಇಂತಹ ಸನ್ನಿವೇಶಗಳಿಗೆ ಪರಿಹಾರವೇನು ?*

ಉ : ಇಂತಹ ಪ್ರಸಂಗ ನನ್ನ ಗಮನಕ್ಕೆ ಬಂದಿಲ್ಲ. ಕೆಳಗಿನ ಸ್ತರಗಳಲ್ಲಿ ಏನಾದರೂ ನಡೆದಿವೆಯೋ ಏನೋ. ರಾಜಕುಮಾರ ಸಿನೆಮ ಗುಂಪಿಗೆ ಊಟಿಯಲ್ಲೇನೋ ತೊಂದರೆಯಾಗಿತ್ತೆಂದು ಪತ್ರಿಕೆಯ ವರದಿ ಬಂದಿತ್ತೆಂದು ಕಾಣುತ್ತದೆ. ಆದರೆ ಎಂದೂ ವಿಕೋಪಕ್ಕೆ ಎಡೆಯಾದುದಿಲ್ಲ. ಕನ್ನಡಿಗರು ಮದ್ರಾಸಿನಲ್ಲಿ ಸ್ಥಳೀಯ ಪರಿಸ್ಥಿತಿಯನ್ನು ಹೊಂದಿಕೊಂಡೇ ಹೋಗುತ್ತಿದ್ದಾರೆ ಎಂಬುದರಿಂದಲೂ ಇತರರು ಅವರನ್ನು ವಿರೋಧಿಸುವುದಿಲ್ಲ. ಎರಡು ಕರ್ನಾಟಕ ಸಂಘದ ಶಾಲೆಗಳು ಒಳ್ಳೆ ಕೆಲಸ ಮಾಡುತ್ತಿವೆ. ಅವಕ್ಕೆ ಸರಕಾರದ ಮಾನ್ಯತೆಯೂ ದೊರಕಿದೆ.

*ಪ್ರ : ಮದ್ರಾಸ್ ವಿಶ್ವವಿದ್ಯಾನಿಲಯವು ಬಹು ಹಿಂದೆ ಅನೇಕ ಮೌಲಿಕ ಕನ್ನಡ ಗ್ರಂಥಗಳನ್ನು ಪ್ರಕಟಿಸಿತ್ತು. ಅಂತಹ ಕಾರ್ಯಕ್ರಮದ ಮುಂದುವರಿಕೆಯ ಸಾಧ್ಯತೆಗಳೇನಾದರೂ ಇವೆಯೆ ?*

ಉ : ಮೌಲಿಕ ಗ್ರಂಥಗಳು ಬಹು ಹಿಂದೆ ಮಾತ್ರವಲ್ಲ, ಇತ್ತೀಚಿನವರೆಗೂ ಪ್ರಕಟವಾಗಿವೆ (ನೋಡಿ : 'ಸಾರ್ಥಕ.' ದಿ॥ ಮರಿಯಪ್ಪ ಭಟ್ಟರ ಸಂಸ್ಮರಣ ಗ್ರಂಥ). ಕನ್ನಡ ವಿಭಾಗದಲ್ಲಿ ಇತರ ವಿಭಾಗಗಳಿಗಿಂತ ಹೆಚ್ಚು ಪುಸ್ತಕಗಳು ಪ್ರಕಟಗೊಂಡಿರುವುದರಿಂದ ಈಗ ಬೇರೆ ವಿಭಾಗಗಳಿಗೆ ಧನ ಸಹಾಯ ನೀಡಬೇಕಾಗಿದೆಯೆಂದು ವಿ. ವಿ.ದ ಅಧಿಕಾರ ವರ್ಗ ಯೋಚಿಸಿದ್ದರಿಂದ ಮೊದಲಿನಷ್ಟು ವೇಗವಾಗಿ ಪುಸ್ತಕಗಳನ್ನು ಪ್ರಕಟಿಸಲು ಸಾಧ್ಯವಿಲ್ಲದಾಗಿದೆ. ಆದರೂ ಒಳ್ಳೆಯ ಸಂಶೋಧನಾ ಗ್ರಂಥಗಳು ಸಿದ್ಧವಾದರೆ ಪ್ರಕಟಣೆ ಸಾಧ್ಯ. ಇದು ವಿಭಾಗದ ಅಧ್ಯಾಪಕರನ್ನು ಹೊಂದಿಕೊಂಡಿದೆ.

*ಪ್ರ : ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿರುವ ಕನ್ನಡ ಅಧ್ಯಯನ ಕೇಂದ್ರವು ಮುಖ್ಯವಾಗಿ ಕೈಗೊಳ್ಳುವ ಕೆಲಸಗಳೇನು ? ಅಲ್ಲಿನ ಇತ್ತೀಚಿನ ಸಂಶೋಧನೆಗಳ ಬಗ್ಗೆ ಬೆಳಕು ಚೆಲ್ಲುವಿರಾ ?*

ಉ : ವಿಭಾಗದಲ್ಲಿ ಎಂ.ಎ., ಎಂ.ಫಿಲ್. ಮತ್ತು ಪಿಹೆಚ್.ಡಿ. ಕಾರ್ಯಕ್ರಮಗಳಿವೆ. ಅಧ್ಯಾಪಕರ ಸಂಖ್ಯೆ ಈ ಎಲ್ಲ ಕಾರ್ಯಗಳನ್ನು ನಿಭಾಯಿಸುವಷ್ಟು ಸಂಖ್ಯೆಯಲ್ಲಿ ಇಲ್ಲದಿರುವುದರಿಂದ ಬೋಧನಾ ಕಾರ್ಯದ ಕೆಲಸದ ಒತ್ತಡ ಪ್ರತಿಯೊಬ್ಬರಿಗೂ ಅಧಿಕವಾಗಿದೆ. ಹೀಗಾಗಿ ಸಂಶೋಧನಾ ಕಾರ್ಯಕ್ಕೆ, ಗ್ರಂಥ ರಚನೆಗೆ ಸಮಯವೇ ಇಲ್ಲದಂತಾಗಿದೆ. ಹಾಗಾಗಿ ಸದ್ಯ ಇಷ್ಟೇ ಕಾರ್ಯ ಮುಂದುವರಿಯುವುದು ಅನಿವಾರ್ಯವಾಗಿದೆ.

*ಪ್ರ : ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳ ಜೊತೆ ಮದ್ರಾಸ್ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪರಸ್ಪರ ಸಂಬಂಧಗಳ ಬಗ್ಗೆ ವಿವರಣೆ ನೀಡಬೇಕೆಂದು ಕೇಳಿಕೊಳ್ಳಬಹುದೆ ?*

ಉ : ಅಧ್ಯಯನ ಮಂಡಲಿ, ಪರೀಕ್ಷಾ ಮಂಡಲಿಗಳ ಪರಸ್ಪರ ಸದಸ್ಯತ್ವ ಕರ್ನಾಟಕದ ಇತರ ಕನ್ನಡ ವಿಭಾಗಗಳೊಂದಿಗೆ ನಡೆಯುತ್ತವೆ. ಅಲ್ಲದೆ ವಿಚಾರ ಸಂಕಿರಣ ಸಮ್ಮೇಳನಗಳು ನಡೆದಾಗ ಅದರಲ್ಲಿ ಭಾಗವಹಿಸುವುದೂ ಇದೆ. ಮೈಸೂರು, ಬೆಂಗಳೂರು ಮತ್ತು ಧಾರವಾಡದ ಕರ್ನಾಟಕ – ಈ ಮೂರು ವಿ. ವಿ.ಗಳು ನನ್ನ ಗ್ರಂಥಗಳನ್ನು ಪ್ರಕಟಿಸಿವೆ. ಎಂ. ಎಂ. ಕಲಬುರ್ಗಿಯವರ ಪುಸ್ತಕವೊಂದು ಮದ್ರಾಸು ವಿ.ವಿ.ದಿಂದಲೂ ಪ್ರಕಟವಾಗಿದೆ. ಇದರಿಂದಲೂ ಈ ವಿಭಾಗಗಳ ಪರಸ್ಪರ ಸೌಹಾರ್ದ ಸನ್ನಿವೇಶ ವ್ಯಕ್ತವಾಗುತ್ತದೆ.

*ಪ್ರ : ಕನ್ನಡ - ಕರ್ನಾಟಕದ ಇಂದಿನ ತುರ್ತು ಆದ್ಯತೆಗಳ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿಸುತ್ತೀರಾ ?*



ಪ್ರೊಫೆಸರರಿಗೆ ಪ್ರಿಯವಾದ ಪಯಸ್ವಿನಿ

ಉ : ಕನ್ನಡ - ಕರ್ನಾಟಕದ ತುರ್ತು ಆದ್ಯತೆಯೆಂಬುದರ ಕಲ್ಪನೆ ನನಗಿಲ್ಲ. ಆದರೂ ಕನ್ನಡದ ಸೋದರಿ ಭಾಷೆಗಳ ಸಾಹಿತ್ಯ, ಸಾಂಸ್ಕೃತಿಕ ವಿಚಾರಗಳ ತಿಳಿವು ಕನ್ನಡಿಗರಿಗೂ, ಕನ್ನಡದ ತಿಳಿವು ಇತರರಿಗೂ ಆಗಬೇಕಾದುದು ಅಗತ್ಯ. ಅದರಿಂದ ಪರಸ್ಪರ ಸ್ನೇಹ ಸೌಹಾರ್ದಗಳು ವರ್ಧಿಸುತ್ತವೆ. ಇದಕ್ಕೆ ಉತ್ತಮ ಸಾಹಿತ್ಯ ಕೃತಿಗಳ ಅಧಿಕೃತ ಅನುವಾದಗಳು ಕನ್ನಡ ಮಾತ್ರವಲ್ಲ ಇತರ ಭಾಷೆಗಳಲ್ಲೂ ನಡೆಯಬೇಕು. ಪ್ರತಿ ವಿಶ್ವವಿದ್ಯಾನಿಲಯಗಳಲ್ಲಿ ಈ ರೀತಿಯ ಭಾಷಾಂತರ ವಿಭಾಗಗಳ ರಚನೆಯಾಗಬೇಕು. ಸರಕಾರಕ್ಕೇ ಈ ಎಲ್ಲ ಭಾರ ವಹಿಸಲು ಸಾಧ್ಯವಾಗದು. ಇದಕ್ಕೆ ನಾಡಿನಲ್ಲಿರುವ ಶ್ರೀಮಂತ ಮಠ-ಮಾನ್ಯಗಳು ಮನಸ್ಸು ಮಾಡಬೇಕು. ಅಥವಾ ಇತರ ಶ್ರೀಮಂತ ಕಂಪೆನಿಗಳು, ವ್ಯಕ್ತಿಗಳು ಮನಸ್ಸು ಮಾಡಿ, ಈ 'ಜ್ಞಾನಯಜ್ಞ' ಕಾರ್ಯವನ್ನು ಆರಂಭಿಸಬೇಕು

ಕುತ್ಯಾಳ ನಾಗಪ್ಪ ಗೌಡ (ಕಿರಣ)
ಕಿರಣ ಕುಟೀರ, ಸುಳ್ಯ-೫೭೪ ೨೩೯

ಎಚ್ ಎಮ್ ಟಿ
ಬಹುಮಾನಿತ ಲೇಖನ




# ಗುಲಾಮಗಿರಿ ಕಳಚಿದ ಬಗೆ, ಬಿಳಿಚಿದ ಭೀಮೆಯ ನಗೆ

ಡಿ. ಎಂ. ನದಾಫ ಮಾತೋಳಿ

ಸ್ವಾತಂತ್ರ್ಯ ಪೂರ್ವದಲ್ಲಿ ಆಂಗ್ಲರ ಆಡಳಿತದಲ್ಲಿದ್ದ ಸಿಂದಗಿ, ಇಂಡಿ ತಾಲ್ಲೂಕುಗಳನ್ನು ಪಶ್ಚಿಮದಲ್ಲಿಯೂ, ನಿಜಾಮ್ ಆಡಳಿತದ ಮರಾಠಿ ಭಾಷೆಯ ಪ್ರಭಾವವುಳ್ಳ ಅಕ್ಕಲಕೋಟ ತಾಲ್ಲೂಕನ್ನು ಉತ್ತರದಲ್ಲಿಯೂ, ಪೂರ್ವ ಭಾಗದಲ್ಲಿ ಹೈದ್ರಾಬಾದ್ ಸಂಸ್ಥಾನಕ್ಕೆ ಒಳಪಟ್ಟ ಗುಲಬರ್ಗಾ ನಗರವನ್ನೂ ಹೊಂದಿದ್ದ ಇಂದಿನ ಅಫಜಲಪೂರ ತಾಲ್ಲೂಕಿನ ಸುಮಾರು ೯೧ ಹಳ್ಳಿಗಳ ವಿಶಾಲ ಪ್ರದೇಶದಲ್ಲಿ ಅಪಾರವಾದ ಐತಿಹಾಸಿಕ, ಶಿಲ್ಪ ಸೌಂದರ್ಯದ ಸ್ಥಳಗಳು ಸಂಶೋಧನೆಗೆ ಸವಾಲಾಗಿ ನಿಂತಿವೆ. ಉತ್ತರದಲ್ಲಿ ಹೈದರಾಬಾದಿನಿಂದ ಮುಂಬೈಗೆ ಹೋಗುವ ರೈಲು ಹಳಿಗಳ ಆಸುಪಾಸಿನಲ್ಲೇ ಮಹಾರಾಷ್ಟ್ರದ ಗಡಿಯಿಂದ ಬೇರ್ಪಡುವ ಅಫಜಲಪೂರ ತಾಲ್ಲೂಕಿಗೆ ಈ ರೈಲು ಹಳಿಗಳು ಉತ್ತರದ ಮೇರೆಗಳಾಗಬಹುದು. ಈ ಭಾಗದಲ್ಲಿ ಒಂದೇ ಹಳ್ಳಿ ಅರ್ಧ ಮಹಾರಾಷ್ಟ್ರ ಗಡಿಯಲ್ಲಿಯೂ ಇನ್ನರ್ಧ ಕರ್ನಾಟಕ ಭಾಗದಲ್ಲಿಯೂ ಇರುವುದು ಗಡಿಭಾಗದ ವಿಸ್ಮಯ ಸಂಗತಿಗಳಲ್ಲಿ ಒಂದಾಗಿದೆ. ದಕ್ಷಿಣದಲ್ಲಿರುವ ಭೀಮಾನದಿ ವಿಜಾಪೂರ ಜಿಲ್ಲೆಯಿಂದ ಅಫಜಲಪೂರ ತಾಲ್ಲೂಕನ್ನು ಬೇರ್ಪಡಿಸುತ್ತದೆ. ಭಾಷಾವಾರು ಪ್ರಾಂತಗಳ ವಿಂಗಡಣೆ ಕಾಲದಲ್ಲಿ ಈ ರೀತಿಯ ಭೌಗೋಳಿಕ ಚೌಕಟ್ಟು ಪಡೆದುಕೊಂಡ ಅಫಜಲಪೂರದ ಸಂಪೂರ್ಣ ಭೂಭಾಗ ಮತ್ತು ರಾಜ್ಯಾಡಳಿತ ೧೯೪೮ರ ಸೆಪ್ಟೆಂಬರ್ ೧೮ರವರೆಗೆ ಹೈದರಾಬಾದ್ ನಿಜಾಮನ ಪದತಲಕ್ಕೆ ಅರ್ಪಿಸಿಕೊಂಡಿತ್ತು. ಅಂದಿನ ಹುಮನಾಬಾದ್ ಅಫಜಲಪೂರ ಪ್ರದೇಶಕ್ಕೆ ತಾಲ್ಲೂಕಾದರೆ ಲೂತೂರ್ ಜಿಲ್ಲೆಯಾಗಿತ್ತು. ಅಫಜಲಪೂರ ಹೋಬಳಿಯ ಜೊತೆಗೆ ಮಣ್ಣೂರ-ಮಾಶಾಳ, ದೇವಲ ಗಾಣಗಾಪೂರ ಹೋಬಳಿಗಳು ಹುಮ್ನಾಬಾದ್ ತಾಲ್ಲೂಕಿಗೆ ಸಂಬಂಧಪಟ್ಟಿದ್ದವು. ಇಂದಿನ ಅಫಜಲಪೂರ ಪ್ರದೇಶದ ವ್ಯಾಜ್ಯಗಳೆಲ್ಲವೂ ರೇವೂರ(ಬಿ) ಪೊಲೀಸ್ ಠಾಣೆಯಲ್ಲಿ ದರ್ಜ ಆಗಿ ಉರ್ದುವಿನಲ್ಲಿ ತೀರ್ಪು ಪ್ರಕಟವಾಗುತ್ತಿದ್ದುವು. ಆದರೆ ಸಾಮಾನ್ಯ ಜನರು ಇತ್ತ ಉರ್ದು ಕಲಿಯಲಾಗದೇ ಕನ್ನಡ ಬಿಡಲಾಗದೇ ತಮ್ಮ ಪಶುಗಳ ವ್ಯವಹಾರ, ವಾಣಿಜ್ಯ (ಅಡತ) ವ್ಯವಹಾರ, ಗ್ರಾಮೀಣ ಭಾಗದ ಆಸ್ತಿ ವ್ಯವಹಾರ (ಹೊಲ ಮನೆ ಖರೀದಿ, ಅಡವು, ಕರಾರು ಪತ್ರ ಮುಂತಾದವು)ಗಳನ್ನು ಮರಾಠಿ ಭಾಷೆಯಲ್ಲಿ ನಡೆಸಿ ಅದನ್ನು ಮೋಡಿ ಲಿಪಿಯಲ್ಲಿ ದಾಖಲಿಸಿ ಇಡುತ್ತಿದ್ದರು. ಇದು ಬಹುಶಃ ೧೯೮೦ರವರೆಗೂ ಈ ಭಾಗದಲ್ಲಿ ಚಾಲ್ತಿಯಲ್ಲಿರುವ ಶ್ರೀಸಾಮಾನ್ಯ ಆಡಳಿತ ವೈಖರಿಯಾಗಿತ್ತು. ಗೋಕಾಕ್ ಚಳುವಳಿಯ ನಂತರ ಮತ್ತು ಕನ್ನಡ ಮಾಧ್ಯಮದಲ್ಲಿ ಓದಿದ ಯುವ ಜನಾಂಗ ಕರ್ನಾಟಕ ಸರ್ಕಾರದಲ್ಲಿ ನೌಕರಿ ಸೇರಿದ ನಂತರ ಕನ್ನಡ ಭಾಷೆ ಬಳಕೆಗೆ ಬಂದದ್ದು. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಮೂರನೆಯ ಎರಡು ಭಾಗ ಸ್ಥಳೀಯ ಸಂಸ್ಥಾನಿಕರ ಕೈಯಲ್ಲಿತ್ತು. ದೇಶದ ೫೯೬ ಸಂಸ್ಥಾನಗಳ ರಾಜರು ಬ್ರಿಟಿಷರಿಂದ ನಿಯಂತ್ರಿಸಲ್ಪಡುತ್ತಿದ್ದರು. ಅವುಗಳಲ್ಲಿ ಬ್ರಿಟಿಷರೊಂದಿಗೆ ಅತ್ಯಂತ ಸಖ್ಯದೊಂದಿಗೆ, ವ್ಯವಹಾರ ಸಂಬಂಧಗಳೊಂದಿಗೆ ಬ್ರಿಟಿಷರ ಹತ್ತಿರದ ಮಿತ್ರತ್ವ ಪಡೆದಿದ್ದ ವಿಶಾಲ ಹಾಗೂ ಶ್ರೀಮಂತ ಸಂಸ್ಥಾನ ಹೈದರಾಬಾದ್ ನಿಜಾಮನದ್ದು. ಬ್ರಿಟಿಷ್ ಪ್ರತಿನಿಧಿ ರೆಸಿಡೆಂಟ್ ಬಹಾದ್ದೂರ್‌ನನ್ನು ಆಡಳಿತ ಸಲಹೆಗಾರನಾಗಿ ಇಟ್ಟುಕೊಂಡಿದ್ದ ನಿಜಾಮ ದೊರೆ ಮೀರ್ ಉಸ್ಮಾನ್-ಅಲಿಖಾನ್ ಬಹಾದ್ದೂರ್ ೨೬ನೇ ಜೂನ್ ೧೯೪೭ರಂದು ಹೈದ್ರಾಬಾದ್ ರಾಜ್ಯದ ಸ್ವತಂತ್ರ ದೊರೆ ಎಂದು ಘೋಷಿಸಿಕೊಂಡನು. ಅಂದಿನಿಂದ ೧೮-೯-೧೯೪೮ರವರೆಗೆ, ನಂತರ ಭಾಷಾವಾರು ಅಖಂಡ ಕರ್ನಾಟಕ ನಿರ್ಮಾಣಕ್ಕಾಗಿ ಹೈದರಾಬಾದ್ ಕರ್ನಾಟಕದ ಜನತೆ ಮಾಡಿದ ತ್ಯಾಗ ಬಲಿದಾನಗಳು ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಕ್ಕೆ ಸ್ಫೂರ್ತಿಯಾಗಬಲ್ಲವು ಎಂದರೆ ಉತ್ಪ್ರೇಕ್ಷೆ ಎನಿಸಬಹುದು. ಆದರೆ ಇಲ್ಲಿನ ಜನರ ಪಾಡು ಕಣ್ಣಾರೆ ಕಂಡವರಿಗೆ ಇದು ಅತಿಶಯೋಕ್ತಿಯೆನಿಸದು.

**ಇಂಥ ಮಹಾನ್ ಸಂಘರ್ಷದಲ್ಲಿ ಈ ಭಾಗದ ಪ್ರತಿ ಗ್ರಾಮದ ಪ್ರತಿನಿಧಿಗಳು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಭಾಗವಹಿಸಿದ್ದು ಸಹಜವಾಗಿದೆ. ಹೇಳಲು ಗ್ರಾಮವೊಂದಕ್ಕೆ ಗಾಥೆಯಾಗಬಹುದು.** ಹೈದರಾಬಾದ್ ಕರ್ನಾಟಕದ ವಿಮೋಚನೆಯ ಹೋರಾಟದ ದೀಪ ಹೊತ್ತಿದ್ದೇ ಅಫಜಲಪೂರ ಪ್ರದೇಶದಲ್ಲಿ ಎಂದರೆ ಸತ್ಯವಾದ ಮಾತಾದೀತು. ಹೈದರಾಬಾದ್ ಕರ್ನಾಟಕ ವಿಮೋಚನೆಗಾಗಿ ತನ್ನ ಬದುಕೆಲ್ಲ ದುಡಿದ ಮಹಾನುಭಾವರಾದ ಸ್ವಾಮಿ ರಮಾನಂದ ತೀರ್ಥರು ಹುಟ್ಟಿದ್ದು ಅವರ ತಾಯಿಯ ತವರು ಮನೆಯಾದ ಅಫಜಲಪೂರ ತಾಲ್ಲೂಕಿನ ಚಿನ್ಮಯಗಿರಿಯಲ್ಲಿ. ೧೯೩೮ರಲ್ಲಿ ಮುಂಚೂಣಿಗೆ ಬಂದ 'ವಂದೇಮಾತರಂ' ಚಳುವಳಿಗೆ ಬಾಲ ಗಂಗಾಧರ ತಿಲಕ್ ಮತ್ತು ಹರಡೇಕರ್ ಮಂಜಪ್ಪನವರು, ಪಂಡಿತ ತಾರಾನಾಥರು ಕೊಟ್ಟ ನಿಯೋ-ನ್ಯಾಷನಲಿಸಂ, ಸತ್ಯಾಗ್ರಹ ಸಿದ್ಧಾಂತ ಮುಂತಾದ ಸೈದ್ಧಾಂತಿಕ ಕಾರ್ಯಸೂಚಿಗಳು ಸ್ಫೂರ್ತಿಯಾಗಿದ್ದವು. ಅದೇ ಸಂದರ್ಭದಲ್ಲಿ ರಾಜ್ಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸ್ವಾಮಿ ರಮಾನಂದ ತೀರ್ಥರ ನಾಯಕತ್ವ ಮತ್ತು ಆರ್ಯ ಸಮಾಜ ಹಾಗೂ ಕೆಲವು ಇತರ ಸಂಸ್ಥೆಗಳು ಜನರ ರಾಷ್ಟ್ರೀಯ ಭಾವನೆಗಳನ್ನು ಜಾಗೃತಗೊಳಿಸಿ ನಡೆಸಿದ ಸತ್ಯಾಗ್ರಹಗಳು ಜನರಲ್ಲಿ ಒಕ್ಕೂಟ ಮತ್ತು ರಾಷ್ಟ್ರದ ತುರ್ತನ್ನು ಮನಗಾಣಿಸಿದವು. ಇದನ್ನು ಕಂಡ ರಜಾಕಾರರು, ನಿಜಾಮನು ಮುಸ್ಲಿಂ ಪ್ರಪಂಚದ ಅನಭಿಷಿಕ್ತ ದೊರೆ ಎಂದು ಶಸ್ತ್ರಾಸ್ತ್ರಗಳ ಮೂಲಕ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಲು ಸನ್ನದ್ಧರಾದರು. ಇದೇ ಸಂದರ್ಭದಲ್ಲಿ ಅಫಜಲಪೂರ ಭಾಗಕ್ಕೆ ಭೂಗತರಾಗಿ ಸುಭಾಷ್ ಚಂದ್ರ ಬೋಸರ ಆಜಾದ ಹಿಂದ್ ಫೌಜ್‌ನಲ್ಲಿ ತರಬೇತಿ ಪಡೆದ ಯೋಧರು ರಾಷ್ಟ್ರೀಯ ಚಳುವಳಿಗಾಗಿ ಕ್ರಿಯಾಶೀಲರಾಗಿದ್ದಾರೆ ಎಂಬ ವದಂತಿಗಳನ್ನು ನಂಬಿದ ನಿಜಾಂ ಸರಕಾರ, ಗಾಂಧೀಟೋಪಿ ಧರಿಸಿದವರನ್ನೆಲ್ಲ ದಸ್ತಗಿರಿ ಮಾಡಿ ವಿಚಾರಣೆ ನಡೆಸತೊಡಗಿತು. ಇದರ ಪರಿಣಾಮವಾಗಿ ಸಾವಿರಾರು ಜನ ಕಾಂಗ್ರೆಸ್ ಕಾರ್ಯಕರ್ತರು ರಾತ್ರೋರಾತ್ರಿ ಭೀಮಾ ನದಿ ದಾಟಿ ಇಂಗ್ರೇಜಿ ಆಡಳಿತವಿರುವ ಪ್ರದೇಶಕ್ಕೆ ಗಡಿಪಾರು ಮಾಡಿಕೊಂಡರು. ಇದರಲ್ಲಿ ಭೋಸಗಾ, ಉಡಚಾಣಹಟ್ಟಿ, ಕರಜಗಿ, ಮಣ್ಣೂರ, ಮಾಶಾಳ ಗ್ರಾಮಗಳ ವಾಸಸ್ಥರು ಪ್ರಮುಖವಾಗಿ ತೊಂದರೆಗೊಳಗಾದರು. ಇದೇ ಸಂದರ್ಭದಲ್ಲಿ, ಅಂದರೆ ೧೯೪೮ರಲ್ಲಿ ಆಳಂದ, ಹುಮನಾಬಾದ್‌ಗಳಲ್ಲಿ ನಿಜಾಂ ಪ್ರಭುತ್ವವನ್ನು ಧಿಕ್ಕರಿಸಿದ ಜನರು 'ಅಸಫಜಾ' ಧ್ವಜವನ್ನು ಕೆಳಗಿಳಿಸಿ ತ್ರಿವರ್ಣ ಧ್ವಜವನ್ನು ಹಾರಿಸಿದರು. ಈ ಯಶಸ್ವೀ ಚಳುವಳಿಯಲ್ಲಿ ಭಾಗವಹಿಸಿದ ಪ್ರಮುಖರನ್ನೆಲ್ಲ ಬಂಧಿಸಿ ವಿಚಾರಣೆಗೊಳಪಡಿಸಲಾಯಿತು. ಇಂಥ ಸಂದರ್ಭದಲ್ಲಿ ಬಂಧಿಯಾದವರನ್ನು ನಿಜಾಮ್ ರಾಜ್ಯದಾದ್ಯಂತ ವಿವಿಧೆಡೆ ೩೫ ಜೈಲುಗಳಲ್ಲಿ ಇರಿಸಲಾಯಿತು. ೮x೬ ಆಕಾರದ ಸಣ್ಣ ಸೆಲ್‌ಗಳಲ್ಲಿ ಹತ್ತಾರು ಜನರನ್ನು ತುರುಕಿ ಸ್ವಾತಂತ್ರ್ಯ ಯೋಧರನ್ನು ನರಕ ಯಾತನೆ ಅನುಭವಿಸುವಂತೆ ಮಾಡಿದ ಘಟನೆಗಳನ್ನು ಇಲ್ಲಿನ ಸ್ವಾತಂತ್ರ್ಯ ಯೋಧರು ಈಗಲೂ ನೆನಪಿಸಿಕೊಳ್ಳುತ್ತಾರೆ. ಇದೇ ಸಂದರ್ಭದಲ್ಲಿ ಉಡಚಾಣಾ ಹಟ್ಟಿಯ ತುಕಾರಾಮ ರಾಮಚಂದ್ರ ಕಾಳೆಯವರು ಸೋಲಾಪೂರದ ಬಟ್ಟೆ ಗಿರಣಿಯ ಕಾರ್ಮಿಕನಾಗಿ ಭೂಗತ

ಸ್ವಾತಂತ್ರ್ಯ ಚಟುವಟಿಕೆಯಲ್ಲಿ ತೊಡಗಿದ್ದಾಗ ನಿಜಾಂ ಸೇನಾಧಿಕಾರಿಯ ಗುಂಡೇಟಿಗೆ ಗುರಿಯಾದರು. ಅದೃಷ್ಟವಶಾತ್ ಕಾಲಿಗೆ ಗುಂಡು ತಗುಲಿ ಬದುಕುಳಿದರು. ಮಾತೋಳಿಯ ರೇವಣಸಿದ್ದಪ್ಪ ಕುಂಬಾರ, ಸೋಲಾಪೂರದಿಂದ ಗಡಿಪಾರಾಗಿ ಇಂಗ್ರೇಜ್ ಪ್ರದೇಶ ಸೇರಿದರು. ಅಫಜಲಪೂರದಿಂದ ಸುಮಾರು ೩೦ಕಿ.ಮೀ. ಉತ್ತರಕ್ಕಿರುವ ಮೈಂದರ್ಗಿಯಲ್ಲಿ ಶಿಬಿರವನ್ನು ಸ್ಥಾಪಿಸಲಾಯಿತು. ಅದರಂತೆ ಗಾಣಗಾಪೂರದ ಹತ್ತಿರದಲ್ಲಿರುವ ಇಟಗಾ ಗ್ರಾಮದಲ್ಲಿ ೧೯೪೮ರಲ್ಲಿ ಸ್ಥಾಪಿತವಾದ ಸ್ವಾತಂತ್ರ್ಯ ಹೋರಾಟಗಾರರ ಶಿಬಿರದಲ್ಲಿ ಸುಮಾರು ೨೦ ಹಳ್ಳಿಗಳನ್ನು ಕಾಂಗ್ರೆಸ್ ಕಾರ್ಯಕರ್ತರು ವಹಿಸಿಕೊಂಡು ಗ್ರಾಮ ರಾಜ್ಯವನ್ನು ಸ್ಥಾಪಿಸಿದರು. ಸಿಂದಗಿ, ದುಧನಿಗಳು ಅಫಜಲಪೂರಕ್ಕೆ ಹತ್ತಿರದ ಶಿಬಿರ ಕೇಂದ್ರಗಳಾಗಿದ್ದವು. ಸರದಾರ್ ಶರಣ ಗೌಡ, ಇನಾಮ್‌ದಾರ, ದತ್ತಾತ್ರೇಯರಾವ್ ಅವರಾದಿ ಮತ್ತು ಚಂದ್ರಶೇಖರ ಪಾಟೀಲ ಈ ಶಿಬಿರಗಳ ಶಿಬಿರಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅಫಜಲಪೂರ ನಗರದಲ್ಲಿ ನಿಜಾಂ ಸೇನೆ ಜಮಾವಣೆಯಾಗಿತ್ತು. ನಿಜಾಂ ಸೈನಿಕರನ್ನು ಎದುರಿಸಲು ಅಫಜಲಪೂರ ಮತ್ತು ದೇವಣಗಾಂವದ ಮಧ್ಯ ಹರಿಯುವ 'ಭೀಮಾ' ದಡದಲ್ಲಿ ಗುಂಡಿನ ಸುರಿಮಳೆ ನಡೆಯಿತು. ಅಫಜಲಪೂರದ ಮೇಲಿನ ಸೇನಾ ಜಮಾವಣೆ ಚದುರಿಸಲು ಸಿಂದಗಿ ಶಿಬಿರಾರ್ಥಿಗಳು ದೇವಣಗಾಂವ ದಡದಿಂದ ಗುಂಡಿನ ಸುರಿಮಳೆಗೈದರು.



*ಹೈದರಾಬಾದ್ ವಿಮೋಚನಾ ಚಳುವಳಿಯ 'ಸಿಂದಗಿ' ಶಿಬಿರದವರು ನಡೆಸಿದ ಗುಂಡಿನ ಸುರಿಮಳೆಯಿಂದ ಅಂದು ಜಖಂಗೊಂಡಿರುವ ಅಫಜಲಪೂರದ 'ಮಸ್ಜೀದ್ ಮಹಲ್'*

**೧೯೪೮ರಲ್ಲಿ ನಡೆದ 'ಚಳುವಳಿ' ಸೇನಾ ಕಾರ್ಯಾಚರಣೆ ಈ ಭಾಗದಲ್ಲಿ ಒಂದು ಐತಿಹಾಸಿಕ ಮೈಲಿಗಲ್ಲು. ಭಾರತ-ಪಾಕಿಸ್ತಾನಗಳ ವಿಭಜನೆ ಉತ್ತರ ಭಾರತದ ಜನಜೀವನದ ಮೇಲೆ ಎಂಥ ಮರೆಯಲಾಗದ ಪ್ರಭಾವ ಬೀರಿದೆಯೋ ಅದರಷ್ಟೇ ಈ ಭಾಗದ ಜನ ಈ 'ಚಳುವಳಿ'ಯಿಂದ ಪ್ರಭಾವಿತರಾಗಿದ್ದಾರೆ. ಆದರೆ 'ಕರ್ನಾಟಕ ಇತಿಹಾಸ' ಎಂದು ಬರೆಯುವ ಶಾಲಾ ಪಠ್ಯಕ್ರಮಗಳಲ್ಲಿ ಮಾತ್ರ ಒಂದು ಪ್ಯಾರಾಗ್ರಾಫ್‌ನಷ್ಟು ಸ್ಥಾನವನ್ನೂ ಈ ಪ್ರಸಂಗ ಸ್ಥಾನ ಪಡೆದಿಲ್ಲವೆನ್ನುವುದು ಮಾತ್ರ ಚಿಂತನೆಗೀಡುಮಾಡುವ ವಿಷಯವಾಗಿದೆ.** "ಒಂದು ಯುದ್ಧ ಮುಗಿದು ಮತ್ತೊಂದು ಯುದ್ಧ ಆರಂಭಗೊಳ್ಳುವ ಮಧ್ಯದ ಕಾಲಾವಧಿಯೇ ಶಾಂತಿ ಸಮಯ" ಎಂದು ಹೇಳಲಾಗುತ್ತದೆ. ಹೈದರಾಬಾದ್ ಕರ್ನಾಟಕ ವಿಮೋಚನಾ 'ಚಳುವಳಿ'ಯೂ ಕೂಡ 'ಶಾಂತಿ ಸಮಯಕ್ಕಾಗಿ' ಕಾದಿತ್ತು. ಆದರೆ ಒಂದು ಸಂಘರ್ಷಮಯ ಸನ್ನಿವೇಶವನ್ನು ಏಕಮುಖವಾಗಿ ಸ್ವೀಕರಿಸಲು ಆಗುವುದಿಲ್ಲ. ಸ್ವಾತಂತ್ರ್ಯ ಚಳುವಳಿಯ ನಾಯಕರೆಲ್ಲ ನಿಜಾಂ ಸರಕಾರದ ವಂಚನೆಯಿಂದ ಜೈಲಿನಲ್ಲಿರುವಾಗಲೇ ಸಮಯ ಸಾಧಕರು ನಡೆಸಿದ ದುಷ್ಕೃತ್ಯಗಳಿಂದಾಗಿ ಚಳುವಳಿ 'ಕೋಮು ದಳ್ಳುರಿ' ಸ್ವರೂಪ ಪಡೆಯುವ ಅಪಾಯ ಬಂದೊದಗಿತು. ಹೈದರಾಬಾದ್ ರಾಜ್ಯದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ರಜಾಕಾರರ ಹಾವಳಿ ಕ್ರೂರ ಸ್ವರೂಪ ಪಡೆಯುತ್ತಿರುವ ಅಪಾಯ ಕಂಡೊಡನೆ ದಿನಾಂಕ ೧೩ ಸೆಪ್ಟೆಂಬರ್ ೧೯೪೮ರಂದು ಉಪ-ಪ್ರಧಾನಿಗಳಾದ ಸರದಾರ ವಲ್ಲಭಬಾಯಿ ಪಟೇಲರು ಪೊಲೀಸ್ ಕಾರ್ಯಾಚರಣೆಗೆ ಆಜ್ಞೆ ಮಾಡಿದರು. ಜನರಲ್ ಚೌಧರಿಯವರ ನಾಯಕತ್ವದಲ್ಲಿ ಭಾರತೀಯ ಸೇನೆ ನಿಜಾಮ ರಾಜ್ಯವನ್ನು ೪ ದಿಕ್ಕಿನಿಂದ ದಾಳಿ ಮಾಡಿತು.

ಇದೇ ಸಮಯಕ್ಕಾಗಿ ಕಾಯುತ್ತಿದ್ದ ಸಮಾಜ ಘಾತುಕ ಶಕ್ತಿಗಳು ತಲೆಯೆತ್ತಿದ್ದವು. ಉತ್ತರದಿಂದ ಆಗಮಿಸಿದ ಸೈನಿಕ ಪಡೆಯನ್ನು ಗೊಂದಲಕ್ಕೀಡುಮಾಡಿ ತಮ್ಮ ವೈಯಕ್ತಿಕ ದ್ವೇಷ ಸಾಧಿಸುವುದಕ್ಕಾಗಿಯೇ ನಕಲಿ ಚಳುವಳಿಕಾರರು ಹಳ್ಳಿಗಳಲ್ಲೆಲ್ಲ ಹುಟ್ಟಿಕೊಂಡರು. ಹೊಲ ಮನೆಗಳ ಕ್ಷುಲ್ಲಕ ಜಗಳಗಳನ್ನೂ ಮುಂದುಮಾಡಿ ದ್ವೇಷ ಸಾಧಿಸ ತೊಡಗಿದರು. ಇದಕ್ಕೆ ಅಂದಿನ ಜಮೀನುದಾರರ ಕುಮ್ಮಕ್ಕು ತೀವ್ರವಾಗಿತ್ತು. ಹಲವಾರು ಜನ ರಜಾಕಾರರು ದಮನಕ್ಕೆ ಈಡಾದದ್ದು ಸಮರ್ಪಕವಾದ ಕಾರ್ಯವಾಗಿತ್ತು. **ಆದರೆ ರಜಾಕಾರರು ಕೇವಲ ಒಂದೇ ಕೋಮಿನವರಾಗಿರಲಿಲ್ಲ. ರಜಾ ಕಾರರದು ಪ್ರಭುತ್ವವನ್ನು ಬೆಂಬಲಿಸುವ ಸಂಘಟನೆಯೆಂದು ಅರಿತಿದ್ದ ಕೆಲವು ಸಮಾಜ ಘಾತುಕ ಶಕ್ತಿಗಳು ಕಾಸಿಂ ರಜವಿಯು ತಲೆ ತಪ್ಪಿಸಿಕೊಳ್ಳುವವರೆಗೆ ರಜಾಕಾರರಾಗಿಯೂ ನಂತರ ಚಳುವಳಿಕಾರರಾಗಿಯೂ ಮಾರ್ಪಟ್ಟರು.** ತಮ್ಮ ವ್ಯಕ್ತಿಗತ ದ್ವೇಷ ತೀರಿಸಿಕೊಳ್ಳಲು ಸೈನಿಕರಿಗೆ ಸಹಾಯ ಮಾಡುವ ನೆಪದಲ್ಲಿ ಅಮಾಯಕರನ್ನು ಬಲಿಪೀಠಕ್ಕೇರಿಸಿದರು. ಒಂದು ಕೋಮಿಗೆ ಸೇರಿದ ರಜಾಕಾರರಲ್ಲದವರನ್ನೂ ಸೇನಾ ಕಾರ್ಯಾಚರಣೆಗೆ ಗುರಿಮಾಡಿದರು. ಅಫಜಲಪೂರ ತಾಲ್ಲೂಕಿನ ಹೊಳೆ ಭಾಸಗಿ ಗ್ರಾಮದಲ್ಲಿ ದೌಲಾ, ಭಾಷಾ ಮತ್ತು ಸೈಫನ್ ಎಂಬುವರು ಈ ರೀತಿ ಸೇನಾ ಕಾರ್ಯಾಚರಣೆಗೆ ತುತ್ತಾದರು. ಮಾತೋಳಿ ಗ್ರಾಮದ ಹಸನ ಪಟೇಲ ಎಂಬುವವನನ್ನು ದುಧನಿ ರಸ್ತೆಯಲ್ಲಿರುವ ಚಿಂಚೋಳಿ ಗ್ರಾಮದ 'ಕರಕದ್ದಿ' ಹತ್ತಿರ ಕತ್ತರಿಸಿಹಾಕಲಾಯಿತು. ಇಂಥ ಹತ್ತು ಹಲವು ಉದಾಹರಣೆಗಳು ಅಫಜಲಪೂರ ಸುತ್ತಮುತ್ತಲೂ ಕೇಳಿಬರುತ್ತವೆ. ಇತ್ತ ಬಿಜಾಪೂರದ ಆದಿಲ್‌ಶಾಹಿಯ ಆಡಳಿತ ಮತ್ತು ಹೈದರಾಬಾದ್ ನಿಜಾಮನ ಆಡಳಿತಗಳ ಮಧ್ಯೆ ಇದ್ದ ಅಫಜಲಪೂರ ಪ್ರದೇಶದ ಮುಸ್ಲಿಮರು ಪ್ರಚೋದಿತರಾದ ಸೈನಿಕರ ಕೆಂಗಣ್ಣಿಗೆ ಗುರಿಯಾದದ್ದು ಸಹಜವಾಗಿತ್ತು. ಇಲ್ಲಿನ ಅನೇಕ ಮನೆಗಳು ಲೂಟಿಗೊಳಗಾದವು. ಸಾವಿರಾರು ಮುಸ್ಲಿಂರು ಪ್ರಾಣಭಯದಿಂದ ಪ್ರಭುತ್ವ ನಡೆಸಿದ್ದ ನಿಜಾಮನ ಮೊರೆ ಹೋಗಲು ಹೈದರಾಬಾದಿನತ್ತ ಗುಳೆ ಹೋದರು. ನಿಜಾಮನ ಶರಣಾಗತಿ ಪ್ರಕಟವಾಗಿ ಸೇನಾ ಕಾರ್ಯಾಚರಣೆ ಹಿಂದಕ್ಕೆ ಪಡೆದಾಗ ಅವರೆಲ್ಲಾ ಪ್ರಯಾಣ ಮೊಟಕುಗೊಳಿಸಿ ಹತ್ತಿರದ ಊರುಗಳಲ್ಲಿ ನೆಲೆಗೊಂಡರು. ಅಫಜಲಪೂರದ ಮಟ್ಟಿಗೆ ಹೈದರಾಬಾದ್ ಕರ್ನಾಟಕ ವಿಮೋಚನೆಯ ಬೆಳಕಿಗಿಂತ ಅದರ ಪ್ರತಿಫಲನ ಕೊಟ್ಟ ಕಾವು ತೀವ್ರವಾಗಿತ್ತು. ೧೩-೯-೧೯೪೮ರಂದು ಕೇಂದ್ರ ಗೃಹಖಾತೆಯಿಂದ ಹೊರಟ ಸೇನಾ ಕಾರ್ಯಾಚರಣೆ ಆಜ್ಞೆ ೧೮-೯-೪೮ರವರೆಗೆ ಮಾತ್ರ ಜಾರಿಯಲ್ಲಿತ್ತು. ಆದರೆ ಅದರ ಪರಿಣಾಮಗಳು ತಿಂಗಳುಗಟ್ಟಲೇ ಮುಂದುವರಿದವು. ಅನೇಕ ಮುಸ್ಲಿಂರು ತಲೆ ಮರೆಸಿಕೊಂಡು ಪ್ರಾಣ ಉಳಿಸಿಕೊಂಡು ತಮ್ಮನ್ನು ರಕ್ಷಿಸಿದ ಹಿಂದೂಗಳ ಬಗ್ಗೆ ಇಂದಿಗೂ ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತಾರೆ.

ಚಿತ್ರ - ಲೇಖನ : ಡಿ. ಎಂ. ನದಾಫ ಮಾತೋಳಿ
ರೇವಣಸಿದ್ದೇಶ್ವರ ಕಾಲನಿ, ಅಫಜಲಪೂರ-೫೮೫೩೦೧
ಗುಲಬರ್ಗಾ ಜಿಲ್ಲೆ

**ಮಾರ್ಚ್ ತಿಂಗಳ 'ಹೊಸತು - ಎಚ್‌ಎಂಟಿ' ಬಹುಮಾನವನ್ನು ಶ್ರೀ. ಆರ್. ವಿ. ಭಂಡಾರಿ ಅವರ 'ವೈಷ್ಣವ ಮಾನಭಂಗ' ಎಂಬ ಬರಹಕ್ಕೆ ಕೊಡಲಾಗಿದೆ.**

*- ಸಂಪಾದಕ*







ಕಾನೂನು ತೊಡಕುಗಳು




## ಗುಜರಾತ್ ಸರ್ಕಾರದ ಪ್ರಕಟಣೆ

**ನಿಷೇಧಿಸಲಾಗಿದೆ**

* ಗೋಹತ್ಯೆ
* ಮದ್ಯಪಾನ
* ಟಿವಿ, ಸಿನಿಮಾಗಳಲ್ಲಿ ಹಿಂಸೆ, ಸೆಕ್ಸ್
* ಸಾರ್ವಜನಿಕ ಸ್ಥಳಗಳಲ್ಲಿ ಸಿಗರೇಟ್ ಸುಡುವುದು

**ನಿಷೇಧಿಸಲಾಗಿಲ್ಲ**

* ಮಾನವ ಹತ್ಯೆ
* ನರರಕ್ತಪಾನ
* ಬೀದಿ, ರಸ್ತೆಗಳಲ್ಲಿ ಹಿಂಸಾಚಾರ, ಅತ್ಯಾಚಾರ
* ಸಾರ್ವಜನಿಕ ಸ್ಥಳಗಳಲ್ಲಿ ಮನುಷ್ಯರನ್ನು ಸುಡುವುದು

ಮಹಮ್ಮದ್

# ಶರಣರು ಮತ್ತು ರಾಜತ್ವ

**ಡಾ॥ ಮೃತ್ಯುಂಜಯ ರುಮಾಲೆ**

ಪ್ರಾಚೀನ ಕಾಲದಿಂದಲೂ ಇತಿಹಾಸದ ಬಹುಭಾಗವನ್ನು ಆಕ್ರಮಿಸಿಕೊಂಡಿರುವುದು ರಾಜತ್ವವೇ ! ರಾಜಕೀಯ ವಿಷಯಗಳ ಸಂಗ್ರಹವೇ ಚರಿತ್ರೆ ಎಂದು ತಿಳಿದುಕೊಳ್ಳುತ್ತಾ ಬಂದಿರುವುದು ಸಂಪೂರ್ಣ ದೋಷದಿಂದ ಕೂಡಿದ ಗ್ರಹಿಕೆಯಾಗಿದ್ದರೂ ಇಂದಿಗೂ ನಮ್ಮ ಅಧ್ಯಯನ ಆ ದೋಷದಿಂದ ಮುಕ್ತವಾಗಿಲ್ಲ. ರಾಜವರ್ಗ ಗೈಯುವ ಯುದ್ಧಗಳನ್ನು, ಆಡಳಿತಾದಿ ವಿವರಗಳನ್ನು ಅರಿಯುವುದು ಇತಿಹಾಸದ ಪ್ರಮುಖ ಉದ್ದೇಶವೆಂಬ ನಮ್ಮ ತಿಳುವಳಿಕೆ 'ವಾಸ್ತವ'ವನ್ನು ತಿಳಿಯಬೇಕೆಂಬುದನ್ನು ವಂಚಿಸಿದೆ. ಆಧುನಿಕವಾಗಿಯಂತೂ - ರೈತ ತನ್ನ ಹೊಲದಲ್ಲಿ ಏನು ಬೆಳೆಯಬೇಕೆಂಬುದು, ಒಬ್ಬ ವ್ಯಾಪಾರಿ ಏನು ಮತ್ತು ಹೇಗೆ ಮಾರಾಟ ಮಾಡಬೇಕು ಎಂಬುದು, ಪ್ರಜೆಗಳೆನಿಸಿಕೊಂಡವರೆಲ್ಲರು ಗ್ರಾಹಕರೇ ಆಗಬೇಕೆಂಬುದು, ವಿದ್ಯಾರ್ಥಿಗಳು ಏನು ಓದಬೇಕು, ಸಾಹಿತಿ ಏನು ಬರೆಯಬೇಕು, ಎಂಬುದು ರಾಜಕೀಯವೇ ನಿರ್ಧರಿಸುತ್ತಿರುವುದು ಪ್ರಜಾಪ್ರಭುತ್ವದ ಒಂದು ವಿಚಿತ್ರ ಸಂಗತಿಯೇ ಆಗಿದೆ. ರಾಜಕಾರಣದ ಮತ್ತು ಅಧಿಕಾರದ ವಿವಿಧ ರೂಪಗಳು ತಮ್ಮ ಅಸ್ತಿತ್ವದ ಸ್ಥಾಪನೆಗಾಗಿ ಸಮಾಜವನ್ನು ಉಪಭೋಗದ ಆಕರವನ್ನಾಗಿ ಮಾಡಿಕೊಂಡಿರುವುದು ಇತಿಹಾಸದುದ್ದಕ್ಕೂ ಕಂಡುಬರುತ್ತದೆ. ರಾಜತ್ವದ ಇಂಥ ಒತ್ತಾಸೆಗೆ 'ನೈತಿಕ' ಬೆಂಬಲ ಸಿಕ್ಕಿರುವುದು ಬ್ರಾಹ್ಮಣ್ಯ, ಪೌರೋಹಿತ್ಯದಂಥ ಬುದ್ಧಿವಂತ ವರ್ಗದಿಂದಲೇ ! ಸಮಾಜದ ಈ ಎರಡು ಮೇಲ್ವರ್ಗಗಳು ಸಮಾಜದ 'ಅಭಿವೃದ್ಧಿ' ಎಂಬ ಶೀರ್ಷಿಕೆಯಡಿಯಲ್ಲಿ 'ಅಧಿಕಾರದ ಹಿಡಿತ'ಕ್ಕೆ ಹೊಂಚು ಹಾಕುತ್ತಾ ಸಾಗಿರುವುದು ಚರಿತ್ರೆಯ ಮತ್ತೊಂದು ಮಗ್ಗುಲಲ್ಲಿ ದಾಖಲಾಗದೇ ಸಂತೃಪ್ತಿಯಿಂದಿದೆ.

ಇಂಥ ಅಧಿಕಾರಶಾಹಿವರ್ಗದ ವಿರುದ್ಧ ನ್ಯಾಯಕ್ಕಾಗಿ ಹೋರಾಟ ಮಾಡಹೊರಟ ಸಂಘಟನೆಗಳು 'ಭೌತಿಕಬಲ'ದ ಕೊರತೆಯಿಂದಾಗಿ ರಾಜತ್ವ ಮತ್ತು ಬ್ರಾಹ್ಮಣತ್ವಗಳನ್ನು ಎದುರಿಸಿ ಎದುರಿಸಿ ರೂಪಾಂತರಗೊಳ್ಳುತ್ತಾ ಸಾಗುತ್ತವೆ. ಕರ್ನಾಟಕದ ಮೊಟ್ಟ ಮೊದಲ ಸಮಾಜೋಧಾರ್ಮಿಕ ಹೋರಾಟವಾಗಿರುವ ಹನ್ನೆರಡನೇ ಶತಮಾನದ ಚಟುವಟಿಕೆಗಳಿಗೆ ಕಾರಣೀಭೂತರನ್ನು ಸಾಹಿತ್ಯಕವಾಗಿ ವಚನಕಾರರು, ಸಾಮಾಜಿಕವಾಗಿ ಶರಣರು, ಧಾರ್ಮಿಕವಾಗಿ ವೀರಶೈವರು ಎಂದು ಗುರುತಿಸುತ್ತಿರುವುದು - ಮೂರು ಕ್ಷೇತ್ರಗಳಲ್ಲಿ ಅಂದು ಅವರು ಕಂಡುಕೊಂಡ ಪೂರ್ಣಪ್ರಮಾಣದ ಕ್ರಿಯಾಶೀಲತೆಯನ್ನೂ ಸೂಚಿಸುತ್ತದೆ. ಸಮಾಜದ ವಿಷಮತೆಗೆ ಬಹುಮಟ್ಟಿಗೆ ಕಾರಣವಾದ ರಾಜಕಾರಣ ಮತ್ತು ಧರ್ಮಗಳ ಪರಿಷ್ಕರಣ ಮೊದಲ ಪ್ರಮುಖ ಕಾರ್ಯವಾಗಿತ್ತು. ಜನಮೂಲದ ದೈವವನ್ನು ಸ್ವೀಕರಿಸಿ, ಶೈವವನ್ನೂ ಜನಮುಖೀಗೊಳಿಸಿ ವೀರಶೈವಧರ್ಮವಾಗಿಸಿದ್ದು 'ಧರ್ಮವಲಯ'ದ ಪರಿವರ್ತನೆಯಾದರೆ ಆನುವಂಶಿಕ ಅಥವಾ ಸಾಂವೈಧಾನಿಕ ಪ್ರಭುತ್ವದ ಸ್ಥಾಪನೆಯನ್ನು ಪ್ರಶ್ನಿಸಿ ಅಥವಾ ನಿರ್ಲಕ್ಷಿಸಿ ಪರಿಷ್ಕರಿಸಬೇಕಾಗಿದ್ದುದು 'ರಾಜತ್ವವಲಯ'ದ ಪರಿವರ್ತನೆಯಾಗಿದೆ. ಸಮಾಜದ ಮೇಲೆ ಅದರಲ್ಲು ಬಹುಸಂಖ್ಯಾತ ಅನಕ್ಷರಸ್ಥರ ಮೇಲೆ ತನ್ನ ಅಸ್ತಿತ್ವವನ್ನು ಸಾಧಿಸುವ ದೃಷ್ಟಿಯಲ್ಲಿ ಧರ್ಮಕ್ಕಿಂತಲೂ ರಾಜತ್ವದ ಪರಿಣಾಮ ಹೆಚ್ಚು ಕೆಲಸ ಮಾಡಿದೆ ಎನ್ನಿಸುತ್ತದೆ. ಧರ್ಮದ ಅರ್ಥರಹಿತ ನಿಯಮಾವಳಿಗಳು, ಆಚರಣೆಗಳು ಜನಗಳನ್ನು ದಾರಿ ತಪ್ಪಿಸಿದಂತೆ ರಾಜತ್ವವು ಕರ, ತೆರಿಗೆ, ಬಿಟ್ಟಿ ದುಡಿತ, ಆರೋಪಿತ ಬಡತನಗಳ ಮೂಲಕ ಜನರನ್ನು ಕೂಪಕ್ಕೆ ತಳ್ಳಿದೆ. ಇದರಲ್ಲಿ ರಾಜತ್ವದ 'ಕೃತಕ ಅಧಿಕೃತತೆ'ಯೇ ಹೆಚ್ಚು. ಬಡವನ ಮೇಲೆ ಹಾಕುವ ತೆರಿಗೆಗಳೇ ಹೆಚ್ಚು ಎಂದು ಶಾಸನಗಳೂ ಸೂಕ್ಷ್ಮೀಕರಿಸಿ ಹೇಳುತ್ತಿರುವುದನ್ನು ಗಮನಿಸಿದರೆ ತೆರಿಗೆ ಹಾಕುವ 'ಸೂಚನೆ' ಕೊಡುತ್ತಿರುವ 'ಧರ್ಮ'ವಾದರೂ ಅಧಿಕಾರದ ಒಂದು ಭಾಗವಾಗಿ ಬಳಸಿಕೊಂಡಿರುವ 'ರಾಜತ್ವ'ವು ಹೆಚ್ಚು ಸ್ಪಷ್ಟವಾಗಿ 'ಕಾರಣ'ದ ಭಾರವನ್ನು ಹೊರುತ್ತದೆ. ಆದ್ದರಿಂದ 'ಧರ್ಮ'ವನ್ನು ಪರಿಷ್ಕರಿಸುವುದು 'ರಾಜತ್ವ'ವನ್ನು ವಿರೋಧಿಸುವುದಕ್ಕಿಂತಲೂ ನಿರಾಕರಿಸುವುದಕ್ಕಿಂತಲೂ, ಪರಿಷ್ಕರಿಸುವುದಕ್ಕಿಂತಲೂ 'ಸುಲಭ' ಎನಿಸುತ್ತದೆ. ಅಂದರೆ ರಾಜತ್ವ - ಸಮಾಜದ ಎಲ್ಲಾ ಆಗುಹೋಗುಗಳ ಮೇಲೆ ಉಂಟುಮಾಡುವ ಪರಿಣಾಮವೇ ಅಧಿಕವಾಗಿರುವುದರಿಂದ ಅದರೊಳಗಿದ್ದುಕೊಂಡೇ ಅದನ್ನು ವಿರೋಧಿಸಬೇಕಾಗುತ್ತದೆ. ಬಸವಣ್ಣನಿಗೆ ಬ್ರಾಹ್ಮಣ್ಯವನ್ನು ವಿರೋಧಿಸಿ ಮತ್ತೊಂದು ವಿಶಾಲ ವೇದಿಕೆಯ ಮೇಲೆ ನಿಂತುಕೊಂಡಂತೆ ರಾಜತ್ವವನ್ನು ವಿರೋಧಿಸಿ ಹೊರಬಂದು ತನ್ನನ್ನು ರೂಪಿಸಿಕೊಳ್ಳುವುದು ಕಷ್ಟಸಾಧ್ಯವಾಗಿದೆ. ಧರ್ಮ ನೀಡುವ ಬಹಿಷ್ಕಾರ ಬದುಕಿಗೆ ಭಾವನಾತ್ಮಕ ಬೆದರಿಕೆ ತರಬಹುದು; ರಾಜತ್ವ ನೀಡುವ ಬಹಿಷ್ಕಾರ ಬದುಕಿಗೆ ಭೌತಿಕವಾದ ಬೆದರಿಕೆ ತರುತ್ತದೆ ('ರಾಜ ಮುನಿದರೆ ನಾಡೊಳಗಿರಬಾರದು'-ಗಮನಿಸಿ).

> **೨೦೦೨**
>
> ಹೊಸ ವರ್ಷದ ಹಕ್ಕಿ
> ವಿಶ್ವವಾಣಿಜ್ಯ ಕೇಂದ್ರದ ಕಟ್ಟಡದ
> ಅವಶೇಷಗಳ ಮೇಲೆ,
> ಆಫ್ಘಾನಿಸ್ತಾನದ ಮುರಿದ ಮನೆಗಳ ಮೇಲೆ,
> ಕಾಶ್ಮೀರ ಕಣಿವೆಯ
> ಹೆಣಗಳ ಬಣವೆಯ ಮೇಲೆ
> ಹಾರಿಬಂದಿದೆ ;
> ಹಾರಲಿ ಸೃಷ್ಟಿಸುಧೆಗೆ !
>
> ಸಿ.ಪಿ.ಕೆ.
> ಮೈಸೂರು-೧೨

ಹನ್ನೆರಡನೇ ಶತಮಾನದ ಹೋರಾಟಗಾರನಿಗೆ ಧರ್ಮ ಮತ್ತು ರಾಜತ್ವವನ್ನು ಎದುರುಹಾಕಿಕೊಂಡಾಗ ಕಾಣುವ ಸಂರಚನೆ ಇಂಥವೇ ಆಗಿದೆ. ಆದ್ದರಿಂದ ಬ್ರಾಹ್ಮಣ್ಯದಿಂದ ಹೊರಬಂದ ಬಸವಣ್ಣ ಧರ್ಮರಹಿತವಾದ ಅಭಿಜ್ಞತೆ ಹೊಂದಿದ್ದ ಬಹುಸಂಖ್ಯಾತ ದುಡಿವ ವರ್ಗಕ್ಕೆ 'ಭರವಸೆ'ಯಾಗಿ ಕಂಡದ್ದು ಸಹಜವೇ ಆಗಿದೆ. ರಾಜತ್ವವನ್ನು ಕ್ರಮೇಣ ಪ್ರಶ್ನಿಸುವುದರ, ನಿರ್ಲಕ್ಷಿಸುವುದರ ಮೂಲಕ ಸಮುದಾಯದ ಮಧ್ಯದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಆ ವರ್ಗಕ್ಕೆ ಉಂಟಾದ ಮತ್ತೊಂದು 'ಭರವಸೆ'ಯಾಗಿದೆ. ಬ್ರಾಹ್ಮಣ್ಯವನ್ನು ಬಿಟ್ಟು ಅದರ 'ಕೃತಕ ಶ್ರೇಷ್ಠತೆ'ಯನ್ನೇ ನಿರಾಕರಿಸಿ ನಮ್ಮೊಂದಿಗೆ ಸೇರುತ್ತಿದ್ದಾನೆ ಎಂಬ ಕಾರಣದಿಂದಲೂ ರಾಜತ್ವವನ್ನು ಸಮರ್ಥಿಸಿಕೊಳ್ಳದೇ ಅದರ 'ದುಷ್ಟ ಅಸ್ತಿತ್ವ'ವನ್ನೇ ನಿರಾಕರಿಸಿ 'ನಮ್ಮ ನೆಲೆಯನ್ನು ಬಯಸುತ್ತಿದ್ದಾನೆ' ಎಂಬ ಕಾರಣದಿಂದಲೂ ಸಮುದಾಯದ ಮಧ್ಯೆ ಬಸವಣ್ಣ 'ಪ್ರಭಾವೀ ವ್ಯಕ್ತಿತ್ವ'ವನ್ನು ಸಂಪಾದಿಸಿದ್ದಾನೆ.

ನಮಗೆಂದೂ ದಕ್ಕದ ಧರ್ಮದ ರಕ್ಷೆಯ ಕಕ್ಷೆ ನೀಡಿರುವುದು ಮತ್ತು ರಾಜತ್ವದ ಸಂಪತ್ತು ನಮ್ಮೆಡೆಗೆ ಹರಿದು ಬರುತ್ತಿದೆ ಎಂಬುದು ವಿಶಾಲ ವ್ಯಾಪ್ತಿಯಲ್ಲಿ ರೂಪತಾಳುತ್ತಿದ್ದ ಈ 'ಶರಣ ಸಮಾಜ'ಕ್ಕೆ ಬಸವಣ್ಣ ಒಬ್ಬ 'ಮುತ್ಸದ್ದಿ'ಯಾಗಿ ಗೋಚರಿಸಿದ್ದಾನೆ. 'ದೇವರ'ನ್ನು ನಿರಾಕರಿಸಿ 'ದೈವ'ವನ್ನು ಒಪ್ಪಿಸಿಕೊಂಡಂತೆ, 'ರಾಜ'ನನ್ನು ನಿರಾಕರಿಸಿ 'ರಾಜತ್ವ'ವನ್ನೂ ಒಪ್ಪದೇ ಇರುವಲ್ಲಿ ರಾಜ ಮತ್ತು ರಾಜತ್ವಗಳ ಬಗ್ಗೆ ಇದ್ದ ಶರಣರ ನಿಲುವು ಸ್ಪಷ್ಟವಾಗಿ ಕಾಣುತ್ತದೆ.

'ಉತ್ತಮಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ' ಎನ್ನುವಲ್ಲಿ 'ಹುಟ್ಟು' ಎಂಬುದು ವ್ಯಕ್ತಿಯನ್ನು ಅಳೆಯುವ ಮಾನದಂಡವಾಗಿದ್ದ ಕಾಲದಲ್ಲಿ 'ಉತ್ತಮ ಕುಲ'ದ ಹುಟ್ಟನ್ನು ನಿರಾಕರಿಸುವಂಥ ನೋವು ಅನುಭವಿಸಿದ್ದು ಬಸವಣ್ಣನನ್ನು ರಾಜತ್ವದ ಮಧ್ಯೆಯೂ ಒಬ್ಬ ಆದರ್ಶ ವ್ಯಕ್ತಿಯಾಗಿ ಈ ಸಮುದಾಯ ಕಂಡುಕೊಂಡಿದೆ. 'ಕೂಡಲ ಸಂಗಮ ದೇವರುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯಾ ?' 'ಉತ್ತಮ ಕುಲ'ವನ್ನು ಸರಳಗೊಳಿಸಿ ಸಮುದಾಯದ ಕಡೆಗೆ ಹೊರಟಂತೆಯೇ 'ಬಿಜ್ಜಳನ ಭಂಡಾರ'ವನ್ನೂ ಬಿಟ್ಟು 'ಕೂಡಲಸಂಗಮದೇವ'ನನ್ನು ಸಮುದಾಯಕ್ಕಾಗಿ ನೆಚ್ಚಿಕೊಂಡದ್ದು ಬಸವಣ್ಣನ ಬಹುಮುಖ ವ್ಯಕ್ತಿತ್ವದ ಇತ್ಯಾತ್ಮಕ ಅಂಶವಾಗಿದೆ. ಜೊತೆಗೆ 'ಕೂಡಲಸಂಗಮದೇವಾ ನಿಮ್ಮ ಮನೆಯ ಮಗನೆಂದೆನಿಸಯ್ಯಾ' ಎಂದು ಕೆಳವರ್ಗವನ್ನೂ ಸ್ವೀಕರಿಸಲು ಕೂಡಲಸಂಗಮನನ್ನ 'ವಿನಯಪೂರ್ವಕ ಅಪ್ಪಣೆ' ಪಡೆಯುತ್ತಿರುವುದೂ ಇಂಥದ್ದೇ ಮತ್ತೊಂದು ಅಂಶವಾಗಿದೆ. ಬಸವಣ್ಣ ರಾಜತ್ವದ ನೆರವು ಪಡೆದಿದ್ದರು ಎಂಬುದಕ್ಕಿಂತಲೂ ರಾಜತ್ವದ ಪ್ರಮುಖ ಅಂಗವಾಗಿದ್ದು ಜನಮುಖಿಯಾಗಿದ್ದುದು ಈ ವರ್ಗಕ್ಕೆ ವಿಶ್ವಾಸವನ್ನು ತಂದಿದೆ. ಈ ವಿಶ್ವಾಸ ಎಂಥ ಧೈರ್ಯ ತಂದಿದೆಯೆಂದರೆ,

ಆದಯ್ಯ : * ಖ್ಯಾತಿಗೆ ಜೋತು ಲಾಭಕ್ಕೆ ಲೋಭಿಸಿ... ರಾಜದ್ವಾರದಲ್ಲಿ ಸುಳಿದು ಬಳಲುವ ಹಿರಿಯರೆಲ್ಲರು ಇತ್ತಿತ್ತಲಲ್ಲದೆ ಅತ್ತಲೆಲ್ಲಿದುದೋ.

ಸಿದ್ಧರಾಮ : * ಭೂಪನ ವೇಷ ಗೋಪಂಗಾದುದು. ಗೋಪನ ವೇಷ ಭೂಪಂಗಾದುದು ಪಾಪದಕೇಡು ನೋಡಾ...

* ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ... ಲೋಕ ಸಾರ್ವಭೌಮರು ತಮ್ಮ ರಾಣಿಯರಿಗೆ ಮೈಗೊಟ್ಟಾರಲ್ಲದೆ...

ಬಸವಣ್ಣ * ಅರಸನ ಮನೆಯಲ್ಲಿ ಅರಸಿಯಾಗಿಪ್ಪುದಕ್ಕಿಂತ ಭಕ್ತನ ಮನೆಯಲ್ಲಿ ತೊತ್ತಾಗಿಪ್ಪುದ ಕರಲೇಸು.

* ಆನೆ ಅಂಕುಶಕ್ಕಂಜುವುದೇ ಅಯ್ಯಾ ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೇ ? ಆನೀ ಬಿಜ್ಜಳಗಂಜುವನೇ ಅಯ್ಯಾ...

* ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿದರಯ್ಯ ಪ್ರಮಥರು... ನಿಮ್ಮ ನಿಲವಿಂಗೆ ತುಡಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ.

* ಅರಸು ಮುನಿದಡೆ ನಾಡೊಳಗಿರಬಾರದು.

* ಅರಸು ವಿಚಾರವು ಸಿರಿಯು ಶೃಂಗಾರವು ಸ್ಥಿರವಲ್ಲ ಕೇಳಿರೆ ಮರ್ತ್ಯದೊಳಗೆ.

ಜೇಡರದಾಸಿಮಯ್ಯ * ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪರಾಜ್ಯವನಿತ್ತಡೆ ಒಲ್ಲೆ...

ಮೆರೆಮಿಂಡಯ್ಯ * ರಾಜರ ಬಾಗಿಲಲ್ಲಿ ನಿಂದು ಕೂಗಿ ಮೊರೆಯಿಟ್ಟು ನೀನಾರೊಯೆಂದು ಕೇಳಿ ಕರೆದಡೆ ನಾನೊಡೆಯರು ಎಂದರೆ ಅಡಗಬೇಕೆ ನಿನ್ನ ಬಾಯಿ ತಡೆಯಿಸಿಕೊಂಡು ಬಡತನವುಂಟೆ ನಿನಗಲ್ಲಿ ?

ಕೋಲಶಾಂತಯ್ಯ * ರಾಜ್ಯ ಹೋದಲ್ಲಿ ರಾಯತನವುಂಟೇ ?

ಮಡಿವಾಳಯ್ಯ * ಆಶ್ರಯವಿಡಿದು ನುಡಿವರೆ ಪ್ರಮಥರು ಶಿವನೊಂದಿಗೆ ?

* ಆಶ್ರಯವಿಡಿದು ನುಡಿವರೆ ಗಣಂಗಳು ಸದಾಚಾರದೊಂದಿಗೆ ?

* ಆಶ್ರಯನುಡಿ ಆಚಾರವಿರುದ್ಧ, ನಿರಾಶ್ರಯ ನುಡಿ ಕಲಿದೇವರ ನಿರ್ಮಲ ತೇಜ ಕಾಣಾ.

* ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು.

ಚನ್ನಬಸವಣ್ಣ : * ಅರಸು ಭಕ್ತಿ ನಿಲ್ಲು, ಮಾಣು ಎಂದಲ್ಲಿ ಕೆಟ್ಟಿತ್ತು.

– ಹೀಗೆ ವಚನಕಾರರು ರಾಜ, ರಾಜತ್ವದ ಬಗ್ಗೆ ನಿರ್ಭೀತಿಯಿಂದ ಅಭಿಪ್ರಾಯಿಸುತ್ತಾರೆ.

* * *

'ರಾಜಾ ಪ್ರತ್ಯಕ್ಷ ದೇವತಾ' - ರಾಜತ್ವದೊಂದಿಗೆ ಪುರೋಹಿತಶಾಹಿ ಕೂಡಿಕೊಂಡಾ ನಂತರದ ಈ ಘೋಷಣೆ ಬಹುಸಂಖ್ಯಾತ ಅನಕ್ಷರಸ್ಥರನ್ನು ಹೇಗೆ ಕಂಡಿದೆ ಎಂಬುದಿಲ್ಲಿ ಗಮನಾರ್ಹ. ರಾಜ ಮತ್ತು ಪುರೋಹಿತರು 'ಪ್ರಶ್ನಾತೀತರು' ಎಂಬ ಕಾಲಕ್ಕೆ ಅನುಗುಣವಾಗಿ ಈ ಮೇಲಿನ ಹೇಳಿಕೆ ನೋಡಿದರೆ ಸರಿಯಾಗಿಯೇ ಇದೆ. ಆದರೆ ಈ ಇಬ್ಬರು 'ಪ್ರಶ್ನಾರ್ಹರು' ಎಂಬ ಕಾಲಕ್ಕಾಗಲೇ ಈ ಘೋಷಣೆ 'ಭೂಪಾಲ ಗೋಪಾಲ ನಾಗಬಲ್ಲನೇ ?' ಎಂದು ಧೈರ್ಯ ತಂದು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂದು ದೈವತ್ವದ ಶಾಶ್ವತತೆಯನ್ನು ವಿಶ್ಲೇಷಿಸಿದಂತೆ 'ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬರಿಲ್ಲ ನೋಡಯ್ಯಾ' ಎಂದು ರಾಜತ್ವದ ಕ್ಷಣಿಕತೆಯನ್ನು ಬಸವಣ್ಣ ವಿಶ್ಲೇಷಿಸುತ್ತಾನೆ. 'ಕೂಡಲಸಂಗಮ ದೇವರುಳ್ಳನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯಾ' ಎಂದು ಟೀಕಿಸುವಾಗ ಕೂಡಲಸಂಗಮ ದೇವರ ಬೆಂಬಲವನ್ನು 'ಊರ ಮುಂದಿನ ಹಾಲಹಳ್ಳ'ಕ್ಕೆ ಮತ್ತು 'ಬಿಜ್ಜಳನ ಭಂಡಾರವನ್ನು ಓರೆಯಾಫಿ (ಬಂಜೆಹಸು)'ಗೆ ಹೋಲಿಸುತ್ತಿರುವುದಿಲ್ಲಿ ಗಮನಾರ್ಹ. ರಾಜತ್ವದ ಅಡಿಯಲ್ಲಿ ನಿಂತು ಸಮಾಜದ ಕಡೆಗೆ ಮುಖ ಮಾಡಿ ನಿಂತುಕೊಳ್ಳಬೇಕಾದಾಗ ಅಪವಾದ ಮತ್ತು ಸಂಘರ್ಷಗಳನ್ನು ಎದುರಿಸಬೇಕಾಗುವುದು ಸಹಜವೇ ಆಗಿದೆ. ಶರಣರದು ಪ್ರಮುಖವಾಗಿ ಸಮಾಜೋಧಾರ್ಮಿಕ ಸುಧಾರಣೆಯಾಗಿದ್ದರಿಂದ ರಾಜಕೀಯವನ್ನು ಪ್ರಧಾನವಾಗಿ ಎದುರುಹಾಕಿಕೊಳ್ಳಲಿಲ್ಲ, ರಾಜತ್ವ, ಸಮಾಜ ಮತ್ತು ಧರ್ಮಗಳಲ್ಲಿ ತಲೆತೂರಿಸಿ ನೇತ್ಯಾತ್ಮಕ ಪರಿಣಾಮವನ್ನುಂಟುಮಾಡುವ ಎಲ್ಲ ಸಂದರ್ಭಗಳಲ್ಲಿ ರಾಜತ್ವವನ್ನು 'ಪೂರ್ವಪಕ್ಷ'ದಲ್ಲಿಟ್ಟು ಬಸವಣ್ಣನೂ ನೋಡಿದ್ದಾನೆ; ಉಳಿದ ಎಲ್ಲ ಶರಣರೂ ನೋಡಿದ್ದಾರೆ. ಕೆಲವು ಶರಣರು ತಮ್ಮ ಪೂರ್ವಾಶ್ರಯದಲ್ಲಿ ರಾಜವರ್ಗದಲ್ಲಿದ್ದರೆಂಬುದನ್ನು ಇಲ್ಲಿ ಗಮನಿಸಬಹುದು.

ಪ್ರಾರಂಭ ಹಂತದಲ್ಲಿ ಬಸವಣ್ಣನಿಗೆ ಪ್ರಭುತ್ವದ ಒಂದು ಅಂಗವಾಗಬೇಕಾಗಿದ್ದುದು ಅನಿವಾರ್ಯವೆನಿಸಿರಬಹುದಾದರೂ ಅನಂತರ ಅದರ ಪ್ರಭಾವ, ಆಮಿಷಗಳಿಗೆ ಎಳ್ಳಷ್ಟು ಒಳಗಾಗದ ಮನೋಭಾವನೆಗೆ ಘನೀಕೃತಗೊಂಡಿರಬಹುದು.

- *ತಾಳಮರದ ಕೆಳಗೆ ಹಾಲಿಹರವಿಯಿದ್ದಡೆ*
  *ಅದ ಹಾಲಹರವಿಯೆನ್ನರು ; ಸುರೆಯ ಹರವಿ ಎಂಬರು.*
- *ಚೋಳವಾಳಿಯಾನಲ್ಲ , ವೇಳೆವಾಳಿಯವ ನಾನಲ್ಲಯ್ಯಾ*
  *ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ.*
- *ನ್ಯಾಯ ನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ,*
  *ಲೋಕ ವಿರೋಧಿ ಶರಣನಾರಿಗಂಜುವನಲ್ಲ*
  *ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ..*

ವಚನಸಾಹಿತ್ಯ ಮತ್ತು ಶರಣ ಆಂದೋಲನಗಳನ್ನು ಆಧುನಿಕವಾಗಿ ಗ್ರಹಿಸುವ ಸಂದರ್ಭದಲ್ಲಿ ಒಂದು ಅಂಶವನ್ನು ಗಮನಿಸಬಹುದು. ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದ ಭಾರತೀಯರಿಗೆ ವಿಶೇಷವಾಗಿ ಕನ್ನಡಿಗರಿಗೆ ಪ್ರಜಾಪ್ರಭುತ್ವದಂಥ ರಾಜಕೀಯ ಸೂತ್ರಕ್ಕೆ 'ರಾಜತ್ವ'ವನ್ನು ಅಳವಡಿಸಿದಾಗ ಆ ಪೂರ್ವದಲ್ಲಿ ಸಮಾಜದ ಆರ್ಥಿಕ, ಧಾರ್ಮಿಕ ಮುಂತಾದ ಸುಧಾರಣೆ ಬಯಸಿದ ಶರಣರ ಚಟುವಟಿಕೆಗಳು ಅವಲೋಕನಕ್ಕೆ ಒಳಗಾಗಿರುವುದು ಒಂದು ಅರ್ಥಪೂರ್ಣವಾದ ವಿಮರ್ಶೆಯಾಗಿ ಕಂಡಿದೆ. ಆಧುನಿಕ ಶಿಕ್ಷಣ ನಮಗೆ ನೀಡಿದ ವಿವಿಧ ಜ್ಞಾನ ಶಾಖೆಗಳ ಪರಿಣಾಮವಾಗಿ ವಚನಗಳು ಅಂತರ್‌ಶಿಸ್ತೀಯ ಮತ್ತು ಅಂತರ್‌ಶಾಸ್ತ್ರೀಯ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಒಳಗಾಗಿವೆ.

* * *

ವಚನ ಸಾಹಿತ್ಯ ಮತ್ತು ರಾಜತ್ವವನ್ನು *ಅಭಿಮುಖೀಕರಿಸಿ* ಕೆಲವು ಅಂಶಗಳನ್ನಿಲ್ಲಿ ಗಮನಿಸಬಹುದು. ರಾಜಾಶ್ರಯ ಒಂದು ನಾಡಿನ ಸಾಹಿತ್ಯದ ಶ್ರೀಮಂತಿಕೆಗೆ ಕಾರಣವಾಗುತ್ತದೆ ಎಂಬ ಮಾತಿನ ಹಿಂದೆಯೇ ಅಂಥ ಸಾಹಿತ್ಯದ ಸ್ವಂತಿಕೆ ಮತ್ತು *ಸ್ವಾತಂತ್ರ್ಯಕೆಗಳಿಗೆ* ಸೀಮಿತ ಪರಿಧಿಯನ್ನು ನಿರ್ಮಿಸುತ್ತದೆ – ಎಂಬುದೂ ಸತ್ಯದ ಮಾತೇ ಆಗಿದೆ. ಬಸವಣ್ಣ ಮೂಲತಃ ರಾಜಮುಖಿ, ಪಂಡಿತಮುಖಿ 'ಕವಿ'ಯಾಗಿದ್ದಿಲ್ಲ ; ಜನಮುಖಿಯಾದ 'ಸುಧಾರಕ'ನಾಗಿದ್ದ. ಆದ್ದರಿಂದ ರಾಜಾಶ್ರಯದಂಥ ರಾಜತ್ವದ ನೆರಳು ಬಸವಣ್ಣನನ್ನು ಏನೂ ಮಾಡಲಿಲ್ಲ. 'ವಚನಗಳು' ಹುಟ್ಟಿಕೊಂಡದ್ದಾದರೂ ಹೋರಾಟದ 'ಉಪ ಉತ್ಪಾದನೆ', 'ಉಪನಿಷ್ಪತ್ತಿ'ಗಳಾಗಿ, ಪೌರಾಣಿಕ ವ್ಯಕ್ತಿಗಳನ್ನು ತಮ್ಮ ಕಾವ್ಯದ ನಾಯಕರನ್ನಾಗಿ ಮಾಡಿಕೊಂಡು ನಂತರ ಆ ನಾಯಕರುಗಳೊಂದಿಗೆ ತಮ್ಮ ಆಶ್ರಯದಾತರನ್ನು ಸಮೀಕರಿಸಿ 'ಹೊಲ್ಲದ ನೃಪರಿಗೆ ಇಲ್ಲದ ಗುಣಗಳನ್ನಿಟ್ಟ' ಎಂಬಂತೆ ತಮ್ಮ ಸೋಪಜ್ಞತೆಗೆ ಚೌಕಟ್ಟನ್ನು ನಿರ್ಮಿಸಿಕೊಂಡ ಕವಿಗಳು ಶರಣರ ಕಾಲದಲ್ಲಿ– 'ಮನಕ್ಕೆ ಸಾಹಿತ್ಯವಾದಲ್ಲದೆ ಕಾಯಕ್ಕೆ ಸಾಹಿತ್ಯವಾಗಬಾರದು' (ಬಿಬ್ಬಿಬಾಚಯ್ಯ), 'ಖ್ಯಾತಿಗೆ ಜೋತು ಲಾಭಕ್ಕೆ ಲೋಭಿಸಿ... ರಾಜದ್ವಾರದಲ್ಲಿ ಸುಳಿದು ಬಳಲುವ ಹಿರಿಯರೆಲ್ಲರು ಇತ್ತಿತ್ತಲಲ್ಲದೆ ಅತ್ತಲೆಲ್ಲಿಯದೋ' (ಆದಯ್ಯ), 'ಕವಿತ್ವ ಸಾಧಕರೆಲ್ಲ ಕಳವಳಿಸಿಹೋದರು, ವಿದ್ಯಾಸಾಧಕರೆಲ್ಲ ಬುದ್ಧಿಗೆಟ್ಟರು' (ಚನ್ನಬಸವಣ್ಣ), 'ಶಬ್ದ ಸಂಭ್ರಮದಲ್ಲಿ ಹಿಂದುಗಾಣರು, ಮುಂದುಗಾಣರು ತಮ್ಮ ತಾವರಿಯರು', 'ಗುಹೇಶ್ವರ ಲಿಂಗದಲ್ಲಿ ವಾಕು ಪಾಕವಾದರೇನು ಮನಪಾಕವಾಗದನ್ನಕ್ಕೂ' (ಅಲ್ಲಮಪ್ರಭು) – ಎಂಬ ಟೀಕೆಗೆ, ಪ್ರಶ್ನೆಗೆ ಒಳಗಾದರು. 'ನಾಯಕನನ್ಯನಾಗೆ ಕೃತಿ ವಿಶ್ರುತಮಾಗದು' – ಎಂಬ ಭಾರತೀಯ ಮನೋಭಾವನೆಯಂತೆ ಕವಿಯ ಜೊತೆಗೆ ಕಾವ್ಯವೂ ಪರಾಧೀನವಾಗುವಂಥ ಸ್ಥಿತಿಯೇ ವಚನಕಾರರಿಗೆ ಬರಲಿಲ್ಲ. 'ರಾಜಾ ಕಾಲಸ್ಯ ಕಾರಣಂ', 'ಅರಸು ಪಿಡಿಯೆ ತೃಣ ಪರ್ವತವಹುದು', 'ರಾಜಗೆ ಸುಖವಾಗೆ ರಾಜ್ಯಕ್ಕೆ ಸುಖ'ವೆಂಬ ಮಾತುಗಳಂತೆ ಒಂದು ಸಮಾಜ, ಸಾಮಾಜಿಕ ಚಟುವಟಿಕೆಗಳು ಬೇರೆ ಬೇರೆ ರೂಪದ ರಾಜ-ರಾಜತ್ವವನ್ನೇ ಅವಲಂಬಿಸಿದ್ದ ಕಾಲ ಎಂದಿಗೂ ಇದ್ದ ಕಾರಣ ಸಮಾಜಮುಖಿ ಹೋರಾಟದ ನೇತಾರನಾದ ಬಸವಣ್ಣನಿಗೆ ರಾಜತ್ವದ ಒಂದು ಭಾಗವಾಗಿ ಕಾರ್ಯನಿರ್ವಹಿಸಬೇಕಾದದ್ದು ಅನಿವಾರ್ಯವಾಗಿತ್ತು. ರಾಜಪ್ರಧಾನ ಸಮಾಜದಲ್ಲಿ ರಾಜನ, ರಾಜತ್ವದ ಹಿಡಿತವನ್ನು ಎತ್ತಿ ಹೇಳುವ ಈ ವ್ಯಾಖ್ಯೆಗಳ ಉದ್ದೇಶಕ್ಕೆ ಅನುಗುಣವಾಗಿ ಬದುಕು ಸಾಗಿಸುತ್ತಿದ್ದ ಬಹುಸಂಖ್ಯಾತ ಅನಕ್ಷರಸ್ಥ ವರ್ಗವನ್ನು ಅದರ 'ಮಂಪರಿ'ನಿಂದ ಪಾರು ಮಾಡಬೇಕಾದುದು ಶರಣರ ಹೋರಾಟದ ಒಂದು ಪ್ರಮುಖ ಸವಾಲು ಆಗಿತ್ತು. 'ಧರ್ಮ'ದ ಅಮಲಿನಿಂದ ಹೊರಬಂದು 'ಪರಿಷ್ಕೃತಗೊಂಡ ಜನಮುಖಿಧರ್ಮ'ದ ಸ್ಥಾಪನೆ ಧರ್ಮನಿಷ್ಠ ದೇಶದಲ್ಲಿ ಒಂದು ಹೊಸ ಪ್ರಯೋಗವಾದಂತೆ ರಾಜತ್ವಕ್ಕೆ ಪ್ರತಿಯಾಗಿ ಮತ್ತೊಂದು ಅದರ ರೂಪದ ಸ್ಥಾಪನೆ ಶರಣರಿಗೆ ಅಗತ್ಯವೂ ಇದ್ದಿಲ್ಲ; ಉದ್ದೇಶವೂ ಆಗಿದ್ದಿಲ್ಲ. ಇಂಥ ಹಲವಾರು ಚಟುವಟಿಕೆಗಳನ್ನು ಗರ್ಭದಲ್ಲಿಟ್ಟುಕೊಂಡಿರುವ ಹನ್ನೆರಡನೇ ಶತಮಾನ, ರಾಜಕೀಯ

ವಾಗಿಯೂ, ಸಾಮಾಜಿಕವಾಗಿಯೂ, ಸಾಹಿತ್ಯಕವಾಗಿಯೂ, ಧಾರ್ಮಿಕವಾಗಿಯೂ ಮಹತ್ತರವಾದ ಬದಲಾವಣೆಯನ್ನು ತೋರಿಸಿ ಜಾಗತಿಕ ವಿದ್ಯಮಾನದಲ್ಲಿ ಒಂದು ವಿಶಿಷ್ಟ ಅಭಿಜ್ಞೆಯನ್ನು ಪಡೆದಿದೆ.



'ವೀರಶೈವ'ರೆಂದು ಗುರುತಿಸಲ್ಪಟ್ಟ ಶರಣರು ಆಧುನಿಕವಾಗಿ ಸೀಮಿತವಲಯದಲ್ಲಿ ಚರ್ಚಿತವಾಗಿದ್ದರೂ 'ವಚನಕಾರ'ರೆಂದು ವಿಶಾಲ ಮತ್ತು ವಿವಿಧ ಹರಹಿನಲ್ಲಿ ಅಧ್ಯಯನಕ್ಕೆ ಒಳಗಾಗಿದ್ದಾರೆ. ಹಾಗೇ 'ವಚನಗಳು' ಕೂಡ. ಪಂಡಿತ ನಿಷ್ಪನ್ನವಾದ ಸೀಮಿತಕಕ್ಷೆಯ ಸಾಹಿತ್ಯಕ್ಷೇತ್ರವನ್ನು ಪಾಮರ ಪ್ರಿಯವೆನಿಸುವಂತೆ ರಚಿಸಿ, ವಚಿಸಿ ವಿಶಾಲಗೊಳಿಸಿದ ವಚನಕಾರರ ಬದುಕು ತಾತ್ವಿಕತೆಯಿಂದ ಪ್ರಾಯೋಗಿಕತೆಗೆ ನಡೆದು ತನ್ನದೇ ಆದ ವೈಲಕ್ಷಣ್ಯವನ್ನು ಕಾಣಿಸಿದ್ದು ಆಧುನಿಕ ಅಧ್ಯಯನಕ್ಕೆ ಒಂದು ಮುಖ್ಯ ಮಾನದಂಡವಾಗಿದೆ. ಉತ್ತಮ ಸಾಹಿತ್ಯ ರಚಿಸಿ ತತ್ತ್ವನಿಷ್ಠ ರಚನಕಾರರಾದಂತೆ ಅದನ್ನು ಬದುಕಿಗೆ ಅನ್ವಯಿಸಿಕೊಂಡು ಕ್ರಿಯಾಶೀಲವಚನಕಾರರೂ ಆದದ್ದು; ಮಾತು- ಕೃತಿಗಳ, ಬದುಕು-ಬರೆಹಗಳ ಸಮ್ಮಿಲನದ ಹರಿಕಾರರಾದದ್ದು; ಈ ಕ್ರಿಯಾತ್ಮಕ ಸಂಕುಲದ ಮುಖ್ಯಸ್ಥ ಬಸವಣ್ಣ ರಾಜತ್ವದ ನೆರಳಿನಲ್ಲಿದ್ದರೂ ಪ್ರಭಾವಿ ಪುರುಷನೂ ಸ್ಫೂರ್ತಿದಾಯಕನೂ ಆಗಿದ್ದನು. ಸರಳ ಸಂವಹನದ ವಚನಗಳು ಕನ್ನಡ ಸಾಹಿತ್ಯದಲ್ಲಂತೂ ಮಹತ್ವದ ಘಟ್ಟವೇ ಆಗಿದೆ. ಸಾಮಾಜಿಕ ಸ್ಥಿತಿ-ಗತಿಗಳನ್ನೇ ತಮ್ಮ ವಚನಗಳ ವಸ್ತುವನ್ನಾಗಿಸಿಕೊಂಡು ಅಶರೀರಗಳಾಗಿ ತಮ್ಮ ಮಾತುಗಳಲ್ಲಿ ದರ್ಶಿಸಲ್ಪಟ್ಟಿದ್ದಾರೆ. ಇಂಥ ಪ್ರಮುಖ ಮನೋಧರ್ಮದ ವಚನಕಾರರಿಗೆ ಸಹಜವಾಗಿ ಭೌತಿಕತೆ- ರಾಜಸಿಕತೆ- ಲೌಕಿಕತೆಯನ್ನು ಬಿತ್ತುತ್ತಿದ್ದ ರಾಜತ್ವವು ಕಟು ಪ್ರಶ್ನೆಗೆ ಅರ್ಹವಾದ ಅಂಶವಾಗಿತ್ತು.

ರಾಜಕೀಯ ಚಟುವಟಿಕೆಯನ್ನು ಆನುಷಂಗಿಕವಾಗಿರಿಸಿ, ಸಾಮಾಜಿಕತೆಯ ಕಡೆಗೆ ಪ್ರಥಮ ಪ್ರಾಶಸ್ತ್ಯ ಕೊಟ್ಟ ಬಸವಣ್ಣ ರಾಜಾಸ್ಥಾನದಲ್ಲಿ 'ಮುತ್ಸದ್ದಿ'ಯಾಗಿದ್ದರೂ ರಾಜಾಶ್ರಯದಲ್ಲಿ ಬದುಕಿನ ಅಂತರಾರ್ಥದ ತಿರುಳನ್ನು ತಿಳಿಸುವ ಪರಿಪೂರ್ಣ ವ್ಯಕ್ತಿತ್ವದ ವಚನಕಾರ ಕವಿ ಆಗಿದ್ದ.

ಬಸವ ಪೂರ್ವದ ರಾಜಾಶ್ರಿತ ಕನ್ನಡ ಕವಿಗಳು ಭಾಷೆಯನ್ನು ದುರ್ಬಳಕೆ ಮಾಡಿಕೊಂಡರು, ಮಾತನ್ನು ಮಲಿನಗೊಳಿಸಿದರು – ಎಂಬ ವಿದ್ವಾಂಸರ ಅಭಿಪ್ರಾಯವನ್ನು ಹಿನ್ನೆಲೆಯಾಗಿ ಬಳಸಿಕೊಂಡು ಬಸವಯುಗವನ್ನು ನೋಡಿದಾಗ ವಚನಕಾರರು ಬಳಸಿದ ಭಾಷೆ, ಆಡಿದ 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಮಾತಿನಿಂದ ವಾಸ್ತವಿಕ ಮೌಲ್ಯವನ್ನು ವಿಜೃಂಭಿಸುವಂತೆ ಮಾಡುತ್ತದೆ.

ಹಳಗನ್ನಡ ಕವಿಗಳಾರೂ ರಾಜಾಶ್ರಯದ ಬಗ್ಗೆ ನೇರವಾದ ಮಾತನ್ನಾಡದೇ ಪರೋಕ್ಷವಾಗಿ ರಾಜ, ರಾಜತ್ವ-ರಾಜಾಶ್ರಯದ ಬಗ್ಗೆ ರಾಜಾಶ್ರಯದ ಮಾತೆತ್ತಿ ತಮ್ಮಲ್ಲಿ ಇಲ್ಲದ ಸದಭಿಪ್ರಾಯವನ್ನು ಸೂಚಿಸಿದ್ದಾರೆ. ಪಂಪನೂ ನಿರಂಕುಶತ್ವದ ವಿಚಾರದಲ್ಲಿ ರಾಜನಿಗೆ ಭಿನ್ನಮತೀಯನಾಗಿ ಆಶ್ರಯದ ಕಕ್ಷೆಯಲ್ಲಿ ಸ್ವಂತಿಕೆ, ಸ್ವಾತಂತ್ರ್ಯ ಇಲ್ಲದ ಮಾತನ್ನು ಹೇಳುತ್ತಾನೆ. 'ನೃಪಚಿತ್ತ ಸಂಚಲಮಾದುವರಿಂದ ಓಲಗಿಸಿ ಬಾಳ್ವುದೇ ಕಷ್ಟಂ ಇಳಾಧಿನಾಥರುಂ' ಎಂಬ ಮಾತನ್ನು ಸಾಮಾನ್ಯೀಕರಿಸಿ ಹೇಳುತ್ತಾನೆ. ಆದರೆ ಬಸವಣ್ಣನಿಗೆ ಈ ಪಾರತಂತ್ರ್ಯವಿಲ್ಲ, ಜನಾಶ್ರಯದ ಸ್ಪಷ್ಟ ನೆರಳಿನ ಮುಂದೆ ರಾಜಾಶ್ರಯದ ನೆರಳು ಅಸ್ಪಷ್ಟವೆನಿಸುತ್ತದೆ. ಒಂದೆಡೆ ಆತನ,

*ಆನೆ ಅಂಕುಶಕ್ಕಂಜುವುದೇ ಅಯ್ಯಾ,*
*ಮಾಣದೆ ಸಿಂಹನ ನಖವೆಂದು ಅಂಜವುದಲ್ಲದೇ ?*
*ಆನೀ ಬಿಜ್ಜಳಂಗಂಜುವನೇ ಅಯ್ಯಾ...'*

ಎಂಬ ಮಾತು ಆತನ ಮನೋಸ್ವಾತಂತ್ರ್ಯವನ್ನು ತೋರಿಸುತ್ತದೆ. ಬಸವಣ್ಣನ ಹಲವು ವಿಧದ ಹೋರಾಟದಲ್ಲಿ ಮಾನವೀಯ ಅನುಕಂಪ, ವಿಶ್ವಮಾನವತಾ ದೃಷ್ಟಿ ಎದ್ದು ಕಾಣುತ್ತದೆ. ಅಂದಿನ ಸಾಮಾಜಿಕ ವಿಷಮತೆಯೇ ಆತನ ಹೋರಾಟದ ವಿಷಯವಾಯಿತು. ಅಂದಿನ ರಾಜಕೀಯ ವ್ಯವಸ್ಥೆಯನ್ನು ಒಪ್ಪಿಕೊಳ್ಳದೆ ರಾಜತ್ವವನ್ನೇ ವಿರೋಧಿಸಿ ಪ್ರಜಾಪ್ರಭುತ್ವ ಸ್ಥಾಪನೆಗೆ ಆತ ಕಾರಣವಾಗಬೇಕಾಗಿತ್ತೆನ್ನುವುದು ಆ ಕಾಲದ ಹಿನ್ನೆಲೆಯನ್ನರಿಯದ ಅತಿ ನಿರೀಕ್ಷೆಯಾಗುತ್ತದೆ.

ಸಮಾಜದ ಸುಧಾರಣೆಗಾಗಿ ಜಡ್ಡು ಸಂಪ್ರದಾಯದಿಂದ ವ್ಯವಸ್ಥಿತವಾದ ಬದಲಾವಣೆ ಅವಶ್ಯವೆನಿಸಿದ್ದಾಗ ಪ್ರತಿಷ್ಠಿತ ವರ್ಗ ಬಸವಣ್ಣನನ್ನು ವಿರೋಧಿಸಿರಬೇಕು. ರಾಜನೂ ಈ ಗುಂಪಿನ ಒಬ್ಬನಾಗಿರಬೇಕು. 'ನ್ಯಾಯ ನಿಷ್ಠುರಿ ದಾಕ್ಷಿಣ್ಯ ಪರನು ನಾನಲ್ಲ; ಲೋಕ ವಿರೋಧಿ, ಶರಣನಾರಿಗಂಜುವವನಲ್ಲ, ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ' ಎಂದು ಶಾಶ್ವತ ರಾಜತ್ವದ ಕೂಡಲಸಂಗಮನ ಅರಿವಿನ ಮಹತ್ವದ ವಚನ ಆ ಗುಂಪಿಗೆ ಉತ್ತರವಾಗಿ ಕಾಣುತ್ತದೆ.

*ಜೋಳದ ವಾಳಿಯಾನಲ್ಲ; ವೇಳೆವಾಳಿಯವ ನಾನಯ್ಯ*
*ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ...*

ಸಹಕಾರ-ಅನ್ನದ ಋಣದಿಂದಲ್ಲ, ಅದು ಮಾನವೀಯ, ಮೂಲಭೂತ ಕರ್ತವ್ಯ ಎಂಬ ಸಾರವನ್ನು ಸಾರುತ್ತದೆ. ಆದರ್ಶ ಸಾಧನೆಗೆ ಜೀವ-ಜೀವನವನ್ನೇ ಪಣವಾಗಿಟ್ಟ ಬದುಕಿನ ಹೋರಾಟದ ಮಾತುಗಳು ಆತನ ಸರ್ವಸಮರ್ಪಣೆಗೆ ಸಾಕ್ಷಿಯಾಗಿವೆ.

'ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ...' ಎಂಬ ಜೇಡರ ದಾಸಿಮಯ್ಯನ ವಚನವು ಅಧಿಕಾರದ ಲಾಲಸೆ, ಅರಮನೆಯ ಪರಿಸರದಲ್ಲಿ ದೊಡ್ಡವನಾಗುವಿಕೆಗಳ ಕ್ಷಣಿಕತೆಯನ್ನು ತೋರಿಸುತ್ತದೆ. ಈ ವಚನವು ಅಂದಿನ ರಾಜಕೀಯದ ಅವಶ್ಯ ಬದಲಾವಣೆಗೆ ಹಿಡಿದ ಕೈಗನ್ನಡಿಯಂತಿದೆ. 'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಒಲ್ಲೈಸಿಹೆನೆಂದು ನುಡಿವರಯ್ಯಾ ಪ್ರಮಥರು... ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ..' 'ನಿಮ್ಮ ನಿಲವಿಂಗೆ ಕುದಿವೆ'ನೆಂಬುದು ಆತನ ಹೃದಯ ವೈಶಾಲ್ಯವನ್ನು ಬಿಂಬಿಸುವ ಮನನೀಯವಾದ ಮಾತು. ಅಧಿಕಾರದಲ್ಲಿದ್ದು ಕೇವಲ ತಾತ್ವಿಕ ವಿಚಾರಗಳಿಗೆ ಮಾತು ಬೆಲೆ ಕೊಡದೇ ಸಾಮಾಜಿಕವಾಗಿ ಪ್ರಾಯೋಗಿಕವಾದ ಸೇವೆಗೆ ತನ್ನನ್ನು ತಾನು ತೊಡಗಿಸಿಕೊಳ್ಳುವ ಆತನ ಕ್ರಿಯಾಶೀಲ ವ್ಯಕ್ತಿತ್ವದಲ್ಲಿ ಮಾತು-ಕೃತಿಗಳ ಸಮ್ಮಿಲನತೆ ಇದ್ದುದು ಕಂಡುಬರುತ್ತದೆ, ಆತನ ಮನೋಸ್ವಾಸ್ಥ್ಯ ಎದ್ದು ಕಾಣುತ್ತದೆ. ಬಸವಣ್ಣನಿಗೆ ರಾಜತ್ವದ-ರಾಜನ ಸಂಪರ್ಕ-ಆಶ್ರಯಗಳು 'ಒಂದು ಆನುಷಂಗಿಕ ಮಾಧ್ಯಮ'ವಾಗಿರುವುದು ವಿಚಾರಣೀಯವಾದುದು.

*ಒಡೆಯರುಳ್ಳಾಳಿಂಗೆ ಕೇಡಿಲ್ಲ ಕಾಣಿರೋ*
*ಊರೆನ್ನದೆ ಅಡವಿಯೆನ್ನದೆ ಆಳನರಸಿ ಬಹ ಆಳಿದರುಂಟೇ ?*
*ಜೋಳದ ವಾಳಿಂಗೆ ಬಿಜ್ಜಳಂಗೆ ಆಳಾದಡೇನು ?*
*ವೇಳೆವಾಳಿಂಗೆ ಕೂಡಿಕೊಂಡಿಪ್ಪ ಕೂಡಲಸಂಗಮದೇವಾ.*

ಅವನ ಬದುಕು, ಸೇವೆ ವೇಳೆವಾಳಿಯ ಕೂಡಲಸಂಗಮನಿಗಾಗಿಯೇ ಎಂಬುದರ ಮುಂದೆ ಜೋಳದವಾಳಿಯ ಬಿಜ್ಜಳ ದ್ವಿತಿಯನಾಗಿಯೂ, ನಂತರದವನಾಗಿಯೂ ಕಂಡು ಬರುತ್ತಾನೆ: ಬಸವಣ್ಣ.

ಬ್ರಹ್ಮ ಪದವಿಯನ್ನು, ವಿಷ್ಣು ಪದವಿಯನ್ನು, ರುದ್ರ ಪದವಿಯನ್ನು ಒಲ್ಲದ ಬಸವಣ್ಣ ಬದುಕಿನ ಸಾರ್ಥಕತೆಗೆ ಕಂಡುಹಿಡಿದ ನವೀನ ಪದವಿಯೆ ಬೇರೆ. ಜೀವನದ ಪರಿಪೂರ್ಣತೆಗೆ ಸಂಪತ್ತು, ಸಿರಿ, ವೈಭವ, ಆಡಂಬರದ ಅರಸತ್ವಗಳು ಎಂದಿಗೂ ಕಾರಣವಲ್ಲ ಎಂಬುದನ್ನು ಆತ ಮನಗಂಡಿದ್ದ. ಅದಕ್ಕೆಂದೇ ಅರಮನೆಯ ಅರಸನೊಡನೆ ಇದ್ದ ಕಾಲವನ್ನು ಆತ ಪಡೆದು, ಉಪಯೋಗಿಸಿಕೊಂಡದ್ದು ಸಮಾಜದ ನ್ಯೂನತೆಗಳನ್ನು, ಸ್ಖಾಲಿತ್ಯಗಳನ್ನು ತಿದ್ದಿ ಸರಿಪಡಿಸಲಿಕ್ಕೆಂದೆ. ಅಂದಿನ ಹದಗೆಟ್ಟ ರಾಜಕೀಯ ಸ್ಥಿತಿಗತಿಗಳನ್ನು ರಾಜನ, ಅಧಿಕಾರಿಗಳ ಸರ್ವಾಧಿಕಾರತ್ವ, ಬಂಡವಾಳ ಬಲ, ಜಾತೀಯತೆ, ವರ್ಗ-ವರ್ಣಭೇದ, ಮೂಢನಂಬಿಕೆ ಮುಂತಾದವುಗಳನ್ನು ಕಣ್ಣಾರೆ ಕಂಡರು. ಈ ಎಲ್ಲಾ ವಿಷವೃಕ್ಷಗಳ ಸರ್ವನಾಶ ಮಾಡಿ ನವಸಮಾಜ ನಿರ್ಮಾಣ ಮಾಡಲು ಆತನಿಗೆ ಅಧಿಕಾರದ ಅವಶ್ಯಕತೆ (?) ಇದ್ದಿರಬೇಕು. ರಾಜವಲಯದಲ್ಲಿದ್ದರೂ ರಾಜನಿಗೆ ಪ್ರಿಯವಾದುದೇ ತನಗೂ ಪ್ರಿಯ ಎಂಬ ಮನಸ್ಸಿನ ಭಿನ್ನತೆಯನ್ನು ತೋರದೆ ವಸ್ತುನಿಷ್ಠವಾದ ವಿಚಾರಗಳನ್ನರುಹುವುದರೊಂದಿಗೆ ಜೀವನ ಸಾಗಿಸಿದ. ರಾಜಾಶ್ರಯದಲ್ಲಿದ್ದರೂ ರಾಜನ ಲೋಪದೋಷಗಳನ್ನು ಕಂಡೂ ಕಾಣದ ಕುರುಡನಂತಾಗಲಿಲ್ಲ, ತಿದ್ದಿ ಸರಿಪಡಿಸುವ ಮಾರ್ಗದರ್ಶಕನಾದ.

ಒಟ್ಟಾರೆ ಶರಣನಿಗೆ ರಾಜ, ರಾಜವರ್ಗ, ರಾಜತ್ವವು 'ಬಿಟ್ಟ ಬದುಕು ಸಾಗಿಸಬಹುದಾದ ಅನವಶ್ಯಕ ವಿಷಯ'ಗಳಂತಾಗಿದ್ದರಿಂದ ಶರಣತ್ವ ಅವರಲ್ಲಿ ಗಟ್ಟಿಯಾಗಿ ನೆಲೆಯೂರಿತು.


ಡಾ|| ಮೃತ್ಯುಂಜಯ ರುಮಾಲೆ
ವಿಜಯನಗರ ಕಾಲೇಜ್, ಹೊಸಪೇಟೆ - ೫೮೩೨೦೧



## ಕೃಷ್ಣಚಂದರ ಕಥೆಗಳು

ಕೃಷ್ಣ ಚಂದರ್ ಕನ್ನಡ ರೂಪ : ಪಂಚಾಕ್ಷರಿ ಹಿರೇಮಠ

ಪುಟ : 96 ಬೆಲೆ : ರೂ. 40

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560001

ಉರ್ದು ಸಾಹಿತ್ಯದ ಅದ್ವಿತೀಯ ಬರಹಗಾರ ಕೃಷ್ಣಚಂದರ್ ಕಥೆಗಳಲ್ಲಿ ಬಡವರ ಬದುಕಿನ ಪ್ರತಿಕ್ಷಣಗಳೂ ಅಪಾರ ವೇದನೆಯೂ ದಾಖಲಾಗಿದೆ. ಒಬ್ಬ ಮಾನವತಾವಾದಿಯ ಅಸಾಧಾರಣ ಕಳಕಳಿ ಇದೆ. ದೇಶವಿದೇಶಗಳ ವಿವಿಧ ಭಾಷೆಗಳಿಗೆ ಅವರ ಕಥೆಗಳು ಅನುವಾದಗೊಂಡಿವೆ. ಅಂದಿನ ಸೋವಿಯೆತ್ ರಷ್ಯಾ ಒಂದರಲ್ಲೇ ಅವರ ಕೃತಿಗಳ ಮಾರಾಟ ೧೪ ಲಕ್ಷ ಪ್ರತಿಗಳು ಎಂದರೆ, ಅವರ ಹಾಗೂ ಅವರ ಕೃತಿಗಳ ಬಗ್ಗೆ ಎಲ್ಲವನ್ನೂ ಹೇಳಿದಂತೆಯೇ !

ಒಳ್ಳೆಯ ಓದು

## ನಾದ

ಬಾಳಿಕೆ ರಾಮ ಭಟ್

ಪುಟ : 96 ಬೆಲೆ : ರೂ. 40

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560001

ವಸ್ತುವೊಂದು ಕಂಪಿಸಿದಾಗ ಗಾಳಿಯೊಂದಿಗೆ ಅಲೆಗಳಾಗಿ ಸಾಗಿ ನಾದೋತ್ಪತ್ತಿಯಾಗುವುದು ಹಾಗೂ ಭೌತಿಕವಾಗಿ ನಮಗದರ ಅನುಭವವು ವೈಜ್ಞಾನಿಕ ಸತ್ಯ. ಈ ಸೂತ್ರದೊಂದಿಗೆ ಹಲವಾರು ಹೆಸರುಗಳೊಂದಿಗೆ ಶಬ್ದವು ನಮಗೆ ಹಿತವಾದ ಇಲ್ಲವೇ ಕಿರಿಕಿರಿ ಉಂಟುಮಾಡುವ ರೀತಿಯನ್ನು ಸೊಗಸಾಗಿ ವಿವರಿಸಲಾಗಿದೆ. ಕಿವಿಗಿಂಪಾದಾಗ ನಾದ (ಸಂಗೀತ) ಕೇಳಲಸಾಧ್ಯವಾದಾಗ ಗದ್ದಲ (ಸಂತೆ)ವಾಗಿ ಸದಾ ನಮ್ಮ ಜೊತೆಗಿರುವ ಶಬ್ದದ ಬಗ್ಗೆ ವಿವರವಾದ ವ್ಯಾಖ್ಯಾನ.

## ಔಷಧಿಯಿಲ್ಲದೆ ಬದುಕಲು ಕಲಿಯಿರಿ

ಡಾ|| 'ಜೀವಿ' ಕುಲಕರ್ಣಿ

ಪುಟ : 176 ಬೆಲೆ : ರೂ. 100

**ಹರ್ಷವರ್ಧನ ಪ್ರಕಾಶನ**, 8-ಅ, 15, ಜವಾಹರ ಸೊಸೈಟಿ, ಗೋವಿಂದನಗರ, ಬೊರಿವಿಲಿ ಪಶ್ಚಿಮ, ಮುಂಬಯಿ-400 092



ಯೋಗ-ನಿಸರ್ಗೋಪಚಾರಗಳ ಮಹತ್ವ ತಿಳಿಸಿಕೊಡುವ ಲೇಖನಗಳ ಸಂಗ್ರಹ. ಔಷಧೋಪಚಾರದ ವ್ಯವಸ್ಥೆಯಲ್ಲಿನ ಲೋಪದೋಷಗಳಿಂದಾಗಿ ಔಷಧಿ ರಹಿತ ಪ್ರಕೃತಿ ಚಿಕಿತ್ಸೆಯಲ್ಲಿ ಜನರ ಒಲವು ಈಗ ಹೆಚ್ಚುತ್ತಿದೆ. ಶರೀರದ ಶ್ರಮ ಕಡಿಮೆಯಾಗಿ ಮಾನಸಿಕ ಒತ್ತಡದ ದುಡಿಮೆ ಹೆಚ್ಚಾಗಿರುವ ಇಂದಿನ ದಿನಗಳಿಗಂತೂ ಈ ಚಿಕಿತ್ಸೆ ಬಲು ಪರಿಣಾಮಕಾರಿ. 'ಜೀವಿ'ಯವರ ಈ ಪುಸ್ತಕದಲ್ಲಿನ ಸಲಹೆಗಳನ್ನು ದಿನವೂ ಪಾಲಿಸಿ ಅದರಂತೆ ನಡೆದರೆ ಇಲ್ಲಿನ ಅಂಶಗಳು ಸಂಜೀವಿನಿಯಾಗಬಲ್ಲವು.

## ನೂರು ಹನಿ ಒಂದು ಹೂ (ಹನಿಗವನಗಳು)

ಮೀನಾ ಸದಾಶಿವ

ಪುಟ : 60 ಬೆಲೆ : ರೂ. 30

**ಸಂಕ್ರಮಣ ಪ್ರಕಾಶನ**, 2751, 17-ಎ ಕ್ರಾಸ್, 6ನೇ ಮೇನ್, ಬನಶಂಕರಿ ಎರಡನೇ ಹಂತ, ಬೆಂಗಳೂರು-560 070

ಇಲ್ಲಿನ ಕಾವ್ಯದ ಮುಖ್ಯಲಕ್ಷಣ ಸಹಜತೆ - ಸರಳತೆ ಹಾಗೂ ಬದುಕಿನ ಅಪಾರ ಸಂಕಷ್ಟಗಳಿಗೆ ಬಹಳಷ್ಟು ಸ್ಪಂದಿಸಿದ ಮನೋಭಾವನೆ. ಜೀವನ ಪಥದ ಸಂದುಗೊಂದುಗಳನ್ನು ಬಿಡದೆ ಪ್ರತಿಕ್ಷಣಗಳನ್ನು ಗಾಢವಾಗಿ ಅವಲೋಕಿಸಿ ಹೆಕ್ಕಿ ತೆಗೆದು ನೇಯ್ದಂಥ ಅಪೂರ್ವ ಅನುಭವಗಳ ಮಾಲೆ. ಒಂದೊಂದು ಅನುಭವವೂ ಕವನವಾಗಿ ಹೊರಹೊಮ್ಮಿದೆ. ''ಕೋಗಿಲೆಗೆ ಕಲಿಸಲಾರೆ'' ಹಾಗೂ ''ಹಕ್ಕಿಗೊಂದಿಷ್ಟು ಜಾಗ ಬಿಡು'' ಕವನ ಸಂಕಲನಗಳಿಂದ ಈಗಾಗಲೇ ಕಾವ್ಯದ ಜಾಡನ್ನು ಸಮರ್ಥವಾಗಿ ಹಿಡಿದಿರುವ ಅಪರೂಪದ ಕವಯಿತ್ರಿ, ಮೀನಾ ಸದಾಶಿವ.

## ಸ್ತ್ರೀವಾದಿ ಜನಪದ ಕಥೆಗಳು

ಜೀನಹಳ್ಳಿ ಸಿದ್ಧಲಿಂಗಪ್ಪ (ಸಂಪಾದಕ)

ಪುಟ : 120 ಬೆಲೆ : ರೂ. 75

**ಪ್ರೇಮ ಪ್ರಕಾಶನ**, ಜೀನಹಳ್ಳಿ ಅಂಚೆ, ನ್ಯಾಮತಿ ಮಾರ್ಗ, ದಾವಣಗೆರೆ ಜಿಲ್ಲೆ-577223



ಜಾನಪದ ಕಥೆಗಳು ಗ್ರಾಮ್ಯ ಭಾಷೆಯಲ್ಲಿ ಕೇಳಿದರೇನೆ ಅದಕ್ಕೆ ಸ್ವಾರಸ್ಯ-ಸೊಗಸು ಎಲ್ಲಿಲ್ಲದ ಗತ್ತು ಬಂದುಬಿಡುತ್ತದೆ. ಎಲ್ಲ ಕಥೆಗಳಲ್ಲೂ ಒಂದು ''ದಾಟಲಾರದ ಗೆರೆ'' ಇರುತ್ತದೆ. ಮನುಷ್ಯ ಹೇಳಬೇಕಾದುದನ್ನು ಪ್ರಾಣಿ-ಪಕ್ಷಿ-ಮರ – ಇನ್ನೂ ಏನೇನೋ ಮನುಷ್ಯೇತರ ಪಾತ್ರಗಳು ನಿರ್ವಹಿಸಿದರೂ ಅಲ್ಲಿನ ಮೂಲಚಿಂತನೆಗೆ ಗ್ರಾಸ ಮಾನವ ಬದುಕಿನ ಒಳಿತು-ಕೆಡುಕುಗಳೇ ಆಗಿರುತ್ತವೆ. ಜಾನಪದ ಕಥೆಗಳಲ್ಲೂ ಸ್ತ್ರೀಪರವಾಗಿ ನಿಂತು ಯೋಚಿಸುವ ಕೆಲವು ಕಥೆಗಳನ್ನು ಮಹಿಳೆಯರಿಂದಲೇ ಹೇಳಿಸಲಾಗಿದೆ.

## ಸ್ತ್ರೀ ಸಂಸ್ಕೃತಿ ಶಿಕ್ಷಣ (ಲೇಖನಗಳು)

ಬಿ. ಎಂ. ರೋಹಿಣಿ

ಪುಟ : 153 ಬೆಲೆ : ರೂ. 45

**ಹೇಮಾಂಶು ಪ್ರಕಾಶನ**, ಗೊಲ್ಲಚ್ಚಿಲ್, ದೇರೆಬೈಲು, ಮಂಗಳೂರು-575 006

ಸ್ತ್ರೀಯರ ಸಮಸ್ಯೆಗಳ ಬೇರುಗಳನ್ನೂ, ಅವ್ಯವಸ್ಥೆಯ ಆಳಗಳನ್ನೂ ಗುರುತಿಸುತ್ತ ಗಂಭೀರ ರೀತಿಯ ಚರ್ಚಾಸ್ವರೂಪದಲ್ಲಿ ಹೊರಹೊಮ್ಮಿದ ಲೇಖನಗಳಿವು. ಸ್ತ್ರೀಯರ ಸರ್ವತೋಮುಖ ಏಳಿಗೆಗೆ ಉತ್ತಮ ಶಿಕ್ಷಣದ ವ್ಯವಸ್ಥೆಯ ಅಗತ್ಯವನ್ನು ಒತ್ತಿ ಹೇಳಲಾಗಿದೆ. ಇಂದಿನ ಜಾಗೃತ ಮಹಿಳೆ ಹಿಂದಿನ ಶೋಷಿತ ಮಹಿಳೆಗೆ ಹೋಲಿಸಿದಲ್ಲಿ ಬಹಳಷ್ಟು ಸುಧಾರಣೆ ಕಂಡುಬಂದಿರುವುದಂತೂ ನಿಜ ! ಮಹಿಳೆಯ ಜವಾಬ್ದಾರಿ, ಸ್ಥಾನಮಾನಗಳು ಸಮಾಜಕ್ಕೆಷ್ಟು ಮುಖ್ಯವೆಂದೂ ಚರ್ಚಿಸಲಾಗಿದೆ.




## ಚಪ್ಪಲಿ ಮತ್ತು ನಾನು (ಕವನ ಸಂಕಲನ)

ಮೂಡ್ನಾಕೂಡು ಚಿನ್ನಸ್ವಾಮಿ

ಪುಟ : 82 ಬೆಲೆ : ರೂ. 40

**ಶುಭದ ಪ್ರಕಾಶನ**, ಜರಗನಹಳ್ಳಿ, ಜೆ. ಪಿ. ನಗರ, ಬೆಂಗಳೂರು-560 078

ಇಲ್ಲಿನ ಕೆಲ ಕವಿತೆಗಳು ಬಂಡಾಯದ ಧ್ವನಿಯನ್ನು ಸಮರ್ಥವಾಗಿ ಬಿಂಬಿಸಿವೆ. ಸುತ್ತುಬಳಸು ದಾರಿಬಿಟ್ಟು ಹೇಳಬೇಕಾದದ್ದನ್ನು ನೇರವಾಗಿ ಹೇಳಿ ಮುಗಿಸುವಂತಹ ನೇರ ಸ್ಪಷ್ಟ ನಿಲುವುಗಳನ್ನು ಧಾರಾಳವಾಗಿ ಕಾಣಬಹುದು. ನೋವನ್ನು ಬಿತ್ತಿ ನೋವನ್ನು ಬೆಳೆಯಬಲ್ಲಂಥ ಎಲ್ಲ ಕ್ರೂರ ಶಕ್ತಿಗಳನ್ನೂ ನಿರ್ದಯವಾಗಿ ಖಂಡಿಸುತ್ತ ಪ್ರಳಯಾಂತಕ ಮನಸ್ಸುಗಳು ಇಲ್ಲವಾಗಿಸುವ ಹೊಣೆಯನ್ನು ಸಮಾಜಕ್ಕೇ ಬಿಡಲಾಗಿದೆ. 42 ಕವಿತೆಗಳು ನಮ್ಮ ಮನಸ್ಸನ್ನು ಕಲಕುತ್ತವೆ.

## ಮುಕ್ತಧಾರಾ (ನಾಟಕ)

ರವೀಂದ್ರನಾಥ ಠಾಕೂರ್ ಅನು : ಶ್ರೀನಿವಾಸ್ ವಿ. ಸುತ್ರಾವೆ

ಪುಟ : 82 ಬೆಲೆ : ರೂ. 45

**ವಿನಯ್ ಪ್ರಕಾಶನ**, 1646/18, ವಿದ್ಯಾನಗರ, ದಾವಣಗೆರೆ




ಸುಮನ್... ಸುಮನ್ ! ಶಾಶ್ವತವಾಗಿ ಕಳೆದುಹೋದ ಮಗನನ್ನು ತಾಯೊಬ್ಬಳು ಇಲ್ಲಿನ ನಾಟಕದಲ್ಲಿ ಮನಕಲಕುವಂತೆ ಕರೆಯುತ್ತಾಳೆ. ಆಧುನಿಕತೆಯ ಬೆನ್ನುಹತ್ತಿ ಭಾರೀ ಗಳಿಸಿದ್ದೇವೆ ಎಂದು ಬೀಗುವ ನಾವು ಶಾಶ್ವತವಾಗಿ ಕಳೆದುಕೊಂಡ ಮೌಲ್ಯಗಳು ಏನೆಂದು ತಿಳಿಸುವ ಕೃತಿ. ನೊಬೆಲ್ ಪಾರಿತೋಷಕ ಪಡೆದ ನಮ್ಮ ಹೆಮ್ಮೆಯ ಸಾಹಿತ್ಯಕ ಸಂಪತ್ತಾದ ಶ್ರೀ ಠಾಕೂರ್ ಪ್ರಕೃತಿಯನ್ನು ಅಪಾರವಾಗಿ ಪ್ರೀತಿಸುತ್ತಿದ್ದರು. ನಿಸರ್ಗದ ಮಹಾನ್ ಶಕ್ತಿಯ ಮುಂದೆ ವಿನೀತನಾಗಿರಬೇಕೆಂಬ ಸಂದೇಶ.

– ಇಂದಿರಾ ಕುಮಾರಿ

# ಜೀವನಾಂಶ, ಮುಸ್ಲಿಂ ಮಹಿಳೆ ಮತ್ತು ದಂಡ ಪ್ರಕ್ರಿಯಾ ಸಂಹಿತೆ ಪ್ರಕರಣ ೧೨೫ ಇತ್ಯಾದಿ

**ಜ. ಹೊ. ನಾರಾಯಣಸ್ವಾಮಿ**

ಒಂದು ರಾಷ್ಟ್ರ ಸ್ವತಂತ್ರವಾದಾಗ ಅದರ ಕಾನೂನಿನ ಬೇರುಗಳು ಸಮಾನತೆಯ ಆಧಾರದ ಮೇಲೆ ಬಲವಾಗಿರದೆ ಹೋದರೆ ಎಂಥ ಗೊಂದಲಗಳು ಹುಟ್ಟಿಕೊಳ್ಳಬಹುದು ಎಂಬುದಕ್ಕೆ ಭಾರತ ಪ್ರತ್ಯಕ್ಷ ಸಾಕ್ಷಿಯಾಗಿದೆ. ಭಾರತ ಒಂದು ಕಡೆ ಸಂವಿಧಾನದ ಮೂಲಕ ಸಮಾನತೆಯನ್ನು ಹೇಳುತ್ತಾ ಮತ್ತೊಂದು ಕಡೆ ವೈಯಕ್ತಿಕ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿ ಇಂಥ ಗೊಂದಲಗಳ ಹುಟ್ಟಿಗೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲೇ ಸಂವಿಧಾನದ ವಿಧಿ – ೪೪ ಎಲ್ಲ ಪ್ರಜೆಗಳಿಗೂ ಸಮಾನ ನಾಗರಿಕ ಸಂಹಿತೆ – ಎನ್ನುವುದು ಸ್ವಾತಂತ್ರ್ಯ ಬಂದು ೫೪ ವರ್ಷಗಳು ಸಂದರೂ ನಿರ್ಜೀವವಾಗಿ ಬಿದ್ದಿದೆ. ಈ ಕುರಿತು ಸಂದರ್ಭ ಬಂದಾಗಲೆಲ್ಲ ಸರ್ವೋಚ್ಚ ನ್ಯಾಯಾಲಯ ಅದನ್ನು ಜಾರಿಗೊಳಿಸುವ ಅಗತ್ಯವನ್ನು ಹೇಳುತ್ತಲೇ ಬಂದಿದೆ. ಸಂಸತ್ತಾಗಲಿ, ಸಮಾಜವಾಗಲಿ ಇದನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ.

ದಂಡ ಪ್ರಕ್ರಿಯಾ ಸಂಹಿತೆಯನ್ನು ರಚಿಸಿದ ಕರ್ತೃ ಪ್ರಕರಣ ೧೨೫ ಅನ್ನು ಕುರಿತು ಜೀವನಾಂಶವನ್ನು ಶೀಘ್ರವಾಗಿ ನೀಡಬೇಕೆನ್ನುವ ಉದ್ದೇಶವನ್ನಿಟ್ಟುಕೊಂಡು ಮಾನವೀಯ ದೃಷ್ಟಿಯಿಂದ ಸೇರಿಸಿರುವುದಾಗಿ ಹೇಳಿದ್ದಾರೆ. ಈ ಪ್ರಕರಣದಡಿ ಕುಟುಂಬದ ಅಸಹಾಯಕರು ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

ಮುಸ್ಲಿಂ ಜನಾಂಗದ ವೈಯಕ್ತಿಕ ಕಾನೂನಿನ ಹಿನ್ನೆಲೆಯಲ್ಲಿ ಈ ಪ್ರಕರಣ ವಿಚಿತ್ರ ತಿರುವುಗಳನ್ನು ಪಡೆಯುವುದು ಆ ಧರ್ಮದ ಹಿನ್ನೆಲೆಯಲ್ಲಿ ಸಹಜವಾಗಿದೆ. ಆದರೆ ಅದು ಸಂವಿಧಾನದ ಹಾಗೂ ಸಾಮಾಜಿಕ ದೃಷ್ಟಿಯಿಂದ ಸಮ್ಮತವಾದುದೆ ಎಂಬುದು ಚರ್ಚೆಗೆ ಒಳಗಾಗಿದೆ, ಇನ್ನೂ ವ್ಯಾಪಕವಾಗಿ ಒಳಗಾಗಬೇಕಾಗಿದೆ. ಏಕೆಂದರೆ ತಮ್ಮ ವೈಯಕ್ತಿಕ ಧಾರ್ಮಿಕ ನಂಬಿಕೆಗಳಿಗಿಂತ ರಾಷ್ಟ್ರ ಹಾಗೂ ಸಮಾನತಾ ಸಮಾಜ ನಿರ್ಮಾಣ ಮುಖ್ಯವಾದುದು. ಆಗ ಮಾತ್ರ ಪ್ರೀತಿ, ಸೌಹಾರ್ದತೆ, ಶಾಂತಿ ನೆಲೆಸಲು ಸಾಧ್ಯವಾಗುತ್ತದೆ.

ಈಗ ಬಹುಸಂಖ್ಯಾತ ಹಿಂದೂ ಹಾಗೂ ಮತ್ತಿತರ ಧರ್ಮೀಯರು ಏಕಪತ್ನಿ ಕಾನೂನಿನಡಿ ಬಂದರೆ ಬಹುಪತ್ನಿತ್ವವನ್ನು ಆಚರಿಸುವ ವೈಯಕ್ತಿಕ ಕಾನೂನನ್ನು ಅನುಸರಿಸಲು ಮುಸ್ಲಿಂ ಜನಾಂಗಕ್ಕೆ ಅವಕಾಶ ನೀಡಲಾಗಿದೆ. ಹಾಗೇ ಎಲ್ಲರೂ ನ್ಯಾಯಾಲಯದ ಮೂಲಕವೇ ವಿವಾಹ ವಿಚ್ಛೇದನ ಪಡೆಯುವ ಕಾನೂನಿಗೆ ಪ್ರತಿಯಾಗಿ ಮುಸ್ಲಿಂ ಜನಾಂಗಕ್ಕೆ ನ್ಯಾಯಾಲಯದ ಮೆಟ್ಟಿಲನ್ನು ಹತ್ತದೆಯೇ ಗಂಡ ಹೆಂಡತಿಗೆ 'ತಲಾಕ್' ಕೊಡುವ ಅವಕಾಶವನ್ನು ನೀಡಲಾಗಿದೆ. ಇದು ಸಂವಿಧಾನದ ವಿಧಿ ೧೪, ಕಾನೂನಿನ ಮುಂದೆ ಸಮಾನತೆ, ವಿಧಿ ೧೫- ಧರ್ಮ, ಜನಾಂಗ, ಜಾತಿ, ಲಿಂಗ ಅಥವಾ ಹುಟ್ಟಿದ ಸ್ಥಳ ಇವುಗಳ ಆಧಾರದ ಮೇಲೆ ಭೇದಭಾವದ ನಿಷೇಧ, ವಿಧಿ-೨೧, ಜೀವ ಹಾಗೂ ವೈಯಕ್ತಿಕ ಸ್ವಾತಂತ್ರ್ಯದ ರಕ್ಷಣೆ ಇವುಗಳಿಗೆ ವಿರುದ್ಧವಾದುದಾಗಿದೆ. ಈ ಒಂದು ಕಾರಣದಿಂದಲೇ ಭಾರತದಲ್ಲಿ ಹಿಂದೂ ಮತ್ತು ಮುಸಲ್ಮಾನರ ನಡುವೆ ಮಧುರ ಬಾಂಧವ್ಯಕ್ಕೆ ಬದಲು ಆಂತರಿಕವಾಗಿ ದೊಡ್ಡ ಬಿರುಕು ಬಿಟ್ಟಿದ್ದು ಈರ್ವರ ನಡುವೆ ಅಸಮಾಧಾನದ ಹೊಗೆ ಆಡುತ್ತಲೇ ಇದೆ. ಇದು ಹೀಗೆ ಮುಂದುವರೆಯಲು ಬಿಟ್ಟರೆ ಬೆಂಕಿ ಭುಗಿಲೇಳುವುದು, ಆ ತಾಪಕ್ಕೆ ದೇಶ ಒಳಗಾಗುವುದು ಅನಿವಾರ್ಯವಾಗುತ್ತದೆ.

ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯದ ಒಂದು ತೀರ್ಪು ಹೊರ ಬಂದಿದೆ. ಆ ತೀರ್ಪಿಗೆ ಕಾರಣವಾದ ಪ್ರಕರಣದ ಅಂಶಗಳು ಹೀಗಿವೆ :

ಅರ್ಜಿದಾರಳಾದ ಜುಲೇಖಾಬಿ ತನ್ನ ೨೦ನೇ ವರ್ಷದಲ್ಲಿ ೧೯೬೯ರಲ್ಲಿ ಫಜಲ್ ಎಂಬಾತನನ್ನು ವಿವಾಹವಾದಳು. ೧೯೯೧ರಲ್ಲಿ ಆಕೆಯ ಪತಿ ಫಜಲ್ ಮತ್ತೊಬ್ಬ ಮಹಿಳೆಯನ್ನು ಮದುವೆಯಾದ. ಆಗ ಜುಲೇಖಾಬಿ ಅವನೊಂದಿಗೆ ಇರಲು ನಿರಾಕರಿಸಿ ಮಧ್ಯ ಪ್ರದೇಶದ ನ್ಯಾಯಾಲಯದ ಮೊರೆಹೋದಳು. ತಲಾಖ್ ನೀಡಿದ ನಂತರ ಆಕೆಗೆ ಗಂಡ ತಿಂಗಳಿಗೆ ರೂ. ೪೦೦/-ಗಳನ್ನು ಜೀವನಾಂಶವಾಗಿ ನೀಡುತ್ತಿದ್ದ. ಆತ ಅದನ್ನು ೧೯೯೩ರಲ್ಲಿ ನಿಲ್ಲಿಸಿದ. ತಲಾಖ್ ನಾಮ ಜಾರಿಯಾಗಿರುವುದರಿಂದ ತಾನು ಇನ್ನು ಜೀವನಾಂಶ ನೀಡಬೇಕಾಗಿಲ್ಲ ಎಂಬ ನಿಲುವು ತಾಳಿದ. ಅವನ ವಾದವನ್ನು ಒಪ್ಪಿದ ನ್ಯಾಯಾಲಯ ಜುಲೇ ಖಾಬಿಯ ಅರ್ಜಿಯನ್ನು ವಜಾ ಮಾಡಿತು.

**ಸಂವಿಧಾನದ ವಿಧಿ-೪೪, ಏಕ ನಾಗರಿಕ ಸಂಹಿತೆ ಕೂಡ ಆಗೀಗ ಅಷ್ಟಿಷ್ಟು ಚರ್ಚೆಗೆ ಒಳಗಾಗಿ ಸ್ವಾತಂತ್ರ್ಯ ಬಂದಾಗಿನಿಂದಲೂ ಗಂಟೆ ಕಟ್ಟುವವರಿಗಾಗಿ ಕಾಯುತ್ತಲೇ ಕುಳಿತಿದೆ. ಈಗ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರು ಯಾರು ಎಂಬುದೇ ದೇಶದ ಮುಂದಿರುವ ಪ್ರಶ್ನೆ!**

ಅದರ ಮೇಲೆ ಜುಲೇಖಾಬಿ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಹಾಕಿದಳು. ನ್ಯಾಯಮೂರ್ತಿಗಳಾದ ಕೆ. ಟಿ. ಥಾಮಸ್, ಎಸ್. ಎನ್.ವಾ ವರಿಯಾ ಅವರಿದ್ದ ಪೀಠ ಕೇಂದ್ರ ಸರ್ಕಾರ ಮತ್ತು ಅಪೀಲುದಾರಳ ಪತಿ ಫಜಲ್‌ಗೆ ನೋಟೀಸು ಜಾರಿ ಮಾಡಿತು. ತನ್ನ ಗಂಡ ಮರು ಮದುವೆಯಾಗಿರುವುದು ಸಂವಿಧಾನದ ೧೪, ೧೫ ಮತ್ತು ೨೧ನೇ ವಿಧಿಗಳಿಗೆ ವಿರೋಧವಾಗಿರುವುದರಿಂದ ಮೇಲ್ಮನವಿಯನ್ನು ಪುರಸ್ಕರಿಸಬೇಕೆಂದು ಅರಿಕೆ ಮಾಡಿದಳು. ಆಕೆಯ ಮೇಲ್ಮನವಿಯನ್ನು ತಿರಸ್ಕರಿಸಿದ ಸರ್ವೋಚ್ಚ ನ್ಯಾಯಾಲಯ ಆಕೆಗೆ ಸಂಸತ್ತನ್ನು ಸಂಪರ್ಕಿಸಲು ಸೂಚನೆ ನೀಡಿದೆ.

ಶಾ ಬಾನೋ ಪ್ರಕರಣವೂ ಕೂಡ ಇಂಥದ್ದೇ. ಆಕೆ ದಂಡ ಪ್ರಕ್ರಿಯಾ ಸಂಹಿತೆ ಪ್ರಕರಣ ೧೨೫ರ ಅಡಿಯಲ್ಲಿ ಜೀವನಾಂಶಕ್ಕೆ ಅರ್ಜಿ ಹಾಕಿದಳು. ಇಂದೋರ್ ನ್ಯಾಯಾಲಯ ತಿಂಗಳಿಗೆ ರೂ. ೨೫/-ಗಳ ಜೀವನಾಂಶ ಕೊಡುವಂತೆ ಆದೇಶಿಸಿತ್ತು. ಉಚ್ಚ ನ್ಯಾಯಾಲಯ ಅದನ್ನು ಆಕೆಯ ಗಂಡ ವಕೀಲನಾದ ಮೊಹಮ್ಮದ್ ಅಹಮದ್ ಖಾನ್ ತಾನು ಘೋಷಿಸಿಕೊಂಡ ಆದಾಯದ ಆಧಾರದ ಮೇಲೆ ರೂ. ೧೭೯.೨೦ಗಳಿಗೆ ಏರಿಸಿತ್ತು. ಈ ಪ್ರಕರಣ ದೇಶದಾದ್ಯಂತ ವಿವಾದವನ್ನು ಸೃಷ್ಟಿಸಿ ಸಂಸತ್‌ಅನ್ನು ಪ್ರವೇಶಿಸಿ 'ಮುಸ್ಲಿಂ ಮಹಿಳೆಯರ (ವಿಚ್ಛೇದನಾ ರಕ್ಷಣಾ ಹಕ್ಕು) ಕಾಯ್ದೆ ೧೯೮೬'ಅನ್ನು ಜಾರಿಗೊಳಿಸಿತು. ಅದರ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಅನೇಕ ಅರ್ಜಿಗಳು ದಾಖಲಾದುವು. ಅವುಗಳ ತೀರ್ಪನ್ನು ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯ ನೀಡಿದೆ. ಅದನ್ನು ಪತ್ರಿಕೆಗಳು ವರದಿ ಮಾಡಿವೆ. ಸದರಿ ಕಾಯಿದೆಯ ಪ್ರಕರಣ ೩ (೧)(ಡಬ್ಲ್ಯೂ)ನಲ್ಲಿರುವ ಇದ್ದತ್ ಕಾಲಾವಧಿಗೆ (ಅಂದರೆ ೩ ತಿಂಗಳು) ಜೀವನಾಂಶ ಕೊಡಬೇಕು ಎಂದಿದ್ದುದನ್ನು ಅದು ಆ ಅವಧಿಗೆ ಮಾತ್ರ ಸೀಮಿತವಾಗುವಂತಿಲ್ಲ, ಇದ್ದತ್ ಕಾಲಾವಧಿಯ ನಂತರವೂ ಕೊಡಬೇಕು ಎಂದು ತೀರ್ಪು ನೀಡಿದೆ.

ಇದ್ದತ್ ಕಾಯಿದೆಯ ನಂತರ ಮದುವೆಯಾಗದೆ ಇರುವ ಹಾಗೂ ತನ್ನ ಜೀವನಾಂಶವನ್ನು ಸಂಪಾದಿಸಿಕೊಳ್ಳಲಾಗದ ವಿಚ್ಛೇದನ ಪಡೆದ ಮುಸ್ಲಿಂ ಮಹಿಳೆ ಮೇಲ್ಕಂಡ ''ಮುಸ್ಲಿಂ ಮಹಿಳೆಯರ (ವಿಚ್ಛೇದನಾ ರಕ್ಷಣಾ ಹಕ್ಕು) ಕಾಯ್ದೆ ೧೯೮೬''ರ ಪ್ರಕರಣ ೪ರಂತೆ ಆಕೆ ಸತ್ತ ನಂತರ ಆಕೆಯ ಆಸ್ತಿಗೆ ವಾರಸುದಾರರಾಗುವ ಮಕ್ಕಳು, ತಂದೆ ತಾಯಿಯೂ ಸೇರಿದಂತೆ ಸಂಬಂಧಿಕರ ಮೇಲೆ ಆಕೆಯ ಆಸ್ತಿಯ ಬೆಲೆಗೆ ಅನುಗುಣವಾಗಿ ಜೀವನಾಂಶವನ್ನು ಪಡೆಯಬಹುದು. ಹಾಗೆ ಆಕೆಯ ಸಂಬಂಧಿಕರು ಕೊಡುವ ಸ್ಥಿತಿಯಲ್ಲಿಲ್ಲದಿದ್ದರೆ ಮ್ಯಾಜಿಸ್ಟ್ರೇಟರು ಆ ಕಾಯ್ದೆಯಲ್ಲಿ ಅವಕಾಶವಿರುವಂತೆ ರಾಜ್ಯದ 'ವಕ್ಫ್ ಮಂಡಲಿ'ಯನ್ನು ಪಾವತಿಸುವಂತೆ ನಿರ್ದೇಶಿಸಬಹುದು.

ಶಾ ಬಾನೋ ಕೇಸಿನಲ್ಲಿ ಸರ್ವೋಚ್ಚ ನ್ಯಾಯಾಲಯ ಗಂಡನ ಹೊಣೆಗಾರಿಕೆಯನ್ನು ಇದ್ದತ್ ವಾಯಿದೆಗೆ ಸೀಮಿತಗೊಳಿಸಿತ್ತು. ಆದರೆ ಪ್ರಕರಣ ೧೨೫ರ ಸಂದರ್ಭದ ಹಿನ್ನೆಲೆಯಲ್ಲಿ ಅರ್ಥೈಸಿರಲಿಲ್ಲ. ಆದಕಾರಣ ಅಸಹಾಯಕ ಮುಸ್ಲಿಂ ಮಹಿಳೆಗೆ ಇದ್ದತ್ ಅವಧಿಯ ನಂತರ ಗಂಡನಾದವನು ಕೊಡಬೇಕಾದ ಹೊಣೆಗಾರಿಕೆ ಇಲ್ಲ ಎಂದು ಹೇಳುವುದು ಸರಿಯಲ್ಲ ಎನ್ನುವುದು ಸರ್ವೋಚ್ಚ ನ್ಯಾಯಾಲಯದ ದೃಷ್ಟಿಯಾಗಿದ್ದು ಈಗ ಇದ್ದತ್ ಅವಧಿಯ ನಂತರವೂ ಪಾವತಿಸಬೇಕೆಂದು ತೀರ್ಪು ನೀಡಿದೆ.

ದಂಡ ಪ್ರಕ್ರಿಯಾ ಸಂಹಿತೆ ಪ್ರಕರಣ ೧೨೫ರಲ್ಲಿ ಪರಿಹಾರದ ಗರಿಷ್ಠ ಮಿತಿಯನ್ನು ಕೇವಲ ರೂ. ೫೦೦/-ಗಳಿಗೆ ಸೀಮಿತಗೊಳಿಸಲಾಗಿದೆ. ಉತ್ತರ ಪ್ರದೇಶದ ಸರ್ಕಾರ ಅದನ್ನು ರೂ. ೫೦೦೦-ಗಳಿಗೆ ಮಿತಿಗೊಳಿಸಿತ್ತು. ಈಗ ಕೇಂದ್ರ ಸರ್ಕಾರವೂ ಗರಿಷ್ಠ ಮಿತಿಯನ್ನು ತೆಗೆದುಹಾಕಿ ದಂಡಾಧಿಕಾರಿಯವರ ವಿವೇಚನೆಗೆ ಬಿಟ್ಟಿರುವ, ಅಲ್ಲದೆ ಅರ್ಜಿಯನ್ನು ನೋಟೀಸು ಜಾರಿಯಾದ ಅರವತ್ತು ದಿವಸಗಳಲ್ಲಿ ತಾತ್ಕಾಲಿಕ ಪರಿಹಾರ ಕೊಡಬೇಕೆಂಬ ತಿದ್ದುಪಡಿ ತಂದಿರುವುದನ್ನು ಪತ್ರಿಕೆಗಳು ವರದಿ ಮಾಡಿವೆ. ಇದೊಂದು ಸ್ವಾಗತಾರ್ಹ ಅಂಶವಾಗಿದೆ.

(ಮುಂದಿನ ಪುಟಕ್ಕೆ)

**ಭಾ**ರತ ವರ್ಷದಲ್ಲಿ ಕೆಲವೊಂದು ಪಟ್ಟಭದ್ರ ಹಿತಾಸಕ್ತಿಗಳು ಏನಾದರೊಂದು ಶಾಸ್ತ್ರ ಸಂಬಂಧದ ಕಲ್ಪನೆಯನ್ನು ಮುಗ್ಧ ಜನರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಪ್ರಾಚೀನ ಋಷಿ ಮುನಿಗಳ ಹೆಸರಿನಲ್ಲಿ ಅಥವಾ ನಮ್ಮ ಮಹಾನ್ ಗ್ರಂಥಗಳ ಹೆಸರಿನಲ್ಲಿ ದಾಳ ಉರುಳಿಸುವ ಕಾಯಕವನ್ನು ಮಾಡುವುದು ಅವರ ಜಾಯಮಾನ.

೧೯೯೧ರಲ್ಲಿ ''ವಾಸ್ತು ಪರಿಕಲ್ಪನೆ''ಯೆಂಬ ಶಾಸ್ತ್ರದ ಹೆಸರಿನಲ್ಲಿ ಆಂಧ್ರಪ್ರದೇಶದ ಹಲ ಕೆಲವು ಶಾಸ್ತ್ರ ಪಂಡಿತರೆನಿಸಿಕೊಂಡವರು ಸುಂಟರಗಾಳಿಯನ್ನು ಹೊರಡಿಸಿದಾಗ - ಹೇರಳ ಸಂಪತ್ತಿದ್ದು ಕೆಲಸ ಮಾಡಲಾರದ ಸೋಮಾರಿಗಳಿಗೆ ಹಾಲೋಗರ ನೀಡಿದಂತಾದುದೂ ಅದರಿಂದಾಗಿ ವಾಸ್ತು ಹೆಸರಿನಲ್ಲಿ ಬೊಗಳೆ ಪಂಡಿತರ ಹೊಸ ಸಮೂಹವೇ ಬೆಳೆದು ಬಂದು ಮುಗ್ಧ ಜನರ ಮನಸ್ಸಿನ ಮೇಲೆ ಗಾಢ ಪರಿಣಾಮವಾಗುವಂತೆ ಪ್ರಪ್ರಥಮವಾಗಿ ಮನೆಯ ಗೃಹಿಣಿಯು ಮಾನಸಿಕ ಕ್ಷೋಭೆಗೆ ತುತ್ತಾಗುವಂತೆ ಮಾಡಿ ಅವರಿಂದಾಗಿ ಪುರುಷರು ವಾಸ್ತು ಭ್ರಮಾಲೋಕಕ್ಕೆ ಬಂದಿಯಾಗಿ ತೆರಳಿ ತಮ್ಮ ಮನೆಗಳನ್ನು ಹಲವಾರು ಲಕ್ಷಗಳ ಖರ್ಚಿನಿಂದ ಪಂಡಿತರ ಮಾರ್ಗದರ್ಶನದಂತೆ ಮಾರ್ಪಡಿಸುತ್ತಿರುವುದು ಇಂದಿಗೂ ನಿಲ್ಲದ ಪೀಡೆಯಾಗಿ ಬೆಳೆದಿದೆ.

ಇದೇ ಸಂದರ್ಭ ಇತ್ತೀಚಿನ ದಿನಗಳಲ್ಲಿ ಚೈನ ಮೂಲವನ್ನುದ್ಧರಿಸಿ ಹೊಸ ಬಗೆಯ ಪೀಡನೆಯಾರಂಭವಾಗಿರುವುದು ವಾಸ್ತವ ಸಂಗತಿ. ಆದರೆ ಈ ಸಾರಿ ವಾಸ್ತು ಪರಿಕಲ್ಪನೆಯಿಂದ

# ವಾಸ್ತು ಭ್ರಮಾಲೋಕ - ನೂತನ ಆವಿಷ್ಕಾರ

ಬೆಣ್ಣೆ ಮೆದ್ದವರೆಂದರೆ ತಯಾರಕರು. ಉದಾಹರಣೆಗಾಗಿ, ಒಂದು ಬೊಂಬೆ-ಎರಡೂ ಕೈಗಳನ್ನು ಮೇಲೆತ್ತಿ ಹಿಡಿದು ತನ್ನ ಅಗಾಧ ಆಳತೆಯ ಹೊಟ್ಟೆಯನ್ನು ನಗ್ನವಾಗಿ ತೋರಿಸುತ್ತಾ ನಿರಾಳವಾಗಿ ಮೂವತ್ತೆರಡು ಹಲ್ಲುಗಳನ್ನೂ ತೋರಿಸುತ್ತಾ ನಿಂತಿರುವ ಭಂಗಿಯ ಬೊಂಬೆಯೊಂದು ಇಂದು ಜನರ ಮನಸ್ಸನ್ನು ಪವಾಡ ಪ್ರಪಂಚಕ್ಕೆ ಕೊಂಡೊಯ್ಯುತ್ತಿದೆ. ಒಂದೊಮ್ಮೆ– ''ಹ್ಯಾಪಿ ಮ್ಯಾನ್'' – ಅಥವಾ ''ಲಾಫಿಂಗ್ ಬುದ್ಧ'' ಎಂಬ ಹೆಸರಿನಿಂದ ಕರೆಯಲ್ಪಟ್ಟು ಮನೆಯ ಅಲಂಕರಣಕ್ಕಾಗಿ ಇಡುವ ಆ ಮೂರ್ತಿ ಈಗ ''ಕುಬೇರ''ನೆನಿಸಿಕೊಂಡು – ಅದನ್ನು ಹೊಂದಿದಲ್ಲಿ ಹಣದ ಸುರಿಮಳೆಯಾಗುತ್ತದೆನ್ನುವ, ಅದೃಷ್ಟವು ಬಾಗಿಲು ಬಡಿಯುತ್ತದೆನ್ನುವ ಭ್ರಮಾಲೋಕದಲ್ಲಿ ಸಾಮಾನ್ಯ ನಾಗರಿಕ ಕೊಚ್ಚಿಹೋಗುತ್ತಿದ್ದಾನೆ. ಆ ಬೊಂಬೆಗಳು ಇಂದು ಮಣ್ಣು, ಪ್ಲಾಸ್ಟರ್ ಆಫ್ ಪ್ಯಾರಿಸ್, ಬ್ಲಾಕ್ ಮೆಟಲ್, ಹಿತ್ತಾಳೆ, ಬಿಳಿಲೋಹ ಹಾಗೂ ಪೆಪ್ಪಿಯರ್ ಮ್ಯಾಷನಲ್ಲಿ ಮಾರುಕಟ್ಟೆಯನ್ನು ಸೂರೆಗೊಳ್ಳುತ್ತಿದೆ. ಕೆಲವು ಮುಂದುವರಿದ ಭಾವುಕರು ಆ ಅದೃಷ್ಟದ ಬೊಂಬೆಯನ್ನು ತಾವು ಸ್ವತಃ ಖರೀದಿಸಿದಲ್ಲಿ ಅದೃಷ್ಟ ಒಲಿಯದೆಂಬ ಭಾವನೆಯಿಂದ ಹಾಗೂ ವಾಸ್ತು ಪಂಡಿತರ ಮಾತಿಗೆ ಮರುಳಾಗಿ ತಮ್ಮ ಮಗಳಿಗಾಗಿ ತಾವು ಖರೀದಿಸಿ ನೀಡುವುದೂ, ತಮಗಾಗಿ ಮಗಳಿಂದ ಖರೀದಿಸಿ ನೀಡಿದಂತೆ ಮಾಡಿ ಪಡೆದು ಧನ್ಯರಾಗುವುದು ಹಾಗೂ ತಮ್ಮ ಮನೆಯ ಕಪಾಟು, ದೇವರ ಮನೆ, ಮೇಜು, ಗೋಡೆ ಇತ್ಯಾದಿ ಸ್ಥಳದಲ್ಲಿ ಇಡುವುದೂ ಪ್ರಸ್ತುತ ನಡೆಯುತ್ತಿರುವ ಹಾಸ್ಯಾಸ್ಪದ ವಿದ್ಯಮಾನ. ಈ ಭಾವುಕತೆಯ ಮೋಡಿಗೊಳಗಾದವರಲ್ಲಿ ಹೆಚ್ಚಿನವರು ವಿದ್ಯಾವಂತರೆನ್ನುವುದು ಗಮನಾರ್ಹ.

ಕಷ್ಟ ಪಡದೆ ಸುಖ-ಸಂಪತ್ತು ತಮ್ಮದಾಗಬೇಕೆನ್ನುವ ಸೋಮಾರಿ ಮಂದಿಯ ಬುದ್ಧಿಯ ಮೇಲೆ ಆಕ್ರಮಣ ಮಾಡಿದ ಈ ಬೊಗಳೆ ವಾಸ್ತು ಪಂಡಿತರು ಇನ್ನೊಂದು ವಸ್ತುವನ್ನು ಸಾಮಾನ್ಯರು ಬಳಸಲು ಪ್ರೋತ್ಸಾಹ ನೀಡಿದುದರ ಫಲವಾಗಿ ಒಂದೊಮ್ಮೆ ಮೂಲೆಗುಂಪಾಗಿದ್ದ ಹಳೆಯ ಕಾಲದ- ''ಚೈಮಿಂಗ್ ಬೆಲ್'' ಅರ್ಥಾತ್ ಒಂದು ಫಲಕದಿಂದ ಜೋತಾಡುವ ನಾಲ್ಕಾರು ಲೋಹ ನಳ್ಳಿಗಳು, ಅದು ಸ್ವರ ಹೊರಡಿಸುವಂತೆ ಮಧ್ಯದಲ್ಲಿ ಲೋಹದ ಗುಂಡೊಂದನ್ನು ನೇತಾಡಿಸಿ ಕೆಳಗೊಂದು ಸಣ್ಣ ಫಲಕವು ಆ ದಾರದ ತುದಿಯಲ್ಲಿ ಕಟ್ಟಲ್ಪಟ್ಟು ಗಾಳಿ ಬಂದಾಗ ಆ ಫಲಕ ಅಲುಗಾಡಿದಾಗ ಮಧ್ಯದ ಗುಂಡು ಲೋಹದ ನಳ್ಳಿಗಳಿಗೆ ಬಡಿದು ವಿವಿಧ ಸ್ವರ ಬರುವಂತಾಗುವುದು ಈ ''ಚೈಮಿಂಗ್ ಬೆಲ್''ನ ವಿನ್ಯಾಸ. ಇದನ್ನು ಹೆಚ್ಚಾಗಿ ''ಫ್ಯಾನ್'' ಗಾಳಿ ಬರುವ ಸ್ಥಳದಲ್ಲಿಯಾಗಲಿ, ಕಿಟಕಿ ಪಕ್ಕದಲ್ಲಿಯಾಗಲಿ ಕಟ್ಟಿದರೆ ಅದರಿಂದಾಗಿ ಬರುವ ಮಧುರ ಸ್ವರದಿಂದಾಗಿ ಅದೃಷ್ಟ ಒಲಿಯುವುದೆಂಬ ಭ್ರಮಾಲೋಕಕ್ಕೆ ಮುಗ್ಧ ಜನರು ಸಾಗುತ್ತಿರುವುದು ಇಂದಿನ ವಿಶೇಷ ವಿದ್ಯಮಾನ. ಇದರ ಮಧುರ ನಿನಾದದಿಂದ ಭೂತ ಪ್ರೇತಗಳು ಮನೆಯ ಹತ್ತಿರ ಸುಳಿಯಲಾರವೆಂಬ ವಿವರಣೆ ಈ ವಾಸ್ತು ಪಂಡಿತರಿಂದ ನೀಡಲ್ಪಡುತ್ತಿದೆ.

ಆದರೆ ನಿಜಾರ್ಥದಲ್ಲಿ ಆ ವಸ್ತುಗಳ ಮಾರಾಟದಿಂದ ಅದೃಷ್ಟ ಕುದುರಿದುದು ಅದರ ತಯಾರಕರು ಹಾಗೂ ಮಾರಾಟಗಾರರಿಗೆ ಮಾತ್ರ. ಪ್ರಸ್ತುತ ಈ ಹ್ಯಾಪಿಮ್ಯಾನ್-ಅರ್ಥಾತ್-ಕುಬೇರ ಮೂರ್ತಿ ಹಾಗೂ ''ಚೈಮಿಂಗ್ ಬೆಲ್'' ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಮಾರುಕಟ್ಟೆ ಪ್ರವೇಶಿಸಿ ಸಾಮಾನ್ಯರ ಮನೆ ಸೇರುತ್ತಿರುವುದು ಸತ್ಯಸಂಗತಿ.

ಈಗಾಗಲೇ ಪಿರಮಿಡ್ ಮಾದರಿಯ ಪ್ಲಾಸ್ಟಿಕ್-ಪೇಪರ್ ಹಾಗೂ ಲೋಹದ ಮಾದರಿಗಳು ಮತ್ತು ವಿಶೇಷವಾಗಿ ''ಶ್ರೀ ಚಕ್ರದ'' ಮಾದರಿಗಳು ಭಾವುಕರ ಮನೆ ಆಫೀಸುಗಳಲ್ಲಿ ವಿರಾಜಿಸುತ್ತಿರುವುದು ಇನ್ನೊಂದು ತಿರುವು. ಪ್ರಾಯಶಃ ಮುಂದಿನ ದಿನಗಳಲ್ಲಿ 'ಹ್ಯಾಪಿಮ್ಯಾನ್' ಬೊಂಬೆಯ ಭ್ರಮೆ ಕಡಿಮೆಯಾದಂತೆ ಈ ಪಿರಾಮಿಡ್ ಹಾಗೂ ಶ್ರೀ ಚಕ್ರದ ಮಾದರಿಗಳು ಸಾಮಾನ್ಯರ ಭ್ರಮಾಲೋಕವನ್ನು ಪ್ರವೇಶಿಸಿ ಸುಂಟರಗಾಳಿಯಾಗಬಹುದು.

ಸರದಿಯಲ್ಲಿ ಕಾಯುತ್ತಿರುವ ಇನ್ನೊಂದು ವಸ್ತುವಾಗಿ 'ದೃಷ್ಟಿ ಗಣೇಶ' ಫೋಟೋ ಅಥವಾ ಮೂರ್ತಿ ಸರದಿಯಲ್ಲಿ ನಿಂತಿದೆ. ಸುಲಭವಾಗಿ ಸಂಪತ್ತು ದೊರಕಲು ವಾಸ್ತು ಪಂಡಿತರ ಹತ್ತಿರ ಜನರು ಸಾಲಾಗಿ ನುಗ್ಗುತ್ತಿರುವುದು ಹಾಗೂ ಅವರು ಹೊಸ ಹೊಸ ಆವಿಷ್ಕಾರದ ವಸ್ತುಗಳ ಖರೀದಿಗೆ ಪ್ರೇರಣೆ ನೀಡುವುದೂ ಇಂದು ನಡೆಯುತ್ತಿರುವ ಆಶ್ಚರ್ಯಕರ ವಿದ್ಯಮಾನ. ಒಟ್ಟಾರೆ ''ವಾಸ್ತು ಪಂಡಿತರ'' ಜೇಬುಗಳು ಝಣ ಝಣವೆನ್ನುತ್ತಿರುವುದು ಕಟು ವಾಸ್ತವ ಸತ್ಯ.

**ಕೋಟೇಶ್ವರ ಸೂರ್ಯನಾರಾಯಣ ರಾವ್**
ಬೆಂಗಳೂರು

---

*ಹಿಂದಿನ ಪುಟದಿಂದ*

ವಿವಾಹ ವಿಚ್ಛೇದನಾ ಸ್ವಾತಂತ್ರ್ಯವನ್ನು ಹಾಗೂ ನಾಲ್ವರು ಪತ್ನಿಯರನ್ನು ಹೊಂದುವ ಅವಕಾಶವನ್ನು ಮುಸ್ಲಿಂ ಜನಾಂಗಕ್ಕೆ ಮಾತ್ರ ಅವರ ಧಾರ್ಮಿಕ ಹಿನ್ನೆಲೆ ಇದೆ ಎಂಬ ಕಾರಣಕ್ಕೆ ಅವಕಾಶ ಕೊಟ್ಟು ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರಗೆ ಉಳಿಸಿರುವುದು ಒಂದು ರಾಷ್ಟ್ರದ ಬೆಳವಣಿಗೆ ಹಾಗೂ ಸಮಾನತಾ ದೃಷ್ಟಿಯಿಂದ ಎಷ್ಟು ಸರಿ ? ಇದರಿಂದ ಮುಸ್ಲಿಂ ಮಹಿಳೆಯರ ನ್ಯಾಯಯುತವಾದ ಹಾಗೂ ಸಂವಿಧಾನಾತ್ಮಕ ಹಕ್ಕಿಗೆ ಮತ್ತು ಗೌರವಾನ್ವಿತ ಬದುಕಿಗೆ ಧಕ್ಕೆಯುಂಟಾಗುತ್ತಿಲ್ಲವೆ ? ಮುಸ್ಲಿಂ ಸಮುದಾಯದ ಪುರುಷ ಪ್ರಧಾನ ವ್ಯವಸ್ಥೆ ಮುಸ್ಲಿಂ ಮಹಿಳೆಯರನ್ನು ಕೇವಲ ಆಸ್ತಿಯಂತೆ, ಒಂದು ವಸ್ತುವಿನಂತೆ ನಡೆಸಿಕೊಳ್ಳಲು ಅವಕಾಶ ನೀಡುವುದು ಒಂದು ರಾಷ್ಟ್ರದ ಒಟ್ಟು ಕಾನೂನು ದೃಷ್ಟಿಯಿಂದ ನ್ಯಾಯಸಮ್ಮತವಾದುದೆ ? 'ಯಾವ ಕಾರಣಕ್ಕೂ ಒಂದಕ್ಷರವನ್ನೂ ಬದಲಿಸಲು ಅವಕಾಶವಿರದ' ಮುಸಲ್ಮಾನರ ಧರ್ಮಗ್ರಂಥ 'ಕುರಾನಿ'ನಲ್ಲಿ:

''ನಿಮ್ಮ ಸ್ತ್ರೀಯರು ನಿಮಗೆ ಹೊಲವಾಗಿರುತ್ತಾರೆ, ಅಂತಲೇ ನಿಮ್ಮ ಹೊಲದಲ್ಲಿ ನೀವಿಚ್ಛಿಸುವಂತೆ ಪ್ರವೇಶಿಸಿರಿ. ನಿಮ್ಮ ಭವಿಷ್ಯಕ್ಕೆ ಸಂಗ್ರಹಿಸಿಕೊಳ್ಳಿ'' (ಅಲ್ ಬಕ : ೨-೨೩೩);

''ಸ್ತ್ರೀಯರು, ಮಕ್ಕಳು, ಬೆಳ್ಳಿ ಬಂಗಾರಗಳ ಸಂಗ್ರಹ ರಾಶಿ, ಉತ್ತಮ ಜಾತಿಯ ಕುದುರೆಗಳು, ಜಾನುವಾರುಗಳು, ಕೃಷಿ ಭೂಮಿ ಈ (ಎಲ್ಲಾ) ಸುಖೋಪಭೋಗ ಸಾಧನಗಳೊಂದಿಗಿರುವ ಪ್ರೇಮ ಜನರಿಗೆ ನಯನ ಮನೋಹರಗೊಳಿಸಲಾಗಿದೆ'' (ಅಲ್ ಇಮ್ರಾನ್ : ೩-೧೪) ಎಂದು ಹೇಳಿ ಸ್ತ್ರೀಯರನ್ನು ಆಸ್ತಿ ಮತ್ತು ವಸ್ತುಗಳೊಂದಿಗೆ ಸಮೀಕರಿಸಲಾಗಿದೆ.

ಅಲ್ಲದೆ ''ತಬ್ಬಲಿಗಳ ಸಂಬಂಧ ನ್ಯಾಯಪಾಲಿಸಲಾರಿರೆಂದು ನೀವು ಭಯಪಟ್ಟರೆ, ನೀವಿಷ್ಟಪಡುವ ಸ್ತ್ರೀಯರನ್ನು ಇಬ್ಬರನ್ನೋ, ಮೂವರನ್ನೋ, ನಾಲ್ವರನ್ನೋ ವಿವಾಹ ಮಾಡಿಕೊಳ್ಳಿರಿ'' (ಅನ್-ನಿಸಾ: ೪-೩) ಎನ್ನಲಾಗಿದೆ.

ಧರ್ಮಗ್ರಂಥದ ಈ ಅಂಶ ಅಂದಿನ ಕಾಲಕ್ಕೆ ಎಂದರೆ ಕುರಾನ್ ಅವತರಣಗೊಂಡ ಕಾಲಕ್ಕೆ ಅವಶ್ಯ ಇದ್ದಿರಬಹುದು. ಆದರೆ ಅದನ್ನು ಹಾಗೆಯೇ ಅನುಸರಿಸುವುದು ಇಂದಿನ ಕಾಲಕ್ಕೆ ಅವಶ್ಯಕತೆ ಇದೆಯೆ ? ಟರ್ಕಿ ದೇಶದಲ್ಲಿ ಸುಧಾರಣೆ ತರಲು ಸಾಧ್ಯವಾಗಿದ್ದರೆ ಭಾರತದ ಮುಸ್ಲಿಮರು ಸುಧಾರಣೆ ಮಾಡಿಕೊಳ್ಳಲು ಇರುವ ಅಡ್ಡಿಯಾದರೂ ಯಾವುದು ? ಭಾರತದ ಮುಸ್ಲಿಮರು ಏಕೆ ಮರು ಚಿಂತಿಸಬಾರದು ?

ಶಾ ಬಾನೋ ಪ್ರಕರಣದಲ್ಲಿ 'ಮುಸ್ಲಿಂ ಮಹಿಳೆಯರ (ವಿಚ್ಛೇದನಾ ರಕ್ಷಣಾ ಹಕ್ಕು) ಕಾಯ್ದೆ ೧೯೮೬'ಅನ್ನು ಸಂಸತ್ತು ಜಾರಿಗೊಳಿಸಿದ್ದರೂ ಅದರಿಂದ ಹೆಚ್ಚು ಪ್ರಯೋಜನವಾದಂತೆ ಕಂಡುಬರುವುದಿಲ್ಲ. ಇನ್ನು ಜುಲೇಖಾಬಿ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಜುಲೇಖಾಬಿಗೆ ಸಂಸತ್ತನ್ನು ಸಂಪರ್ಕಿಸುವಂತೆ ಸೂಚಿಸಿರುವುದರಿಂದ ಈ ವಿಷಯ ಶಾಸಕಾಂಗದ ಹಾಗೂ ಸಮಾಜದ ಜವಾಬ್ದಾರಿಯಾಗಿದೆ ಎಂಬುದನ್ನು ಸೂಚಿಸುತ್ತದೆ.

**ಜ. ಹೊ. ನಾರಾಯಣಸ್ವಾಮಿ**
ವಕೀಲರು, ೨೦೮೪/ಎ, ಉತ್ತರ ಬಡಾವಣೆ, ಹಾಸನ-೫೭೩ ೨೦೧




## ಬರಲಿದೆ ಚಾಲಕಶಕ್ತಿಯಾಗಿ

# ಸಸ್ಯ ಮೂಲ ಇಂಧನ

**ಕಾ**ರು, ಬಸ್ಸು, ರೈಲು ಇವುಗಳಿಂದ ನಮಗೆ ಆಗುವ ಅನುಕೂಲತೆಗಳ ಅರಿವು ನಮಗೆಲ್ಲ ಇದೆ. ಸಾರಿಗೆ ವಾಹನಗಳ ಚಕ್ರಗಳಿಗಾಗಲೀ, ಬೃಹದ್ ಉದ್ದಿಮೆಗಳ ಯಂತ್ರಗಳ ಚಕ್ರಗಳಿಗಾಗಲೀ ಚಾಲಕ ಶಕ್ತಿಯನ್ನು ಕೊಡುವ ಇಂಧನ ಅಂದರೆ ಪೆಟ್ರೋಲಿಯಂದಿಂದ ದೊರೆಯುವ ಡೀಸಲ್ ಎಣ್ಣೆ ಅಥವಾ ಪೆಟ್ರೋಲಿಯಂ ಡೀಸಲ್. ಪ್ರತಿ ವರ್ಷ ಮಿಲಿಯನ್ ಟನ್‌ಗಟ್ಟಲೆ ಪೆಟ್ರೋಲಿಯಂ ಡೀಸಲ್ ಎಣ್ಣೆಯನ್ನು ಈ ಯಂತ್ರಗಳಿಗೆ ಬಳಸಲಾಗುತ್ತದೆ. ಅಂದಾಗ ಡೀಸಲ್ ಎಣ್ಣೆಯ ಮೇಲೆ ನಾವೆಷ್ಟು ಅವಲಂಬಿಸಿದ್ದೇವೆ ಅನ್ನುವುದರ ಅರಿವಾಗಲಿಕ್ಕೆ ಸಾಕು. ಪೆಟ್ರೋಲಿಯಂ ನಮಗೆ ಯಾವ ಪ್ರಯತ್ನವಿಲ್ಲದೆ ಸಹಜವಾಗಿ ದೊರೆಯುತ್ತದೆ ಎಂಬುದು ನಮ್ಮ ಗ್ರಹಿಕೆ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಭೂಗರ್ಭದಲ್ಲಿ ಪೆಟ್ರೋಲಿಯಂ ಸಂಗ್ರಹ ದಿನೇ ದಿನೇ ಕಡಿಮೆಯಾಗುತ್ತಲಿದೆ. ಹೀಗಾಗಿ ಪೆಟ್ರೋಲಿಯಂ ಡೀಸಲ್ ನಮ್ಮ ಬೇಡಿಕೆಯನ್ನು ಎಷ್ಟು ದಿವಸ ಪೂರೈಸ ಬಲ್ಲದು ಎಂಬುದು ಪ್ರಪಂಚದಲ್ಲಿ ಈಗ ಚಿಂತೆಗೆ ಕಾರಣವಾಗಿದೆ. ಪರಿಸರ ಪಾವಿತ್ರ್ಯದ ಬಗ್ಗೆ ಹೆಚ್ಚಿನ ಕಳಕಳಿ ಮತ್ತು ದಿನೇ ದಿನೇ ಹೆಚ್ಚುತ್ತಿರುವ ಚಾಲಕ ಶಕ್ತಿಯ ಬಳಕೆಯಿಂದಾಗಿ ಪರ್ಯಾಯ ಚಾಲಕ ಶಕ್ತಿಯನ್ನು ಕಂಡುಹಿಡಿಯುವಲ್ಲಿ ಪ್ರಪಂಚದಾದ್ಯಂತ ಸಂಶೋಧನೆ ತ್ವರಿತಗೊಳ್ಳುತ್ತಲಿದೆ. ಈ ದಿಶೆಯಲ್ಲಿ ಈಗ ವಿಜ್ಞಾನಿಗಳ ಲಕ್ಷ್ಯ ಡೀಸಲ್ ಎಂಜಿನ್ನುಗಳಲ್ಲಿ ಬಳಸಲೋಸುಗ ಜೈವಿಕ ಇಂಧನಗಳತ್ತ (Bio Fuel) ಹರಿಯುತ್ತಲಿದೆ. ಈ ಸಂದರ್ಭದಲ್ಲಿ ಜೈವಿಕ ಇಂಧನ ಅಂದರೆ ಸಸ್ಯಗಳು ಕೊಡುವ ತೈಲಧಾರಿ ಬೀಜಗಳಿಂದ ಪಡೆದ ಇಂಧನ ಎಂದು ಅರ್ಥೈಸಲಾಗಿದೆ. ಪೆಟ್ರೋಲಿಯಂ ಪುನಃ ಪುನಃ ಭೂಮಿಯಲ್ಲಿ ಉತ್ಪಾದಿಸಬಲ್ಲ ವಸ್ತುವಲ್ಲ. ಆದರೆ ಬಯೋ ಡೀಸಲ್ ಅನ್ನು ಪುನಃ ಪುನಃ ಉತ್ಪಾದಿಸಬಹುದು. ಸಸ್ಯಗಳ ಎಣ್ಣೆ ಮತ್ತು ಪ್ರಾಣಿಗಳ ನೆಣ ಇವುಗಳಿಂದ ಬಯೋ ಡೀಸೆಲ್ ತಯಾರಿಸುವಲ್ಲಿ ಯಶಸ್ವೀ ಸಂಶೋಧನೆ ಭರದಿಂದ ಸಾಗಿದೆ. ಅದೂ ಅಲ್ಲದೆ ಬಯೊ ಡೀಸಲ್‌ಅನ್ನು ಉತ್ಪಾದಿಸುವ ತಾಂತ್ರಿಕ ವಿಧಾನಗಳನ್ನೂ ಕಂಡುಹಿಡಿಯಲಾಗಿದೆ. ಈ ರೀತಿ ಪಡೆದ ಡೀಸಲ್ ಎಣ್ಣೆಯನ್ನು ಪ್ರತ್ಯೇಕವಾಗಿ ಅಥವಾ ಪೆಟ್ರೋಲಿಯಂ ಡೀಸಲ್ ಜೊತೆಗೆ ಮಿಶ್ರಣಮಾಡಿ ಡೀಸಲ್ ಎಂಜಿನ್ನುಗಳಲ್ಲಿ ಉಪಯೋಗಿಸಬಹುದು ಎಂದು ಸಿದ್ಧಪಡಿಸಲಾಗಿದೆ.

### ಬಯೋ ಡೀಸಲ್ ತಯಾರಿಕೆ

ಮಾನವ ಅಗ್ನಿಯ ಉಪಯೋಗವನ್ನು ಕಂಡುಹಿಡಿದಂದಿನಿಂದ ಇಂದಿನವರೆಗೆ ಸಸ್ಯಗಳು ಮಹತ್ವದ ಹಾಗೂ ವಿಶ್ವಸನೀಯವಾಗಿ ನವೀಕರಿಸಬಲ್ಲ ಶಕ್ತಿಯ ಆಕರಗಳಾಗಿವೆ. ಭೂಮಂಡಲದ ಒಟ್ಟು ಶಕ್ತಿಯ ಅಂತಿಮ ಆಕರವಾದ ಸೌರಶಕ್ತಿಯನ್ನು ಸಸ್ಯಗಳು ದ್ಯುತಿ ಸಂಶ್ಲೇಷಣೆ (Photosynthesis) ಕಾರ್ಯದಿಂದ ತಮ್ಮಲ್ಲಿ ಶೇಖರಿಸಿಕೊಂಡಿರುತ್ತವೆ. ಸಸ್ಯದ್ರವ್ಯವನ್ನು ಸೌದೆ, ಬೆರಣಿ ಇತ್ಯಾದಿಯಾಗಿ ಘನರೂಪದಲ್ಲಿ ಇಂಧನವಾಗಿ ಉಪಯೋಗಿಸುವುದು ಸರ್ವೇಸಾಧಾರಣ. ಆದರೆ ಸಸ್ಯದ್ರವ್ಯವನ್ನು ದ್ರವ ಇಂಧನವಾಗಿ ಬಳಸಿಕೊಳ್ಳಲು ಭೌತಿಕ, ರಾಸಾಯನಿಕ ಮತ್ತು ಜೀವರಾಸಾಯನಿಕ ತಂತ್ರಗಳನ್ನು ಉಪಯೋಗಿಸಬೇಕಾಗುತ್ತದೆ. ಸಸ್ಯಗಳಿಂದ ಮುಖ್ಯವಾಗಿ ಮೂರು ತರಹದ ದ್ರವ ಇಂಧನಗಳನ್ನು ಪಡೆಯಬಹುದು. ೧) ವನಸ್ಪತಿ ತೈಲ ೨) ಆಲ್ಕೋಹಾಲ್ ೩) ದ್ರವ ಹೈಡ್ರೋಕಾರ್ಬನ್ನುಗಳು. ವನಸ್ಪತಿ ತೈಲದಿಂದ ಬಯೋ ಡೀಸಲ್ ಅನ್ನು ತಯಾರಿಸುವಲ್ಲಿ ರಸಾಯನ ಶಾಸ್ತ್ರಜ್ಞರು ಕಾರ್ಯತತ್ಪರರಾಗಿದ್ದಾರೆ. ಸಾಮಾನ್ಯವಾಗಿ ಬೀಜಗಳಲ್ಲಿ ಸಸ್ಯದ ಯಾವುದೇ ಭಾಗದಲ್ಲಿರುವುದಕ್ಕಿಂತ ಅಧಿಕ ಪ್ರಮಾಣದಲ್ಲಿ ತೈಲ ಸಂಗ್ರಹವಾಗಿರುತ್ತದೆ. ತೈಲ ಬೀಜಗಳು ಸಾಧಾರಣವಾಗಿ ತೂಕರೀತ್ಯಾ ೨೦-೩೦% ತೈಲವನ್ನು ಹೊಂದಿರುತ್ತವೆ. ರೇಪ್ (Rape Fruit) ದಂತಹ ಸಸ್ಯಗಳ ಬೀಜಗಳು ೪೨%ವರೆಗೂ ತೈಲವನ್ನು ಹೊಂದಿರುತ್ತವೆ. ಆದ್ದರಿಂದ ಬಯೋ ಡೀಸಲ್ ತಯಾರಿಸುವಲ್ಲಿ ರೇಪ್ ಎಣ್ಣೆ ಮುಖ್ಯ ಆಕರವಾಗಿದೆ. ಅನಂತರ ಸೂರ್ಯಕಾಂತಿ ಎಣ್ಣೆ, ಸೋಯಾಬೀನ್ ಎಣ್ಣೆ ಪಾಮೆಣ್ಣೆ, ಅಗಸಿ ಎಣ್ಣೆ ಇವುಗಳ ಸ್ಥಾನ. (ವಿನ್ಯಾಸ -೧)

*ವಿನ್ಯಾಸ ೧. ಬಯೋ ಡೀಸಲ್ ಉತ್ಪಾದನೆಗೆ ಬಳಸುವ ಕಚ್ಚಾಮಾಲು ಮತ್ತು ಅವುಗಳ ಪ್ರಮಾಣ*

| ಹೆಸರು | ಪ್ರಮಾಣ |
|---|---|
| ರೇಪ್ ಬೀಜ ತೈಲ | ೮೪% |
| ಸೂರ್ಯಕಾಂತಿ ಬೀಜ ತೈಲ | ೧೩% |
| ಸೋಯಾಬೀನ್ ತೈಲ | ೧% |
| ಪಾಮೆಣ್ಣೆ | ೧% |
| ಇತರೆ ತೈಲಗಳು | ೧% |

*ರೇಪ್: ಯೂರೋಪ್ ದೇಶಗಳಲ್ಲಿ ಕುರಿಗಳ ಮೇವಿಗಾಗಿ ಬೆಳೆಸುವ ಒಂದು ಸಸ್ಯ*

ವನಸ್ಪತಿ ತೈಲ ಅಂದರೆ ರಾಸಾಯನಿಕವಾಗಿ ಗ್ಲಿಸರಾಲ್ ಮತ್ತು ಮೇದಾಮ್ಲ (Fatty Acids) ಇವುಗಳಿಂದುಂಟಾದ ಟ್ರೈ ಎಸ್ಟರುಗಳು. ಈ ತರಹದ ಮೇದಾಮ್ಲದ ಎಸ್ಟರುಗಳು ಬಯೋ ಡೀಸಲ್ ಆಗಿ ಉಪಯೋಗವಾಗುವುದಿಲ್ಲ. ಗ್ಲಿಸರಾಲ್‌ದ ಬದಲಾಗಿ ಕಡಿಮೆ ಅಣುತೂಕವಿರುವ ಸರಳ ಆಲ್ಕೋಹಾಲ್‌ದ ಮೇದಾಮ್ಲದ ಎಸ್ಟರುಗಳು ಬಯೋ ಡೀಸಲ್ ಆಗಿ ವರ್ತಿಸಬಲ್ಲವು. ಆದ್ದರಿಂದ ವನಸ್ಪತಿ

ಡಾ॥ ಸರ್ವೋತ್ತಮ ಅಂಬೇಕರ

ತೈಲಗಳನ್ನು ಎಸ್ಟರೀಕರಣಾಂತರದಿಂದ (Trans esterification) ಬಯೋ ಡೀಸಲ್ ಆಗಿ ಪರಿವರ್ತಿಸುತ್ತಾರೆ. ಅಂದರೆ ಗ್ಲಿಸರಾಲ್ ಆಲ್ಕೋಹಾಲ್ ಪುಂಜದ ಬದಲಾಗಿ ಮೀಥೈಲ್ ಆಲ್ಕೋಹಾಲ್ ಪುಂಜವನ್ನು ಈ ಮೇದಾಮ್ಲಗಳಿಗೆ ಜೋಡಿಸುವುದರಿಂದ ಬಯೋ ಡೀಸಲ್ ತಯಾರಿಸುವುದು. (ವಿನ್ಯಾಸ ೨). ಇದಕ್ಕಾಗಿ ವನಸ್ಪತಿ ತೈಲವನ್ನು ಅಧಿಕ ಪ್ರಮಾಣದ ಮೀಥೈಲ್ ಆಲ್ಕೋಹಾಲ್‌ದಲ್ಲಿ, ಸೋಡಿಯಂ ಹೈಡ್ರೋಕ್ಸಾಯಿಡ್‌ದಂತಹ ವೇಗವರ್ಧಕ ಹಾಜರಿಯಲ್ಲಿ ೫೦-೭೦°ಸೆ. ಉಷ್ಣತೆಯಲ್ಲಿ ವರ್ತಿಸುತ್ತಾರೆ. ಆಗ ಮೇದಾಮ್ಲಗಳಲ್ಲಿ ಗ್ಲಿಸರಾಲ್ ಆಲ್ಕೋಹಾಲ್‌ದ ಬದಲಾಗಿ ಮೀಥೈಲ್ ಆಲ್ಕೋಹಾಲ್‌ದ ಪುಂಜ ಪ್ರತಿಷ್ಠಾಪನೆಗೊಂಡು ಮೇದಾಮ್ಲದ ಮೀಥೈಲ್ ಎಸ್ಟರುಗಳು ಉತ್ಪನ್ನವಾಗುತ್ತವೆ. ಇವೇ ಬಯೋ ಡೀಸಲ್. ಕ್ರಿಯಾಮಿಶ್ರಣದಲ್ಲಿರುವ ಗ್ಲಿಸರಾಲ್, ಬಾಕಿ ಉಳಿದ ಮೀಥೈಲ್ ಆಲ್ಕೋಹಾಲ್, ನೀರು ಇವುಗಳಿಂದ ಬಯೋ ಡೀಸಲ್ ಅನ್ನು ಅನಂತರ ಬೇರ್ಪಡಿಸುತ್ತಾರೆ.

ಅಪೇಕ್ಷಣೀಯ. ಜ್ವಲನ ಬಿಂದು ಹೆಚ್ಚಿಗೆ ಇರುವುದು ಡೀಸಲ್‌ನ ಸಂಗ್ರಹಣೆ ಮತ್ತು ಸಾರಿಗೆಗೆ ಸುರಕ್ಷಿತ. ಬಯೋ ಡೀಸಲ್ ಬಳಸಿದಾಗ ಡೀಸಲ್ ಎಂಜಿನ್ನು ಕಾರುವ ಹೊಗೆಯನ್ನು ಪೆಟ್ರೋಲಿಯಂ ಡೀಸಲ್ ಎಂಜಿನ್ನು ಕಾರುವ ಹೊಗೆಯೊಂದಿಗೆ ಹೋಲಿಸಿದಾಗ, ಈ ಹೊಗೆ ಅಷ್ಟು ದಟ್ಟವಾಗಿರುವುದಿಲ್ಲ, ಅದರಲ್ಲಿ ವಿಷಕಾರಿ ಕಾರ್ಬನ್ ಮೊನೊಕ್ಸಾಯಿಡ್ (CO)ಮತ್ತು ಜ್ವಲನ ಹೊಂದದ ಹೈಡ್ರೋಕಾರ್ಬನ್ನುಗಳ ಪ್ರಮಾಣ ಕಡಿಮೆ. ವನಸ್ಪತಿ ತೈಲದಲ್ಲಿ ಗಂಧಕದ ಪ್ರಮಾಣ ಗಣನೀಯವಾಗಿರುವುದಿಲ್ಲವಾದ್ದರಿಂದ ಸಲ್ಫರ್ ಡೈ ಆಕ್ಸಾಯಿಡ್ ($SO_2$) ಪ್ರಮಾಣವೂ ನಗಣ್ಯ, ಎಂದು ಅಂದಾಜು ಮಾಡಲಾಗಿದೆ. ಆದರೆ ನೈಟ್ರೋಜನ್ ಆಕ್ಸೈಡುಗಳ ಪ್ರಮಾಣ ಅಧಿಕ. ಬಯೋ ಡೀಸಲ್‌ನ ವಾಹನ ಎಳೆತದ ಬಲ ಪೆಟ್ರೋಲಿಯಂ ಡೀಸಲ್‌ನ ವಾಹನ ಎಳೆತ ಬಲಕ್ಕಿಂತ (Pulling Power) ೧೦% ಕಡಿಮೆ ಇರುವುದರಿಂದ ಅಷ್ಟರಮಟ್ಟಿಗೆ ಅಧಿಕ ಬಯೋ ಡೀಸಲ್ ಬಳಸಬೇಕಾಗುತ್ತದೆ, ಮತ್ತು ಅದರ ಎಳೆತ ಬಲ

**ವಿನ್ಯಾಸ 2. ವನಸ್ಪತಿ ತೈಲಗಳ ಎಸ್ಟರೀಕರಣಾಂತರ (TRANSESTERIFICATION)**

| ವನಸ್ಪತಿ ತೈಲ | ಆಲ್ಕೋಹಾಲ್ | | ಬಯೊ ಡೀಸಲ್ (ಎಸ್ಟರುಗಳು) | | ಗ್ಲಿಸರಾಲ್ |
|---|---|---|---|---|---|
| 1 Lt. | 0.1 Lt. | → | 1 Lt. | | 0.1 Lt. |
| $CH_2$-O-CO-$R^1$ | | | MeO $COR^1$ | | $CH_2OH$ |
| \| | | | | | \| |
| CH-O CO-$R^2$ + | 3MeOH | → | MeO $COR^2$ | + | CHOH |
| \| | | | | | \| |
| $CH_2$-O-CO-$R^3$ | | | MeO $COR^3$ | | $CH_2OH$ |

ಈ ವಿಧಾನದಿಂದ ಬೃಹತ್ ಪ್ರಮಾಣದಲ್ಲಿ ಬಯೋ ಡೀಸಲ್ ಅನ್ನು ಪ್ರಪಂಚದ ೨೮ ದೇಶಗಳಲ್ಲಿ ಉತ್ಪಾದಿಸಲಾಗುತ್ತಿದೆ. ಉದಾಹರಣೆಗೆ, ವರ್ಷಂಪ್ರತಿ ೩,೦೦೦ ಟನ್ ಮಲೇಶಿಯಾದಲ್ಲಿ, ಆಸ್ಟ್ರಿಯಾದಲ್ಲಿ ೧೦,೦೦೦ ಟನ್, ಇಟಲಿಯಲ್ಲಿ ೮೦,೦೦೦ ಟನ್ ಮತ್ತು ಫ್ರಾನ್ಸ್‌ದಲ್ಲಿ ೧೨೦,೦೦೦ ಟನ್ ಬಯೋ ಡೀಸಲ್ ಅನ್ನು ತಯಾರಿಸುವ ಉದ್ದಿಮೆಗಳು ಸ್ಥಾಪಿತವಾಗಿವೆ.

**ಇಂಧನ ಗುಣಲಕ್ಷಣಗಳು**

ಬಯೋ ಡೀಸಲ್‌ನ ಇಂಧನ ಗುಣಲಕ್ಷಣಗಳು, ಪೆಟ್ರೋಲಿಯಂ ಡೀಸಲ್‌ನ ಇಂಧನ ಗುಣಲಕ್ಷಣಗಳೊಂದಿಗೆ ಚೆನ್ನಾಗಿ ಹೋಲುತ್ತವೆ. ಇವುಗಳ ಸ್ನಿಗ್ಧತೆ ಪೆಟ್ರೋಲಿಯಂ ಡೀಸಲ್‌ಗಿಂತ ಸ್ವಲ್ಪ ಅಧಿಕವಾಗಿರುವುದರಿಂದ, ಪ್ರವಹಿಸುವ ಶಕ್ತಿ ಕಡಿಮೆ. ಆದರೆ ಬೆಚ್ಚಗಿನ ವಾತಾವರಣದಲ್ಲಿ ಯಾವ ತೊಂದರೆ ಇಲ್ಲ. ಪಾಮೆಣ್ಣೆಯಿಂದ ತಯಾರಿಸಿದ ಬಯೋ ಡೀಸಲ್ ೧೫°ಸೆ. ಘನರೂಪ ತಾಳಿದರೆ ರೇಪ್ ಎಣ್ಣೆಯಿಂದ ತಯಾರಿಸಿದ ಬಯೋ ಡೀಸಲ್ ೫°ಸೆ. ವರೆಗೆ ಘನರೂಪ ತಾಳುವುದಿಲ್ಲ. ಎಲ್ಲ ಡೀಸಲ್‌ಗಳ ಜ್ವಲನ ಲಕ್ಷಣಗಳನ್ನು 'ಸೀಟೇನ್ ಸಂಖ್ಯೆ'ಯಲ್ಲಿ ವರ್ಣಿಸುತ್ತಾರೆ. ಬಯೋ ಡೀಸಲ್‌ನ ಸೀಟೇನ್ ಸಂಖ್ಯೆ ಮತ್ತು ಜ್ವಲನ ಬಿಂದು ಪೆಟ್ರೋಲಿಯಂ ಡೀಸಲ್‌ಗಿಂತ ಅಧಿಕವಾಗಿವೆ. ಸೀಟೇನ್ ಸಂಖ್ಯೆ ಅಧಿಕ ಅಂದರೆ, ಇಂಧನ ಜ್ವಲನಗೂಡನ್ನು ಸೇರಿದಾಗಿನಿಂದ ಅದು ಜ್ವಲಿಸಲು ತೆಗೆದುಕೊಳ್ಳುವ ಅವಧಿ ಕಡಿಮೆ ಅಂತ ಅರ್ಥ. ಇದು ಎಂಜಿನ್ನುಗಳ ಸುಲಲಿತ ಚಲನೆಗೆ

ಅಷ್ಟರಮಟ್ಟಿಗೆ ಕಡಿಮೆಯಾಗುತ್ತದೆ. ಎಂಜಿನ್‌ದಲ್ಲಿ ಇರುವ ಇತರೆ ಭಾಗಗಳೊಂದಿಗೆ ಇದರ ಹೊಂದಾಣಿಕೆಯನ್ನೂ ಅಭ್ಯಸಿಸಲಾಗಿದೆ. ಅದರ ಪ್ರಕಾರ, ಪೇಂಟು, ಕೆಳಮಟ್ಟದ ಪ್ಲಾಸ್ಟಿಕ್, ಹಾಗೂ ರಬ್ಬರಿನ ಭಾಗಗಳು ಹಾಳಾಗುತ್ತವೆ. ಇದಕ್ಕೆ ಉಪಾಯ ಅಂದರೆ ಉತ್ತಮ ಮಟ್ಟದ ಪ್ಲಾಸ್ಟಿಕ್ ಹಾಗೂ ರಬ್ಬರಿನಿಂದ ತಯಾರಿಸಿದ ಭಾಗಗಳನ್ನು ಉಪಯೋಗಿಸಬಹುದು.

ಇವೆಲ್ಲ ಕೇವಲ ಸಂಶೋಧನೆಗಾಗಿ ಕೈಗೊಂಡ ಪ್ರಯೋಗಗಳಲ್ಲ. ವಾಹನಗಳಿಗೆ ಬಯೋ ಡೀಸಲ್ ಹಾಕಿ ಓಡಾಡಿಸಿ ಎಲ್ಲರೀತಿಯಿಂದ ಪರೀಕ್ಷಿಸಿದಂತಹವುಗಳು. ಫ್ರಾನ್ಸ್ ಮತ್ತು ಇಟಲಿ ದೇಶಗಳಲ್ಲಿ ರೇಪ್ ಬೀಜ ತೈಲದಿಂದ ತಯಾರಿಸಿದ ಬಯೋ ಡೀಸಲ್ ಅನ್ನು ನೂರು ಬಸ್ಸುಗಳಿಗೆ ಹಾಕಿ ೫ ಮಿಲಿಯನ್ ಕಿ. ಮೀ. ಓಡಾಡಿಸಲಾಗಿದೆ. ಜರ್ಮನಿಯ ಪ್ರಸಿದ್ಧ ಮರ್ಸಿಡೆಸ್-ಬೆನ್ಜ್ (Marcedes Benz) ಮೋಟಾರ್ ಕಂಪನಿ ರೇಪ್ ಬೀಜ ತೈಲದ ಬಯೋ ಡೀಸಲ್ ಅನ್ನು ಸುಮಾರು ಎರಡು ವರ್ಷ ಬಸ್ಸು, ಲಾರಿ, ಟ್ಯಾಕ್ಸಿ ಮುಂತಾದ ವಾಹನಗಳಿಗೆ ಹಾಕಿ ಸಮೀಕ್ಷಣೆ ನಡೆಯಿಸಿ ಪೆಟ್ರೋಲಿಯಂ ಡೀಸಲ್‌ನಂತೆಯೇ ವರ್ತಿಸುವುದನ್ನು ಖಚಿತಪಡಿಸಿದೆ. ಇಂಧನ ಬಲ ಮಾತ್ರ ಸ್ವಲ್ಪ ಕಡಿಮೆ ಇದ್ದರೂ ಪೆಟ್ರೋಲಿಯಂ ಡೀಸಲ್‌ನ ಇಂಧನ ಬಲದ ಹತ್ತಿರ ಹತ್ತಿರ ಇದೆ ಎಂದು ಚಾಲಕರು ಹೇಳುತ್ತಾರೆ. ವಾಹನ ಬಿಡುವ ಹೊಗೆ ಮಾತ್ರ ತಿಂಡಿ ಕರಿದ (Fried Oil) (ಖಮಟು) ತೈಲದ ವಾಸನೆಯನ್ನು ಕೊಡುತ್ತದೆ. ಆದರೆ ಅದರಲ್ಲಿ ವಿಷಕಾರಿ ಸೀಸದ ಅಂಶ ಇರುವುದಿಲ್ಲ. ಅಮೆರಿಕಾದಲ್ಲಿ ಸೋಯಾಬೀನ್ ತೈಲದ ಬಯೋ ಡೀಸಲ್ ಅನ್ನು ಪೆಟ್ರೋಲಿಯಂ ಡೀಸಲ್‌ನ ಜೊತೆ ೩೦:೭೦ ಮತ್ತು ೨೦:೮೦ ಪ್ರಮಾಣದಲ್ಲಿ ಬೆರೆಸಿ ೧,೨೦೦ ವಾಹನಗಳಿಗೆ ಹಾಕಿ ೪೦೦ ಪಟ್ಟಣಗಳಲ್ಲಿ ೫ ಮಿಲಿಯನ್ ಕಿ. ಮೀ. ಓಡಿಸಿ ನೋಡಿದ್ದಾರೆ. ಬಯೋ ಡೀಸಲ್‌ನಿಂದ ಎಂಜಿನ್ನಿಗೆ ಯಾವ ತೊಂದರೆ ಆಗುವುದಿಲ್ಲ ಮತ್ತು ಪಟ್ಟಣಗಳಲ್ಲಿ ವಾಯು ಪ್ರದೂಷಣ ಕಡಿಮೆ ಆದದ್ದನ್ನು ಕಂಡುಕೊಂಡಿವೆ. ಮಲೇಶಿಯಾದಲ್ಲಿ ಪಾಮೆಣ್ಣೆಯ ಬಯೋ ಡೀಸಲ್ ಅನ್ನು ಬಸ್ಸು, ಟ್ರಾಕ್ಟರ್, ಲಾರಿ, ಜನರೇಟರ್‌ಗಳಿಗೆ ೧೦ ವರ್ಷಗಳವರೆಗೆ ಬಳಸಿ ಇದೇ ನಿರೀಕ್ಷಣೆಯನ್ನು ಖಚಿತಪಡಿಸಲಾಗಿದೆ.

ಪ್ರಯೋಗಶಾಲೆಯಿಂದ ಹಿಡಿದು ರಸ್ತೆಯ ಮೇಲೆ ನಾನಾತರಹದ ವಾಹನಗಳನ್ನು ಓಡಾಡಿಸಿ ನೋಡಿದಾಗ ಕಂಡುಬಂದದ್ದೇನೆಂದರೆ, ಡೀಸಲ್ ಎಂಜಿನ್ನಿಗೆ ಬಯೋ ಡೀಸಲ್ ಬಳಸಿದಾಗ ಎಂಜಿನ್ನಿನ ಕಾರ್ಯನಿರ್ವಹಣೆಯಲ್ಲಾಗಲೀ, ಇಂಧನವನ್ನು ಕಬಳಿಸುವ ಪ್ರಮಾಣದಲ್ಲಿಯಾಗಲೀ ಹೇಳಿಕೊಳ್ಳುವಂತಹ ವ್ಯತ್ಯಾಸವೇನಿಲ್ಲ. ಎಂಜಿನ್ನು ಕಾರುವ ಹೊಗೆ ದಟ್ಟವಾಗಿರುವುದಿಲ್ಲ, ಕಪ್ಪಗೆ ಇರುವುದಿಲ್ಲ ಮತ್ತು ವಾಯು ಪ್ರದೂಷಕಗಳಾದ ಸಲ್ಫರ್ ಡೈಆಕ್ಸೈಡ್ ($SO_2$), ಕಾರ್ಬನ್ ಮೊನೊಕ್ಸೈಡ್ (CO), ಸೀಸ ಇವುಗಳಿಂದ ಹೊರತಾಗಿ ಸ್ವಚ್ಛವಾಗಿರುತ್ತದೆ. ಸದ್ಯಕ್ಕಿರುವ ಡೀಸಲ್ ಎಂಜಿನ್ನಿನಲ್ಲಿ ಯಾವ ಬದಲಾವಣೆ ಮಾಡಬೇಕಾಗಿಲ್ಲ. ಸದ್ಯ: ಫ್ರಾನ್ಸ್, ಇಟಲಿ, ಆಸ್ಟ್ರಿಯಾ, ಸ್ವೀಡನ್, ಝೆಕ್, ಸ್ಲೋವಾಕಿಯಾ, ಆಸ್ಟ್ರೇಲಿಯಾ, ಅಮೆರಿಕಾ, ಮಲೇಶಿಯಾ ದೇಶಗಳ ಮಾರುಕಟ್ಟೆಯಲ್ಲಿ ಬಯೋ ಡೀಸಲ್ ದೊರೆಯುತ್ತದೆ. ಫ್ರಾನ್ಸ್ ಮತ್ತು ಅಮೆರಿಕಾ ದೇಶಗಳಲ್ಲಿ ಪೆಟ್ರೋಲಿಯಂ ಡೀಸಲ್ ಜೊತೆಗೆ ೫-೨೦% ಬಯೋ ಡೀಸಲ್ ಸೇರಿಸಿ ಬಳಸಲಾಗುತ್ತಿದೆ. ಯೂರೋಪ್ ದೇಶಗಳಲ್ಲಿ ಬಯೋ ಡೀಸಲ್ ಮತ್ತು ಪೆಟ್ರೋಲಿಯಂ ಡೀಸಲ್ ಬೆಲೆಗಳಲ್ಲಿ ವ್ಯತ್ಯಾಸವಿರುವುದಿಲ್ಲ. ಆದರೆ ಬಾಕಿ ದೇಶಗಳಲ್ಲಿ ಬಯೋ ಡೀಸಲ್ ೩೦% ದುಬಾರಿ ಆಗುತ್ತದೆ. ಈ ಅಧಿಕ ಬೆಲೆ ಇದರ ವ್ಯಾಪಕ ಉಪಯೋಗಕ್ಕೆ ಮುಗದಾಣ ಹಾಕಿದೆ. ಆದರೂ ಬಯೋ ಡೀಸಲ್ ನವೀಕರಿಸಬಲ್ಲ ಹಾಗೂ ವಾಯು ಪ್ರದೂಷಕವಲ್ಲದ ಇಂಧನವಾದ್ದರಿಂದ ಅದು ಭವಿಷ್ಯದಲ್ಲಿ ಆಯಕಟ್ಟಿನ ಪಾತ್ರ ವಹಿಸಬಲ್ಲದು. ಕೃಷಿ ಕ್ಷೇತ್ರದಲ್ಲಿ ಕ್ರಾಂತಿ ಆಗಿ ಎಷ್ಟೋ ದೇಶಗಳಲ್ಲಿ ಈಗ ಆಗುತ್ತಿರುವ ಅಧಿಕ ಆಹಾರೋತ್ಪನ್ನವನ್ನು ನಿಯಂತ್ರಿಸಲು, ಹೆಚ್ಚು ಹೆಚ್ಚು ಅಖಾದ್ಯ ತೈಲ ಬೀಜಗಳನ್ನು ಬೆಳೆಸುವಂತಾಗಿ, ಬಯೋ ಡೀಸಲ್‌ನ ಬಳಕೆ ವ್ಯಾಪಕವಾಗುವ ಸಾಧ್ಯತೆ ಇದೆ. ಏನೇ ಆದರೂ ಬಯೋ ಡೀಸಲ್ ಪೆಟ್ರೋಲಿಯಂ ಡೀಸಲ್‌ನ ಸ್ಥಾನವನ್ನು ತೆಗೆದುಕೊಳ್ಳಲಾರದು. ಪ್ರಪಂಚದ ಪೆಟ್ರೋಲಿಯಂ ಡೀಸಲ್‌ನ ಒಟ್ಟು ಬಳಕೆಯ ೧೦% ಅಷ್ಟನ್ನು ಮಾತ್ರ ಕಡಿಮೆ ಮಾಡಬಲ್ಲದು ಎಂದು ಅಂದಾಜು ಮಾಡಲಾಗಿದೆ.

**ಡಾ।। ಸರ್ವೋತ್ತಮ ಅಂಚೀಕರ**
''ಅನುಶ್ರೀ'', ೫೧, ೩ನೇ ಅಡ್ಡರಸ್ತೆ
ಜಯನಗರ, ಧಾರವಾಡ - ೫೮೦ ೦೦೧

# ಗ್ರಹಗಳ ಮೆರವಣಿಗೆ



ಬರಿಗಣ್ಣಿಗೆ ಕಾಣುವ ಐದೂ ಗ್ರಹಗಳನ್ನು ನೋಡುವ ಅವಕಾಶ ಈ ತಿಂಗಳು ಒದಗಿದೆ. ಇದುವರೆಗೆ ಸಂಜೆಯ ಆಕಾಶದಲ್ಲಿ ಗುರು, ಶನಿ ಮತ್ತು ಮಂಗಳ ವಿರಾಜಿಸುತ್ತಿದ್ದವಷ್ಟೇ. ಸಿರಿಯಸ್ ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿ ಬೆಳಗಿದ ಗುರುಗ್ರಹ ಈಗಲೂ ತನ್ನ 'ಅತಿ ಪ್ರಕಾಶಮಾನವಾದ ಆಕಾಶಕಾಯ' ಎಂಬ ಪಟ್ಟವನ್ನು ಬಿಟ್ಟುಕೊಟ್ಟಿಲ್ಲ. ಸಂಧ್ಯಾಪ್ರಕಾಶ ಕರಗುವುದಕ್ಕೆ ಮುನ್ನವೇ ನೆತ್ತಿಯಲ್ಲಿ ಕಾಣುವ ಇದು ಮಿಥುನ ರಾಶಿಯಲ್ಲಿದೆ. ನೆತ್ತಿಯಿಂದ ಸ್ವಲ್ಪ ಪಶ್ಚಿಮಕ್ಕೆ ವೃಷಭ ರಾಶಿಯಲ್ಲಿ ಶನಿಗ್ರಹ ಕಾಣುತ್ತದೆ. ಇಂಗ್ಲಿಷ್ ಅಕ್ಷರ V ಆಕಾರದ ಹೈಯಡೆಸ್ ಎಂಬ ನಕ್ಷತ್ರಗುಚ್ಛದಿಂದ ದೂರ ಸರಿಯುತ್ತಿರುವುದನ್ನು ಗಮನಿಸಬಹುದು. ಕಳೆದ ತಿಂಗಳಲ್ಲಿ ಪ್ರಕಟವಾಗಿದ್ದ ನಕ್ಷೆಯೊಡನೆ ಹೋಲಿಸಿದಾಗ ಅದರ ಚಲನೆ ಸ್ಪಷ್ಟವಾಗುತ್ತದೆ. ಇದು ಪಕ್ಕದಲ್ಲೇ ಇರುವ ರೋಹಿಣಿ ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿರುತ್ತದೆ. ಮಿನುಗುತ್ತಿಲ್ಲ ಎಂಬ ಅಂಶವನ್ನು ವಿವರಿಸುವುದೂ ಸುಲಭವಾಗುತ್ತದೆ. ಏಪ್ರಿಲ್ ತಿಂಗಳ ಆರಂಭದಲ್ಲಿ ಈ ಎರಡೂ ಕಾಯಗಳ ಸ್ಥಾನವನ್ನು ಗುರುತು ಮಾಡಿಕೊಳ್ಳಿ. ಏಕೆಂದರೆ ನಿಮ್ಮನ್ನು ತಬ್ಬಿಬ್ಬುಗೊಳಿಸಲು ಇನ್ನೊಂದು ಗ್ರಹ ಅದೇ ದಿಕ್ಕಿಗೆ ಬರುತ್ತಿದೆ. ಅದೇ ಮಂಗಳ ಗ್ರಹ. ಕೆಂಪು ಬಣ್ಣದ (ಸಾಕಷ್ಟು ಕ್ಷೀಣವಾದರೂ) ಗುರುತಿಸಬಹುದಾದ ಈ ಗ್ರಹ ತಿಂಗಳ ಆರಂಭದಲ್ಲಿ ಕೃತ್ತಿಕಾ ನಕ್ಷತ್ರಗುಚ್ಛದ ಸಮೀಪ ಕಾಣುತ್ತದೆ. ಏಪ್ರಿಲ್ ೧೫ರಂದು, ಕೃತ್ತಿಕ, ಬಾಲಚಂದ್ರ ಮತ್ತು ಮಂಗಳ ಮೂರೂ ಪಂಕ್ತಿಯಲ್ಲಿ ಕುಳಿತಂತೆ ಕಾಣುತ್ತವೆ. ಮರುದಿನವೇ ಚಂದ್ರ ಶನಿ ಗ್ರಹದತ್ತ ಧಾವಿಸಿ ಬಿಟ್ಟಿರುತ್ತದೆ. ಆದರೆ ಮಂಗಳ ನಿಧಾನವಾಗಿ ಚಲಿಸಿ ೩೦ನೆಯ ತಾರೀಖಿನಂದು ಶನಿಗ್ರಹವನ್ನು ಸಮೀಪಿಸುತ್ತದೆ. ನೀವು ಮೊದಲು ಗುರುತು ಮಾಡಿದ್ದ ನಕ್ಷೆಯಲ್ಲಿ ಈಗ ಇದೊಂದು ಹೊಸ ಚುಕ್ಕೆಯೂ ಕಾಣುತ್ತದೆ.

ಇದೇ ಹೊತ್ತಿನಲ್ಲಿ ನಿಮ್ಮ ಗಮನವನ್ನು ಸೆಳೆಯುವ ಇನ್ನೊಂದು ಪ್ರಕಾಶಮಾನ ಗ್ರಹ ಪಶ್ಚಿಮದ ಅಂಚಿನಲ್ಲಿ ಕಾಣತೊಡಗುತ್ತದೆ. ಏಪ್ರಿಲ್ ೧೪ರ ಹೊತ್ತಿಗೆ ನಿಮ್ಮ ದೃಷ್ಟಿಯನ್ನು ಆಕರ್ಷಿಸುವ ಈ ಶುಕ್ರಗ್ರಹ ಸಂಧ್ಯಾ ಪ್ರಕಾಶದ ಹಿನ್ನೆಲೆಯನ್ನು ಮೆಟ್ಟಿ ನಿಲ್ಲುವಷ್ಟು ಪ್ರಕಾಶಮಾನವಾಗಿರುವುದರಿಂದ ಗುರು ಗ್ರಹಕ್ಕೆ ಪ್ರಕಾಶದ ಪ್ರತಿಸ್ಪರ್ಧಿ ಎನಿಸಿಕೊಳ್ಳುವುದಲ್ಲದೆ ವಿಜಯಿಯೂ ಆಗುತ್ತದೆ. ಕ್ರಮೇಣ ಇನ್ನಷ್ಟು ಎತ್ತರದಲ್ಲಿ ಕಾಣತೊಡಗುವ ಇದು ೨೨ರ ಹೊತ್ತಿಗೆ ಕೃತ್ತಿಕಾ ಗುಚ್ಛದ ಪಕ್ಕದಲ್ಲೇ ಕಾಣುತ್ತದೆ. ಇದೇ ಅವಧಿಯಲ್ಲಿ ಮಂಗಳ ಶನಿಯತ್ತ ಓಡಿರುತ್ತದೆ. ಹೀಗೆ ಏಪ್ರಿಲ್ ೨೨ರ ಸಂಜೆ ನೀವು ನಾಲ್ಕು ಗ್ರಹಗಳನ್ನು ಗುರುತಿಸಬಲ್ಲಿರಿ. ನೆತ್ತಿಯಲ್ಲಿ ಗುರು, ಸ್ವಲ್ಪ ಪಶ್ಚಿಮಕ್ಕೆ ಶನಿ ಮತ್ತು ಮಂಗಳ, ಪಶ್ಚಿಮದಲ್ಲಿ ಶುಕ್ರ - ಹೀಗೆ. ಹಾಗೆಯೇ ಇನ್ನೂ ಸೂಕ್ಷ್ಮವಾಗಿ ಗಮನಿಸಿದಿರಾದರೆ ಅಂಚಿನಲ್ಲಿ ಇನ್ನೊಂದು ಚುಕ್ಕೆಯೂ ಇಣುಕುತ್ತಿರುವುದು ಕಾಣುತ್ತದೆ. ಇದೇ ಬುಧ.

**ಡಾ|| ಬಿ. ಎಸ್. ಶೈಲಜಾ**

ಏಪ್ರಿಲ್ ೩೦ರಂದು ಐದೂ ಗ್ರಹಗಳ ಮೆರವಣಿಗೆ. ಪಶ್ಚಿಮದ ಅಂಚಿನಲ್ಲಿ ಕಾಣುವ ಬುಧ ಈಗ ಕೃತ್ತಿಕಾ ಪುಂಜದ ಪಕ್ಕಕ್ಕೆ ಸರಿದು ಸೂರ್ಯಾಸ್ತವಾದ ಮೇಲೆ ಸುಮಾರು ಒಂದು ಗಂಟೆ ಕಾಣುವುದು. ಹೀಗೆ ಐದೂ ಗ್ರಹಗಳನ್ನು ಪರಿಚಯ ಮಾಡಿಕೊಳ್ಳಲು, ದೂರದರ್ಶಕಗಳ ಮೂಲಕ ತೋರಿಸಿಕೊಡಲು ಇದು ಒಳ್ಳೆಯ ಅವಕಾಶ.

ಪರಿಚಯವಾದ ಮೇಲೆ ಪ್ರತಿ ಸಂಜೆ ನೋಡಲು ಆಸಕ್ತಿ ಬೆಳೆಯಿಸಿಕೊಳ್ಳಬಹುದು. ಗ್ರಹಗಳ ಚಲನೆಯ ವೇಗದಲ್ಲಿನ ವ್ಯತ್ಯಾಸ ತಿಳಿಯಲು ಈ ಸಂದರ್ಭ ಬಳಸಬಹುದು. ಕೃತ್ತಿಕಾದಿಂದ ರೋಹಿಣಿಯವರೆಗಿನ ಕೋನವನ್ನು ಕ್ರಮಿಸಲು ಮಂಗಳ ಗ್ರಹಕ್ಕೆ ಒಂದೇ ವಾರ ಸಾಕಾಯಿತಲ್ಲವೇ ? (ಏಪ್ರಿಲ್ ೧೫ರಿಂದ ೨೨). ಶುಕ್ರಕ್ಕೆ ಐದೇ ದಿನಗಳು ಬೇಕಾದವು (ಏಪ್ರಿಲ್ ೨೫ರಿಂದ ೩೦). ಬುಧಕ್ಕೆ ಎಷ್ಟು ಬೇಕಾಗಬಹುದು ? - ಇದನ್ನು ನೀವೇ ವೀಕ್ಷಿಸಿ ತಿಳಿಯಬಹುದು.

ವೃಷಭ, ಮಿಥುನಗಳ ನಕ್ಷತ್ರಗಳ ಪರಿಚಯಕ್ಕೂ ಇದು ಒಳ್ಳೆಯ ಅವಕಾಶ. ಒರೈಯನ್ ನೆಬ್ಯುಲ, ಕಟಕದ ಪ್ರೆಸಿಪಿ ನಕ್ಷತ್ರಗುಚ್ಛ - ಹೀಗೆ ಇತರ ಕಾಯಗಳನ್ನೂ ದೂರದರ್ಶಕದಿಂದ ನೋಡಬಹುದು.

ಛಾಯಾಗ್ರಾಹಕರಿಗೆ ಈ ಸಂದರ್ಭಗಳು ಆಕರ್ಷಣೆಯಾಗಿವೆ. ೧೬ರಂದು ಚಂದ್ರ ಮತ್ತು ಶನಿ ಒಂದಕ್ಕೊಂದು ಅಂಟಿಕೊಂಡ ಹಾಗೇ ಕಾಣುತ್ತದೆ. ಆ ದಿನ ಉಂಟಾಗುವ ಆಚ್ಛಾದನೆಯ ನೋಟ ಯೂರೋಪ್‌ಗೆ ಅನುಕೂಲಕರವಾಗಿದೆ. ಮರುದಿನ ಗುರುಗ್ರಹದ ಜತೆಗೂಡುವ ಚಂದ್ರ ಇನ್ನೊಂದು ಒಳ್ಳೆಯ ಅವಕಾಶ ಒದಗಿಸುತ್ತದೆ. ಏಪ್ರಿಲ್ ೧೪ರಿಂದ ಪ್ರತಿರಾತ್ರಿ ಚಂದ್ರನ ಚಿತ್ರ ತೆಗೆದರೆ ಸಾಕು. ಒಂದೊಂದು ದಿನ ಒಂದೊಂದು ಗ್ರಹ - ೧೪ರಂದು ಶುಕ್ರ, ೧೫ರಂದು ಮಂಗಳ (ಮತ್ತು ಕೃತ್ತಿಕಾ), ೧೬ರಂದು ಶನಿ, ೧೭ರಂದು ಗುರು – ಹೀಗೆ ದಾಖಲಾಗುತ್ತವೆ. ೩೦ರಂದು ಪಶ್ಚಿಮದಂಚನ್ನು ಚಿತ್ರಿಸಿದರೆ, ಶನಿ, ಮಂಗಳ, ಶುಕ್ರ ಮತ್ತು ಬುಧ ನಾಲ್ಕೂ ಸಿಗುತ್ತವೆ. ೨೭ರ ಹುಣ್ಣಿಮೆಯಂದು ಸಂಜೆ ಚಂದ್ರ ಪೂರ್ವದಂಚಿನಲ್ಲಿ ಕಾಣುವಾಗ, ಅದರ ಬೆಳಕಿನಲ್ಲಿ ನಕ್ಷತ್ರಗಳೆಲ್ಲಾ ಮರೆಯಾಗಿ ಆ ದಿಕ್ಕಿನಲ್ಲಿ ನಕ್ಷತ್ರಗಳೇ ಇಲ್ಲವೇನೋ ಎನ್ನಿಸುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಚಂದ್ರನ ಎಡಬಲಗಳಲ್ಲಿ (ಖಗೋಳ ವೈಜ್ಞಾನಿಕವಾಗಿ ಉತ್ತರ ದಕ್ಷಿಣಗಳಲ್ಲಿ) ಸ್ವಲ್ಪ ಮೇಲೆ ಎರಡು ನಕ್ಷತ್ರಗಳು ಕಾಣುತ್ತವೆ. ಚಂದ್ರನಿಗೆ ಸಮೀಪವಿದೆ ಎನ್ನಬಹುದಾದ





*ಏಪ್ರಿಲ್ ೩೦ ರಂದು ಸಂಜೆ ಪಶ್ಚಿಮ ದಿಕ್ಕಿನಲ್ಲಿ ಕಾಣುವ ನೋಟ*

ನೀಲಿ ನಕ್ಷತ್ರ ಚಿತ್ತಾ, ಸ್ವಲ್ಪ ಉತ್ತರಕ್ಕಿರುವ ಕೆಂಪು ನಕ್ಷತ್ರ ಸ್ವಾತಿ.

ಏಪ್ರಿಲ್ ಕೊನೆಯವಾರದಲ್ಲಿ ಲಿರಿಡ್ಸ್ ಎಂಬ ಉಲ್ಕಾ ವೃಷ್ಟಿ ಇದೆ. ಬೆಳಗಿನ ಝಾವ ಈಶಾನ್ಯ ದಿಕ್ಕಿನಲ್ಲಿ ಕಾಣುವ ಲೈರಾ (ವೀಣಾ) ಎಂಬ ಪುಂಜದಿಂದ ಉಲ್ಕೆಗಳು ಹೊರಟಂತೆ ಕಾಣುತ್ತವೆ. ಗಂಟೆಗೆ ೧೦-೧೫ ಉಲ್ಕೆಗಳು ಕಾಣುವುವು. ೨೭ರಂದು ಹುಣ್ಣಿಮೆ. ಆದ್ದರಿಂದ ಚಂದ್ರನ ಬೆಳಕು ಉಲ್ಕೆಗಳ ವೀಕ್ಷಣೆಗೆ ಅಡ್ಡಿಯಾಗಬಹುದು. ಏಪ್ರಿಲ್ ೨೨ರಂದು ವೃಷ್ಟಿಯ ಗರಿಷ್ಠ ಚಟುವಟಿಕೆ ಇದೆ. ಅಂದು ಗರಿಷ್ಠ ಸಂಖ್ಯೆಯಲ್ಲಿ ಉಲ್ಕೆಗಳು ಕಾಣುವುವು.

ಬೆಳಗಿನ ಝಾವ ಬೇಗ ಏಳುವವರಿಗೆ 'ಇಕೆಯಾ- ಝಾಂಗ್' ಧೂಮಕೇತುವಿನ ದರ್ಶನವೂ ಸಿಗಲಿದೆ. ಪೂರ್ವದ ಅಂಚಿನಲ್ಲಿ ಕಾಣುವ ಈ ಧೂಮಕೇತು ಮಾರ್ಚ್ ೧೮ರಂದು ಸೂರ್ಯನನ್ನು ಸಮೀಪಿಸಿ ಹಿಂದಿರುಗುವಾಗ ಪ್ರಕಾಶದ ಹೆಚ್ಚಳವೂ ಉಂಟಾಗುವ ಸಾಧ್ಯತೆ ಇದೆ. ಏಪ್ರಿಲ್ ೫-೬ರಂದು ಆಂಡ್ರೊಮಿಡಾ ಗ್ಯಾಲಕ್ಸಿಯ ಪಕ್ಕದಲ್ಲೇ ಕಾಣುವುದರಿಂದ ವೀಕ್ಷಕರು ಮೋಸಹೋಗುವ ಸಾಧ್ಯತೆಯೂ ಇದೆ. ಈಗಾಗಲೇ ಅದು (ಮಾರ್ಚ್ ಎರಡನೆಯ ವಾರದಲ್ಲಿ) ಹವ್ಯಾಸೀ ವೀಕ್ಷಕರ ದೃಷ್ಟಿಗೆ ಸಿಕ್ಕುಬಿದ್ದಿದೆ. ಜನಸಾಮಾನ್ಯರಿಗೂ ಇದರ ನೋಟ ದೊರಕಬಹುದು.

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಶ್ರೀ. ಟಿ. ಚೌಡಯ್ಯ ರಸ್ತೆ, ಬೆಂಗಳೂರು-೧

# ಪ್ರಜ್ಞಾಪ್ರಭಾತ

ಗಾಂಧಾರ ದೇಶ, ಧರ್ಮಪುರಿ ನೋಡದರ ರಾಜಧಾನಿ,
ಪುರದ ಹೊರಗೊಂದು ಆರಾಮ - ಕಟ್ಟಿಸಿಹನೊಬ್ಬ ದಾನಿ;
ಒಂದು ದಿನ ಬುದ್ಧ ಬಂದನಲ್ಲಿಗೆ ಭಿಕ್ಷು ವೃಂದದೊಡನೆ
ಎಲ್ಲೆಡೆಗು ಕವಿದ ದುರ್ಗಂಧ ಮುಚ್ಚಿಸಿದೆ ಮೂಗುಗಳನೆ.

ಹುಡುಕುತಿರೆ ಸುತ್ತಮುತ್ತೆಲ್ಲ ಹೊಲಸುಗಳ ಮೂಲವನ್ನು
ಕಂಡರೈ ಹಿಂದೆ ಗೋಡೆಬಳಿ ನರಳುತಿಹ ತಿರುಕನನ್ನು;
ಮೈತುಂಬ ಹುಣ್ಣು, ಮಾನ ಮುಚ್ಚಿದೆ ಹರಕು ಬಟ್ಟೆ ತುಂಡು,
ಉಸಿರಾಡುತಿಹುದು ನೆಲಹಿಡಿದ ಕಶ್ಮಲದ ಎಲುಬುಗೂಡು !

ಬೇವಾರ್ಸಿ ಮುದುಕ, ದಿನವೆನಿತು ಕಳೆದಿಹವೊ ತುತ್ತನುಂಡು !
ಮಲಮೂತ್ರ ಮುಸುಕಿ ಗೊಮ್ಮೆನುತ ನೆರೆದಿಹವು
ನೊಣದ ದಂಡು,
ಯಾರಿವನು ? ರೋಗವೆಂಥದಿದು ?
.... ಏನೊಂದ ಕೇಳಲಿಲ್ಲ ;
ಕರುಣಾಳು ಭಂತೆ ಮುಂದಾದ -
ಹೇವರಿಕೆ ತೋರಲಿಲ್ಲ !

ಮರದಡಿಗೆ ತಂದು ನವಶಿಶುವಿನಂತೆತ್ತಿ ರೋಗಿಯನ್ನು
ಬಿಸಿ ನೀರ ತರಿಸಿ ಎರೆದೆರೆದು ಕಳೆದ ಮಾಲಿನ್ಯವನ್ನು :
ಗಾಯಗಳ ತೊಳೆದು ಔಷಧಿಯ ಲೇಪಿಸುತ ಕೀವು ತೆಗೆದು,
ಹೊದಿಸಿದನು ತಾನೆ ತೊಟ್ಟಿದ್ದ *ಸಂಘಾಟಿಯ ಬಿಚ್ಚಿ ತೆಗೆದು

ತೊಡೆ ಮೇಲೆ ಅವನ ತಲೆಯಿರಿಸಿ, ಸೇವರಿಸಿ ಅಕ್ಕರೆಯಿಂದ
ಬಿಸಿ, ಗಂಜಿ ಕುಡಿಸಿ ಚೇತರಿಸಿ, ಮುದಿರೋಗಿ ಕೈಯ ಮುಗಿದ:
''ಹಾ ಬಂಧು'' ಎಂದು ಬಳಿಗೊಯ್ದು ಮಲಗಿಸುತ ದಯಾ ಸಿಂಧು
ಸುತ್ತೆಲ್ಲ ಸ್ವಚ್ಛಗೊಳಿಸಿದನು ನೆರವಾಗೆ ಭಿಕ್ಷು ಬಂಧು.



ನೈರ್ಮಲ್ಯ ನೆಲೆಸಿ ಪರಿಸರವೆ ನೆಮ್ಮದಿಯ ತಾಣವಾಯ್ತು,
ತಂಬೆಲರು ತೀಡಿ ಮೊದಲಿನೊಲು ನರುಗಂಪ ಸೂರೆಯಾಯ್ತು;
ನಾಡೊಡೆಯ ಕೇಳಿ ಸಮಣನೀ ಉಪಕೃತಿಯ ಕಥೆಯನೊಡನೆ
ಧಾವಿಸುತ ಬಂದ ಕಾತರಿಸಿ ತನ್ನ ಪರಿವಾರದೊಡನೆ.

ನರಶ್ರೇಷ್ಠಗೆರಗಿ, ನಾಡಪ್ರಭು ಆಕ್ಷೇಪಗೈದ ನಿಂತು –
''ಸರ್ವಕ್ಕು ಶ್ರೇಷ್ಠ – ನೀನಂತೆ ! ಅಡಿಯಾಗಿ ನಡೆದುದೆಂತು ?
ಭಿಕ್ಷುವರ, ಮೊದಲೆ ತಿಳಿಸಲಿಲ್ಲೇಕೆ ನೀ ಬರುವ ಸುದ್ದಿ ?
ತೋಟಿಗಳ ಕಳುಹಿ ಇವನ ಹೊರತಳ್ಳಿ ಸರಿಗೊಳಿಸುತಿದ್ದೆ ;

''ಕುಲಹೀನ ಬೀದಿ ತಿರುಕಗೀ ರಾಜೋಪಚಾರವೇನು ?
ಸಾಯ ಬಿಡುವುದೇ ಲೇಸಿಂಥ ಭೂಭಾರಿ ನರಕಿಗಳನು;''
ಸಾಕ್ಯ ಶಕಪುರುಷ ಮಂದಹಾಸವ ಬೀರಿ ನುಡಿದನಿಂತು –
''ಎಲೊ ಅರಸ, ನಿನಗೆ ಎನಿತೊಂದು
ಶ್ರೇಷ್ಠತೆಯ ಹುಚ್ಚು ಭ್ರಾಂತು !

''ಇಂಥ ನಿರ್ಗತಿಕ ಬಡಪಾಯಿಗಳ ಸೇವೆ ಮಾಡಲೆಂದೆ
ಬಂದಿಹೆನು ಹುಟ್ಟಿ ಆರ್ತತೆಯ ಕಳೆದಾಪ್ತನಾಗಲೆಂದೆ,
ಜಾತಿ-ಮತ-ಪಂಥ ಅಂತಸ್ತು ತರಬಲ್ಲವೇನು ಶಾಂತಿ ?
ಕಾರುಣ್ಯ ಬೇಕು, ಅದರೊಡನೆ ಸರ್ವಸಮ ಮೈತ್ರಿ ಪ್ರೀತಿ.

''ತುಂಡರಿಸಿ ಹಾಕೊ ಕರ್ತವ್ಯ ಕೃಪಣತೆಯ ಬೇಡಿಗಳನು
ಕೆಡಹೋಣ ಬಾರೊ ಮನುಜ ಮನುಜರ
ಮನದ ಗೋಡೆಗಳನು.''
ನಿಶೆಯ ತೆರೆಸರಿದು ಪ್ರಜ್ಞೆ ಬೆಳಗಿತು ಅರಸನೊಳಗೆ ಹೊರಗೆ –
ಶರಣೆಂದ ಶುದ್ಧ ಬುದ್ಧನಿಗೆ, ಧರ್ಮಕ್ಕೆ, ಸಂಘದಡಿಗೆ.

**ಮುದೇನೂರ ಸಂಗಣ್ಣ**
ಚಿಗಟೇರಿ

*ಸಂಘಾಟಿ = ಬೌದ್ಧ ಭಿಕ್ಷುಗಳು ಚಳಿಗಾಲದಲ್ಲಿ ಬಳಸುವ ಮೇಲುಡುಪು*

# ರಾಷ್ಟ್ರಕವಿ ಕುವೆಂಪು ಮನೆ: ಮಾದರಿ ಸ್ಮಾರಕ

**ಮ. ಶ್ರೀ. ಮುರಳಿ ಕೃಷ್ಣ**

ಇತ್ತೀಚೆಗೆ ವೈಯಕ್ತಿಕ ಕೆಲಸದ ನಿಮಿತ್ತ ತೀರ್ಥಹಳ್ಳಿಗೆ ಸ್ನೇಹಿತರೊಡನೆ ಭೇಟಿ ನೀಡುವ ಸಂದರ್ಭ ಒದಗಿತು. ''ತುಂಗ, ಭದ್ರಾ, ಮೂಲ ಹಾಗೂ ಕುದುರೆಮುಖ ಉಳಿಸಿ'' ಎಂಬ ಪರಿಸರ ಪ್ರೇಮಿಗಳ ಹೋರಾಟದ ಕಾವು ತೀರ್ಥಹಳ್ಳಿ ಹಾಗೂ ಮಲೆನಾಡಿನ ಇತರ ಪ್ರದೇಶಗಳಲ್ಲಿ ಜಾಸ್ತಿಯಿತ್ತು. ಈ ಆಂದೋಳನವನ್ನು ಹತ್ತಿರದಿಂದ ಕಂಡು, ಅದು ನೀಡುವ ಒಳನೋಟಗಳ ಬಗ್ಗೆ ವಿಶ್ಲೇಷಣೆ ಮಾಡುವುದು ಹಾಗೂ ತೀರ್ಥಹಳ್ಳಿ ಸಮೀಪದಲ್ಲಿರುವ ಕನ್ನಡ ಸಾಹಿತ್ಯ ಕ್ಷೇತ್ರದ ದಿಗ್ಗಜರಾಗಿದ್ದ ರಾಷ್ಟ್ರಕವಿ ಕುವೆಂಪು ಬಾಳಿ, ಬದುಕಿದ ಕುಪ್ಪಳಿಯನ್ನು ಸಂದರ್ಶಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡೆವು.

ಕನ್ನಡ ನಾಡು, ನುಡಿಗಳಿಗೆ ಕುವೆಂಪುರವರಿಂದ ಸಂದ ಕೊಡುಗೆಗಳು ಅನನ್ಯ. ಕಾವ್ಯ, ಕಾದಂಬರಿ, ನಾಟಕ ಹಾಗೂ ಇತರ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ಮಾಡಿದ ಹೆಗ್ಗಳಿಕೆ ಇವರದು. ದೈತ್ಯ ಪ್ರತಿಭೆಯ ಈ ಸಾಹಿತಿ ಜಾತಿ ಮತಗಳ ಗೋಡೆಗಳನ್ನು ದಾಟಿ, ವಿಶ್ವಮಾನವ ಸಂದೇಶವನ್ನು ಸಾರಿದರು. ಪುರೋಗಾಮಿ ಚಿಂತನೆಗಳಿಗೆ ಚಾಲನೆ ಕೊಟ್ಟರು. ತಾವು ಬೆಳೆದರು, ಇತರರನ್ನು ಬೆಳೆಸಿದರು.

ಅವರ ಕಾವ್ಯ, ಕಾದಂಬರಿ, ಪ್ರಬಂಧ, ಕಥೆಗಳಲ್ಲಿ ಹಾಸುಹೊಕ್ಕಾಗಿರುವ ನಿಸರ್ಗ ರಮಣೀಯತೆಯ ವರ್ಣನೆಗಳು, ಪಾತ್ರಗಳು, ಜೀವನ ಶೈಲಿಯ ಚಿತ್ರಗಳು, ಸಾಂಸ್ಕೃತಿಕ, ಧಾರ್ಮಿಕ ವಿವರಗಳು ಕುಪ್ಪಳಿಯ ಆಜು ಬಾಜು ಪರಿಸರದಿಂದ ಜನ್ಯವಾದವು. ಅಂದಿನ ಪರಿಸರಕ್ಕೂ ಈಗಿನದಕ್ಕೂ ಅಜಗಜಾಂತರ ವ್ಯತ್ಯಾಸಗಳಿದ್ದರೂ, ಕುವೆಂಪುರವರ ಕೃತಿಗಳ ಜೀವಸೆಲೆಯಾಗಿದ್ದ ಕುಪ್ಪಳಿ, ಕವಿಶೈಲ (ಕುವೆಂಪು ಮನೆ ಬಳಿಯಿರುವ ಚಿಕ್ಕ ಗುಡ್ಡ) ಸಂರಕ್ಷಿಸುವ ಉದ್ದೇಶದಿಂದ ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ೧೯೯೨ರಲ್ಲಿ ಅಸ್ತಿತ್ವಕ್ಕೆ ಬಂದಿತು. ನಿವೃತ್ತ ನ್ಯಾಯಮೂರ್ತಿ ಎನ್. ಡಿ. ವೆಂಕಟೇಶ್ ಈಗ ಅದರ ಅಧ್ಯಕ್ಷರು.

ಕುಪ್ಪಳಿಯಿರುವುದು ಕೊಪ್ಪ-ತೀರ್ಥಹಳ್ಳಿ ಹೆದ್ದಾರಿಯಲ್ಲಿ. ದೇವಂಗಿಯಿಂದ ಸಮೀಪವಿರುವ ಒಂದು ಚಿಕ್ಕ ಹಳ್ಳಿ. ತೀರ್ಥಹಳ್ಳಿಯಿಂದ ಸುಮಾರು ಅರ್ಧ ಗಂಟೆಯ ಹಾದಿ. ಹಳ್ಳಿ ಸಮೀಪಿಸುತ್ತಿದ್ದಂತೆ ಸುತ್ತಮುತ್ತಲಿನ ಪ್ರಕೃತಿಯ ನಾನಾ ದೃಶ್ಯಾವಳಿಗಳು ಮನಸೂರೆಗೊಳ್ಳುತ್ತವೆ.

ಕವಿಶೈಲ ಕುವೆಂಪುರವರಿಗೆ ಸ್ಫೂರ್ತಿ ನೀಡಿದ ತಾಣ. ಅಲ್ಲಿಯೇ ಅವರು ನಿಸರ್ಗದ ಸೊಬಗನ್ನು ಮನಸಾರೆ ಸವಿಯುತ್ತಿದ್ದದ್ದು. ಮುಗಿಲಿನಲ್ಲಿ ಜರುಗುವ ರವಿ, ಶಶಿ, ಮೇಘಗಳ ನಾಟಕಗಳನ್ನು ಆಸ್ವಾದಿಸಿದ್ದು. ದೂರದಲ್ಲಿ ಕಾಣುವ ಕೊಡಚಾದ್ರಿ, ಕುಂದಾದ್ರಿ ಮುಂತಾದ ಗಿರಿ ಶ್ರೇಣಿಗಳು ಮೋಡಿ ಮಾಡಿದ್ದು. ಅವರ ಮನೆಗೆ ಬರುತ್ತಿದ್ದ ಸಾಹಿತಿ ಮಿತ್ರರು ತಪ್ಪದೆ ಕವಿಶೈಲಕ್ಕೆ ಭೇಟಿ ನೀಡುತ್ತಿದ್ದರು. ಅಂತಹ ಒಂದು ಸಂದರ್ಭದಲ್ಲೇ ಬಿ. ಎಂ. ಶ್ರೀ., ಟಿ. ಎಸ್. ವೆಂಕಣ್ಣಯ್ಯ ಹಾಗೂ ಕುವೆಂಪು ೧೬-೫-೧೯೩೬ ರಂದು ತಮ್ಮ ಹಸ್ತಾಕ್ಷರಗಳನ್ನು ಬಂಡೆಯೊಂದರ ಮೇಲೆ ಕೆತ್ತಿದ್ದು. ಈಚೆಗೆ ಪೂರ್ಣಚಂದ್ರ ತೇಜಸ್ವಿಯವರ ಹಸ್ತಾಕ್ಷರವು ಸೇರಿದೆ. ಕುವೆಂಪುರವರ ಸಮಾಧಿ ಸ್ಥಳವಿರುವುದು ಇಲ್ಲೇ. ಈ ಪ್ರದೇಶದಲ್ಲಿ ೧೩ ಅಡಿ ಎತ್ತರದ ಬೃಹತ್ ಗಾತ್ರದ ಕಲ್ಲು ಕಂಬಗಳನ್ನು ಗ್ರೀಕ್ ಶೈಲಿಯ ಮುಖ ಮಂಟಪಗಳಂತೆ ರಚಿಸಲಾಗಿದೆ. ಒಂದು ಕಲ್ಲಿನ ತೂಕ ಸುಮಾರು ೧೬ ಟನ್. ಇವುಗಳ ಕರ್ತೃ ಕಲಾವಿದ ಕೆ. ಟಿ. ಶಿವಪ್ರಸಾದ್. ಈ ರಚನೆಗಳ ಬಗ್ಗೆ ಮಿಶ್ರ ಪ್ರತಿಕ್ರಿಯೆ ಬಂದಿದೆ. ಸುತ್ತಮುತ್ತಲಿನ ಸುಮಾರು ೧೫ ಎಕರೆ ಪ್ರದೇಶವನ್ನು ಸುರಕ್ಷಿತ ಅರಣ್ಯವನ್ನಾಗಿ ಪರಿವರ್ತಿಸಲಾಗಿದೆ.

ಕುಪ್ಪಳಿಯ ಸುತ್ತಲಿರುವ ಸುಮಾರು ೩,೦೦೦ ಎಕರೆ ಅರಣ್ಯ ಪ್ರದೇಶವನ್ನು ಜೈವಿಕ ಧಾಮವೆಂದು ಸರ್ಕಾರ ಘೋಷಿಸಿದೆ. ಇಲ್ಲಿದೆ ಕುವೆಂಪು ಅರಣ್ಯ ಅಧ್ಯಯನ ಕೇಂದ್ರ. ದೇವಂಗಿಯ ಕುವೆಂಪು ಅಧ್ಯಯನ ಕೇಂದ್ರದಲ್ಲಿ ಎಂ. ಫಿಲ್. ವಿದ್ಯಾರ್ಥಿಗಳಿಗೆ ಶಿಕ್ಷಣದ ಸೌಲಭ್ಯ ಲಭ್ಯ. ಇಲ್ಲಿ ಒಂದು ರಂಗಮಂದಿರವಿದೆ. ಪರಿಸರ ಸಂರಕ್ಷಣೆ ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳು ಸಾಂಗವಾಗಿ ಜರಗುವಂತೆ ಸೂಕ್ತವಾದ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ಕುಪ್ಪಳಿಯ ಕುವೆಂಪು ಮನೆ ಸುಮಾರು ಎರಡು ಶತಮಾನಗಳಷ್ಟು ಹಳೆಯದಾಗಿತ್ತು. ಕಾಲದ ಹೊಡೆತಗಳಿಂದ ತತ್ತರಿಸಿತ್ತು. ಆದ್ದರಿಂದ ಅದನ್ನು ನವೀಕರಣಗೊಳಿಸುವ ಏರ್ಪಾಟುಗಳು ಸಿದ್ಧವಾದವು. ಸುಮಾರು ರೂ. ೧.೨೦ ಕೋಟಿ ವೆಚ್ಚ ಮಾಡಿ, ಹಳೆಯ ಮನೆಯನ್ನು ಕೆಡವಿ, ಅದೇ ಮಾದರಿಯಲ್ಲಿ ಮೂಲ ಕಟ್ಟಡದ ರೂಪು ರೇಷೆಗಳಿಗೆ ಧಕ್ಕೆ ಬಾರದಂತೆ ಹೊಸ ಮನೆಯನ್ನು ಕಟ್ಟಲಾಗಿದೆ. ಕಳೆದ (೨೦೦೧) ಏಪ್ರಿಲ್ ೭ ರಂದು ಇದನ್ನು ರಾಷ್ಟ್ರಕ್ಕೆ ಸಮರ್ಪಿಸಲಾಯಿತು.

ಮನೆಯ ಮುಂದೆ ಚೌಕಿಯಿದ್ದು, ಅದರ ಮೂಲಕ ಪ್ರವೇಶಿಸಿದಾಗ ಚಿಕ್ಕ ಅಂಗಳ ಸಿಗುತ್ತದೆ. ಅಲ್ಲಿ ತುಳಸಿ ಕಟ್ಟೆ, ಕಂಬಗಳಿಂದ ಕೂಡಿರುವ ಜಗಲಿ, ಬೋದಿಗೆ, ಜಂತಿಗಳ ರಚನಾ ಶೈಲಿ ಗಮನವನ್ನು ಸೆಳೆಯುತ್ತದೆ. ನಡುಮನೆಯ ಬಲಭಾಗದಲ್ಲಿ ಮರದ ಮೆಟ್ಟಿಲು, ಎಡಗಡೆ ಬಾಣಂತಿ ಕೋಣೆ, ಊಟದ ಮನೆ, ಅಡಿಗೆ ಮನೆ, ಫೋಟೋ ಗ್ಯಾಲರಿ ಇವೆ.

ಅಡಿಗೆ ಮನೆಯಲ್ಲಿ ಮರದ ಮರಿಗೆ, ಅನ್ನ ಬಸಿಯಲು ಬಳಸುತ್ತಿದ್ದ ಬಾಗುಮರಿಗೆ, ಹಿಟ್ಟು ಕಲಸುವ ಮರಿಗೆ, ಹೋಳಿಗೆ ಕಾವಲಿ, ದೊಡ್ಡ ಬಳಪದ ಕಲ್ಲಿನ ಗಡಿಗೆ, ಸಾಂಬಾರ ಮರಿಗೆ, ಶೇವಿಗೆ ಮಣೆ, ಕೊಚ್ಚು, ಕೊರಟಿ (ಮಾಂಸ ಕೊಚ್ಚುವುದಕ್ಕೆ), ಕಡೆಗೋಲು - ಕಂಬ ಮಣ್ಣಿನ ಸರಗೋಲುಗಳು ಇವೆ.

ಮೊದಲನೆಯ ಅಂತಸ್ತಿನ ಹೊರಗಡೆ ಗಲ್ಲಾ ಪೆಟ್ಟಿಗೆ, ಮಣ್ಣಿನ ಹರಿವೆ, ಮೊರ, ಗೆರಸಿ, ದೋಣಿ ಹುಟ್ಟು, ಕದ್ದನಿ, ಮರದ ದೊಡ್ಡ ಮರಿಗೆ (ಉಪ್ಪಿನ ಕಾಯಿ ಹಾಕಲು), ಯುದ್ಧದ ಕತ್ತಿ, ಪ್ರಶಸ್ತಿ, ನೆನಪಿನ ಕಾಣಿಕೆ, ಬಳುವಳಿ ಪೆಟ್ಟಿಗೆಗಳಲ್ಲದೆ ಕುವೆಂಪು ಬಳಸುತ್ತಿದ್ದ ದಿನನಿತ್ಯದ ವಸ್ತುಗಳಿವೆ.

ಎರಡನೇ ಅಂತಸ್ತಿನಲ್ಲಿ ಕುವೆಂಪು ವಿರಚಿತ ಕೃತಿಗಳು, ಪ್ರಶಸ್ತಿ - ಪತ್ರಗಳಿವೆ. ಅಧ್ಯಯನ ಕೊಠಡಿಯೂ ಇದೆ. ಇಲ್ಲಿಂದಲೇ ಅವರು ನಯನಾನಂದಕರ ಕುಂದಾದ್ರಿ ಗಿರಿಶ್ರೇಣಿಯ ಸೊಬಗನ್ನು ಸವಿಯುತ್ತಿದ್ದದ್ದು. ಇಲ್ಲಿ ಅನೇಕ ಉದ್ದಾಮ ಸಾಹಿತಿಗಳು ಕುವೆಂಪು ಅವರೊಡನೆ





ವಿಚಾರ ವಿನಿಮಯ ಮಾಡಿದ್ದು.

ಕಟ್ಟಡದ ಒಳಗೋಡೆಗಳಲ್ಲಿ ಕುವೆಂಪು ನುಡಿಮುತ್ತುಗಳನ್ನು ಕಾಣಬಹುದು. ''ಉತ್ತುಂಗ ಶೃಂಗಗಳಿರುವುದು ಪ್ರವಾಸಕ್ಕಲ್ಲದೆ ನಿವಾಸಕ್ಕಲ್ಲ'', ''ಶ್ರೀ ಸಾಮಾನ್ಯನೇ ಭಗವನ್ ಮಾನ್ಯಂ'', ''ಪ್ರಕೃತಿಯಾರಾಧನೆಯೇ ಪರಮಾತ್ಮನಾರಾಧನೆ'', ''ಗುಡಿ, ಚರ್ಚು, ಮಸೀದಿಗಳ ಬಿಟ್ಟು ಹೊರಬನ್ನಿ : ವಿಜ್ಞಾನ ದೀವಿಗೆಯ ಹಿಡಿಯಬನ್ನಿ'', ''ಮಲೆನಾಡೆಂದರೆ ಕರ್ನಾಟಕದ ಕಾಶ್ಮೀರ'', ''ಕೋಟಿ ಧನವಿದ್ದರೂ ಪಟ್ಟಣವು ಗೋಳು, ಕಾಸಿಲ್ಲದಿದ್ದರೂ ಸುಖ ಹಳ್ಳಿ ಬಾಳು'', ''ಸಾಕಿನ್ನು ಸೇರಿರೈ ಮನುಜ ಮತಕ್ಕೆ, ಓ ! ಬನ್ನಿ ಸೋದರರೆ ವಿಶ್ವಪಥಕೆ'' ಮುಂತಾದ ವಚನಗಳು ವಿಚಾರ ಪ್ರಚೋದಕವಾಗಿವೆ.

ಹೊರಗಡೆ ಅಂಗಳದ ಪಕ್ಕದಲ್ಲಿರುವ ಕೊಠಡಿಯಲ್ಲಿ ಮಲೆನಾಡಿನಲ್ಲಿ ವ್ಯವಸಾಯ ಹಾಗೂ ಇತರ ಚಟುವಟಿಕೆಗಳಲ್ಲಿ ಬಳಸುತ್ತಿದ್ದ ಉಪಕರಣಗಳನ್ನು ಪ್ರದರ್ಶಿಸಿದ್ದಾರೆ. ಬಳಪದ ಕಲ್ಲಿನ ಗಡಿಗೆ, ಬಳಪದ ಕಲ್ಲಿನ ಬಾನಿ, ಬೀಸುವ ಕಲ್ಲು, ಮರದ ಪಣತ, ತಡಿಗೆ ಪಣತ, ಭತ್ತದ ಕಣಜ, ಭತ್ತದ ಗೂಡು, ಬೀಲಿನ ಜಲ್ಲೆ, ಬೀಲಿನ ಹೆಡಗೆ ಬುಟ್ಟಿ, ದಾವಣಿ, ಬೆರಕೋಲು, ಹೂಟಿ ನೊಗ, ಗೋರು ಮಣೆ, ಮರದ ನೇಗಿಲು, ಕಬ್ಬಿಣದ ನೇಗಿಲು, ನೊಳ್ಳಿ, ಕೊಟ್ಟೆ ಮಣೆ, ಎತ್ತಿನ ಕಮಾನು ಗಾಡಿ, ದೊಂಟೆ, ಮೀನು ಹಿಡಿಯುವ ಸಲಕರಣೆಗಳಾದ ಇರುಕೋ, ಕಟ್ಟು ಕೂಣಿ ಮುಂತಾದವು ಇವೆ.

ಒಟ್ಟಿನಲ್ಲಿ ಮಲೆನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಜಾನಪದ ಸಂಗ್ರಹಾಲಯದಂತೆ ಈ ಸ್ಮಾರಕ ರೂಪುಗೊಂಡಿರುವುದು ವಿಶೇಷ ಸಂಗತಿ.

ವಿದೇಶಗಳಲ್ಲಿ ಜನಮನ್ನಣೆ ಗಳಿಸಿದ ಖ್ಯಾತ ಸಾಹಿತಿಗಳ ನಿವಾಸಗಳನ್ನು ಸ್ಮಾರಕಗಳನ್ನಾಗಿ ಪರಿವರ್ತಿಸುವುದು ಸಾಮಾನ್ಯ ವಿಷಯ. ಆದರೆ ನಮ್ಮ ರಾಷ್ಟ್ರದಲ್ಲಿ ಅಂತಹ ಪ್ರಯತ್ನಗಳು ವಿರಳ. ನಮ್ಮ ರಾಜ್ಯದಲ್ಲಿ ಕನ್ನಡ ಸಾಹಿತ್ಯಕ್ಕೆ ಅನುಪಮ ಸೇವೆ ಸಲ್ಲಿಸಿದ ಗಣ್ಯ ಸಾಹಿತಿಯೊಬ್ಬರಿಗೆ ಸ್ಮಾರಕವನ್ನು ನಿರ್ಮಿಸುವುದು ಶ್ಲಾಘನೀಯ ವಿಚಾರ. ಕುಪ್ಪಳಿ ಕನ್ನಡ ''ಸಾಹಿತ್ಯಾಸಕ್ತರ ಕಾಶಿಯಾಗಿ ಬೆಳೆದು, ರಾಜ್ಯಾದ್ಯಂತ ಗಮನ ಸೆಳೆಯಲಿ'' ಎಂದು ಆಶಿಸೋಣ.

*ಆಧಾರ : ವಿವಿಧ ಮೂಲಗಳಿಂದ*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್, ಗವೀಪುರಂ ಬಡಾವಣೆ,
ಬೆಂಗಳೂರು-೫೬೦ ೦೧೯

### ವಿಶ್ವ ವೀಕ್ಷಣೆ

# ಕಾಮನ್‌ವೆಲ್ತ್ ಎಂಬ ನಿಷ್ಪ್ರಯೋಜಕ ಸಂಘಟನೆ ಯಾರಿಗೆ ಬೇಕು?

ಆಸ್ಟ್ರೇಲಿಯದಲ್ಲಿ ಈಚೆಗೆ ಜರುಗಿದ ಕಾಮನ್‌ವೆಲ್ತ್ ರಾಷ್ಟ್ರಗಳ ಶೃಂಗ ಸಮಾವೇಶ ಬ್ರಿಟನ್ನಿಗೆ ನುಂಗಲಾಗದ ತುತ್ತು. ಸಮಾವೇಶದಲ್ಲಿ ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರ್‌ಗೆ ಆದ ಮುಖಭಂಗ ಜೀರ್ಣಗೊಂಡಿರುವ ಈ ಕಾಮನ್‌ವೆಲ್ತ್ ಸಂಘಟನೆಯ ಬುಡವನ್ನೇ ಅಲುಗಾಡಿಸಿದೆ. ವಸಾಹತುಶಾಹಿ ದರ್ಪದಲ್ಲೇ ಮೆರೆಯಬೇಕೆನ್ನುವ, ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಬಾಧ್ಯಸ್ಥರು ತಾವೇ ಎಂಬ ಅಹಮಿಕೆಯಿಂದ ವರ್ತಿಸುವ, ಬಿಳಿಯರ ಶ್ರೇಷ್ಠತೆಯನ್ನು ಸಾರಿ ಬೀಗುವ ಬ್ರಿಟನ್ ಮತ್ತು ಅದರ ಅನುಯಾಯಿ ರಾಷ್ಟ್ರಗಳಾದ ನ್ಯೂಜಿಲೆಂಡ್, ಆಸ್ಟ್ರೇಲಿಯ ಮತ್ತು ಕೆನಡಾಗಳಿಗೆ ಏಶಿಯಾ, ಆಫ್ರಿಕಾ ಮತ್ತು ಕೆರಿಬಿಯನ್‌ನ ಮಾಜಿ ವಸಾಹತು ರಾಷ್ಟ್ರಗಳು ಸರಿಯಾದ ಪಾಠ ಕಲಿಸಿದುವು.

ಆಫ್ರಿಕಾ ಖಂಡದ ದಕ್ಷಿಣಕ್ಕಿರುವ ಜಿಂಬಾಬ್ವೆ ರಾಷ್ಟ್ರದ ಪರಿಸ್ಥಿತಿ ಮತ್ತು ಅಧ್ಯಕ್ಷ ಚುನಾವಣೆ, ನಾಲ್ಕು ದಿನಗಳು ಜರುಗಿದ ಈ ಐವತ್ತ ನಾಲ್ಕು ದೇಶಗಳ ಶೃಂಗ ಸಮಾವೇಶದಲ್ಲಿ ಪ್ರಾಮುಖ್ಯವಾದ ವಿಷಯವಾಗಿತ್ತು. ಜಿಂಬಾಬ್ವೆ ಸರಕಾರ ಇತ್ತೀಚೆಗೆ ಕೈಗೊಂಡಿರುವ ಕ್ರಮಗಳಿಂದಾಗಿ ಬಿಳಿಯರ ಪಟ್ಟಭದ್ರ ಹಿತಾಸಕ್ತಿಗಳಿಗೆ ಧಕ್ಕೆ ಉಂಟಾಗಿದೆ. ಸಾಕಷ್ಟು ಸಂಖ್ಯೆಯಲ್ಲಿ ಜಿಂಬಾಬ್ವೆಯಲ್ಲಿ ನೆಲೆಸಿರುವ ಬ್ರಿಟಿಷರು ಆರ್ಥಿಕವಾಗಿ ಇನ್ನೂ ಪ್ರಬಲವಾಗಿಯೇ ಇದ್ದಾರೆ. ಹಾಗಿದ್ದರೂ ಜಿಂಬಾಬ್ವೆ ಸರಕಾರ ಜಾರಿಗೆ ತಂದಿರುವ ಸುಧಾರಣೆಗಳು ಬಿಳಿಯರನ್ನು ಆತಂಕಕ್ಕೀಡುಮಾಡಿವೆ, ಬ್ರಿಟನ್ನಿನ ಕಣ್ಣು ಕೆಂಪಗಾಗಿಸಿವೆ. ಆದರಿಂದಾಗಿಯೇ ಬ್ರಿಟನ್ ಜಿಂಬಾಬ್ವೆ ವಿರುದ್ಧ ಮಾನವ ಹಕ್ಕುಗಳ ಉಲ್ಲಂಘನೆಯ ಆರೋಪ ಮಾಡುತ್ತಿದೆ. ಕಳೆದ ಇಪ್ಪತ್ತೆರಡು ವರ್ಷಗಳಿಂದಲೂ ಅಧ್ಯಕ್ಷರಾಗಿ ಆಳ್ವಿಕೆ ನಡೆಸುತ್ತಿದ್ದು, ಈಗ ಮತ್ತೆ ಚುನಾವಣೆಯಲ್ಲಿ ಆಯ್ಕೆಯಾಗಿರುವ ರಾಬರ್ಟ್ ಮುಗಾಬೆ ಸರ್ವಾಧಿಕಾರಿ ಎಂದು ಆಪಾದಿಸಿದೆ. ಕಾಮನ್‌ವೆಲ್ತ್ ಸಮಾವೇಶದ ಸಮಯದಲ್ಲಿ ಜಿಂಬಾಬ್ವೆಯಲ್ಲಿ ಅಧ್ಯಕ್ಷ ಚುನಾವಣೆಗಳ ಸಿದ್ಧತೆ ನಡೆದಿತ್ತು. ಬ್ರಿಟನ್ ಚುನಾವಣೆ ಅಕ್ರಮವಾಗಿ ನಡೆಯುತ್ತದೆ ಎಂದು ಆರೋಪಿಸಿ, ಜಿಂಬಾಬ್ವೆಯನ್ನು ಕಾಮ್‌ವೆಲ್ತ್‌ನಿಂದ ಅಮಾನತುಗೊಳಿಸಬೇಕೆಂದು ಸೂಚಿಸಿತು. ಅದಕ್ಕಾಗಿ ಸರ್ವಪ್ರಯತ್ನವನ್ನೂ ನಡೆಸಿತು. ಆದರೆ ಅದು ಫಲಿಸದೇ ಹೋಯಿತು. ಬ್ರಿಟನ್‌ಗೆ ಬೆಂಬಲವಾಗಿ ನಿಂತದ್ದು ಬಿಳಿಯ ರಾಷ್ಟ್ರಗಳಾದ ನ್ಯೂಜಿಲೆಂಡ್, ಕೆನಡಾ ಮತ್ತು ಆಸ್ಟ್ರೇಲಿಯಗಳು ಮಾತ್ರ. ಏಶಿಯಾ, ಆಫ್ರಿಕಾ ಮತ್ತು ಕೆರಿಬಿಯನ್ ರಾಷ್ಟ್ರಗಳು ಒಗ್ಗೂಡಿ ಬ್ರಿಟನ್ನಿನ ಸೂಚನೆಯನ್ನು ತಿರಸ್ಕರಿಸಿದುವು. ಈ ಬಗ್ಗೆ ನಡೆದ ಬಿರುಸಿನ ಚರ್ಚೆಯಲ್ಲಿನ ಒಂದು ಘಟ್ಟದಲ್ಲಿ ಬಂದ ಪ್ರತಿಭಟನೆಯಿಂದ ಬ್ರಿಟಿಷ್ ಪ್ರಧಾನಿ ತನ್ನ ಆರ್ಭಟ ನಿಲ್ಲಿಸಿ ಬಾಯಿಮುಚ್ಚಿಕೊಳ್ಳಬೇಕಾಯಿತು. ನೂರಾರು ವರ್ಷಗಳ ಕಾಲ ವರ್ಣಶ್ರೇಷ್ಠತೆ ಎತ್ತಿ ಹಿಡಿದು, ಕುಲವಾದಿ ನೀತಿಗೆ ಪ್ರೋತ್ಸಾಹ ನೀಡಿದ ಬ್ರಿಟನ್ ಆಫ್ರಿಕಾದ ಸ್ವತಂತ್ರ ರಾಷ್ಟ್ರಗಳನ್ನು ಕುಲವಾದಿ ಎಂದು ಆಪಾದಿಸಿದ್ದು ಹಾಸ್ಯಾಸ್ಪದ. ಇದಕ್ಕೆ ಸರಿಯಾದ ತಿರುಗೇಟು ಅದಕ್ಕೆ ಸಿಕ್ಕಿತು.

ಇಪ್ಪತ್ತನೆ ಶತಮಾನದ ಆದಿಯಲ್ಲಿ ಬ್ರಿಟಿಷರ ವಸಾಹತು ಆಗಿದ್ದ ದಕ್ಷಿಣ ರೊಡೇಷಿಯವೇ ಇಂದಿನ ಜಿಂಬಾಬ್ವೆ. ಅಧಿಕ ಸಂಖ್ಯೆಯಲ್ಲಿ ಇಲ್ಲಿಗೆ ಆಗಮಿಸಿದ ಬ್ರಿಟಿಷರು ಗಣಿಗಳು ಮತ್ತು ಫಲವತ್ತಾದ ಭೂಮಿಯ ಒಡೆಯರಾದರು. ಕುಲವಾದಿ ಇಯಾನ್ ಸ್ಮಿತ್‌ನ ವರ್ಣಭೇದ ನೀತಿಯ ವಿರುದ್ಧ ದೀರ್ಘಕಾಲ ಸಶಸ್ತ್ರ ಹೋರಾಟ ನಡೆಸಿದ ನಂತರ ೧೯೮೦ರಲ್ಲಿ ಸ್ವಾತಂತ್ರ್ಯ ಲಭ್ಯ. ಆಗಲೇ ಅದಕ್ಕೆ ಜಿಂಬಾಬ್ವೆ ಎಂಬ ಹೆಸರು ಬಂದದ್ದು. ಆಫ್ರಿಕನ್ ನ್ಯಾಷನಲ್ ಯೂನಿಯನ್ನಿನ ನಾಯಕ ರಾಬರ್ಟ್ ಮುಗಾಬೆ ಅಂದಿನಿಂದಲೂ ಅಧಿಕಾರದಲ್ಲಿದ್ದಾರೆ. ಈಚೆಗೆ ನಡೆದ ಅಧ್ಯಕ್ಷ ಚುನಾವಣೆಯಲ್ಲಿ ಅವರು ಪುನರಾಯ್ಕೆಯಾಗಿದ್ದಾರೆ. ಒಂದು ದೇಶದ ಚುನಾವಣೆಗಳು, ಅಲ್ಲಿನ ಸರಕಾರ ಕೈಗೊಳ್ಳುವ ಕ್ರಮಗಳು ಆ ದೇಶದ ಆಂತರಿಕ ವಿಷಯ. ಅದರಲ್ಲಿ ಹಸ್ತಕ್ಷೇಪ ನಡೆಸಲು ಯಾರಿಗೂ ಹಕ್ಕಿಲ್ಲ. ಅದರಲ್ಲೂ ಕಾಮನ್‌ವೆಲ್ತ್‌ನಂಥ ಸಂಘಟನೆಗೆ ಬ್ರಿಟನ್ನಿನ ಹಿತಾಸಕ್ತಿ ಕಾಪಾಡಲು ಮಧ್ಯಪ್ರವೇಶಿಸುವುದು ಅಸಭ್ಯತೆ. ಬ್ರಿಟನ್ನಿನ ಅಪೇಕ್ಷೆಗಳಿಗೆ ಮಣಿಯದೆ ಸ್ವತಂತ್ರ ರಾಷ್ಟ್ರಗಳು ಸರಿಯಾದ ತೀರ್ಮಾನ ಕೈಗೊಂಡಿದ್ದು ಸ್ತುತ್ಯಾರ್ಹ.

ಇದರಿಂದ ವ್ಯಗ್ರಗೊಂಡಿರುವ ಬ್ರಿಟನ್ ಈಗ ತಾನೇ ಸ್ಥಾಪಿಸಿದ ಕಾಮನ್‌ವೆಲ್ತ್ ಮೇಲೆ ವಿಷ ಕಾರ ತೊಡಗಿದೆ. ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಸಾಧ್ಯವಾಗದೇ ಹೋದ್ದರಿಂದ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಕಾಮನ್‌ವೆಲ್ತ್‌ನ ಮೇಲೆ ಆಕ್ರೋಶಗೊಂಡಿದ್ದಾರೆ. ಬ್ರಿಟನ್ನಿನ ರಾಜಕುಮಾರ ಮಾನವ ಹಕ್ಕುಗಳು ಮತ್ತು ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯದೇ ಹೋದ ಕಾಮನ್‌ವೆಲ್ತ್‌ಅನ್ನು ಧಿಕ್ಕರಿಸಿದ್ದಾನೆ. ಆದರೆ ಆಫ್ರಿಕಾದ ದೇಶಗಳು ಮಾತ್ರ ಅದಕ್ಕೆ ಮಣಿಯದೆ ಇವೆ. ದಕ್ಷಿಣ ಆಫ್ರಿಕಾದ ಅಧ್ಯಕ್ಷರು ತನ್ನ ಸಾಮ್ರಾಜ್ಯ ಕಳೆದುಕೊಂಡ ಮೇಲೆ ಬ್ರಿಟನ್ ತಾನೇ ಸ್ಥಾಪಿಸಿದ ಈ ಕಾಮನ್‌ವೆಲ್ತ್‌ಅನ್ನು ತ್ಯಜಿಸಿ ಹೋಗಲು ಅಡ್ಡಿ ಇಲ್ಲ ಎಂದಿದ್ದಾರೆ.

ಅದೇನೇ ಇರಲಿ ಈ ಕಾಮನ್‌ವೆಲ್ತ್ ಎಂಬುದು ಒಂದು ನಿಷ್ಪ್ರಯೋಜಕ ಸಂಘಟನೆ. ಅರ್ಧ ಶತಮಾನಕ್ಕೂ ಹಿಂದೆ ತಮ್ಮ ಸಾಮ್ರಾಜ್ಯವನ್ನು ಕಳೆದುಕೊಂಡ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಸ್ವತಂತ್ರಗೊಂಡ ಮಾಜಿ ವಸಾಹತುಗಳ ಮೇಲೆ ರಾಜಕೀಯ ಮತ್ತು ಆರ್ಥಿಕ ಹಿಡಿತವನ್ನು ಮುಂದುವರಿಸಿಕೊಂಡು ಹೋಗಲು ಹುಟ್ಟು ಹಾಕಿದ ಸಂಘಟನೆ ಇದು. ಮೊದಲು ಬ್ರಿಟಿಷ್ ಕಾಮನ್‌ವೆಲ್ತ್ ಎಂದಿದ್ದುದು ಸ್ವತಂತ್ರ ರಾಷ್ಟ್ರಗಳ ಒತ್ತಾಯದಿಂದ ಬರೀ ಕಾಮನ್‌ವೆಲ್ತ್ ಆಯಿತು. ಮೂರು ನಾಲ್ಕು ವರ್ಷಗಳಿಗೊಮ್ಮೆ ಸದಸ್ಯ ರಾಷ್ಟ್ರಗಳಲ್ಲೊಂದರ ರಮಣೀಯ ಪ್ರದೇಶದಲ್ಲಿ ವಿಹಾರ ಮತ್ತು ಸಭೆ ನಿರ್ಣಯಗಳ ಅಂಗೀಕಾರ ಹೊರತಾಗಿ ಅದರ ಸಾಧನೆ ಬೇರೇನಿಲ್ಲ ಎನ್ನಬಹುದು. ಈ ಕಾಮನ್‌ವೆಲ್ತ್‌ನ ಸದಸ್ಯತ್ವ ಒಂದು ಅನಗತ್ಯ ಹೊರೆಯೇ ಹೊರತಾಗಿ ಬೇರೇನಿಲ್ಲ. ಭಾರತ ಈ ಕಾಮನ್‌ವೆಲ್ತ್ ತ್ಯಜಿಸಬೇಕು ಎಂದು ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಚಳವಳಿ ನಡೆದದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅಂತರರಾಷ್ಟ್ರೀಯ ವ್ಯವಹಾರಗಳಲ್ಲಾಗಲೀ, ಸದಸ್ಯ ರಾಷ್ಟ್ರಗಳಿಗೆ ಅನುಕೂಲವಾಗಿಯಾಗಲೀ ಯಾವುದೇ ರೀತಿ ಪರಿಣಾಮಕಾರಿಯಲ್ಲದ ಈ ಸಂಘಟನೆ ಹೆಸರಿಗೆ ಮಾತ್ರ ಉಳಿದುಕೊಂಡಿದೆ. ಗುಜರಾತ್ ಗಲಭೆ, ರಾಮಮಂದಿರ ವಿವಾದದಿಂದಾಗಿ ಕೊನೇ ಘಳಿಗೆಯಲ್ಲಿ ಪ್ರಧಾನಿ ವಾಜಪೇಯಿ ಆಸ್ಟ್ರೇಲಿಯಾ ಪ್ರವಾಸ ರದ್ದುಗೊಳಿಸಬೇಕಾಯಿತು. ಆದರೆ ಭಾರತದ ಭಾಗವಹಿಸುವಿಕೆ ಈ ಸನ್ನಿವೇಶದಲ್ಲಿ ಹೇಳಿಕೊಳ್ಳುವಂಥದ್ದೇನೂ ಇರಲಿಲ್ಲ. ಈ ಸಂಘಟನೆಯಿಂದ ಪಾಕಿಸ್ತಾನವನ್ನು ಅಮಾನತುಗೊಳಿಸಿರುವುದೊಂದೇ ಭಾರತಕ್ಕೆ ತೃಪ್ತಿ. ಇದರಿಂದ ಪಾಕಿಸ್ತಾನಕ್ಕೆ ಹಾನಿಯೇನಾಗಿಲ್ಲ.

ನಾಲ್ಕು ದಿನಗಳ ಶೃಂಗಸಮಾವೇಶದಲ್ಲಿ ಮಾಮೂಲಿನಂತೆ ಇತರ ಪ್ರಶ್ನೆಗಳು ಚರ್ಚೆಯಾಗಿ ಒಂದು ಪ್ರಕಟಣೆ ಹೊರಬಂದಿದ್ದರೂ ಅದು ಪ್ರಪಂಚದ ಗಮನ ಸೆಳೆಯಲಿಲ್ಲ. ಜಾಗತೀಕರಣ, ಉದಾರೀಕರಣ, ವಿಶ್ವ ವಾಣಿಜ್ಯ ಸಂಸ್ಥೆ, ಆರ್ಥಿಕ ಹಿಂಜರಿತ ಮೊದಲಾದ ಪ್ರಮುಖ ಪ್ರಶ್ನೆಗಳ ಮೇಲೆ ಗಂಭೀರವಾದ ಚರ್ಚೆ ನಡೆದು ಸ್ಪಷ್ಟವಾದ ನಿಲುವು ತಳೆಯದೆ, ಕೇವಲ ಔಪಚಾರಿಕವಾಗಿ ಪ್ರಸ್ತಾಪಗಳಾದ್ದು ಈ ಸಂಘಟನೆಯ ದಿವಾಳಿ ಕೋರತನವನ್ನು ತೋರುತ್ತದೆ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಸ್ಥಾಪನೆಗೊಂಡ ಈ ಕಾಮನ್‌ವೆಲ್ತ್ ಸಂಘಟನೆ ಇದ್ದರೂ ಒಂದೇ ಹೋದರೂ ಒಂದೇ. ಈ ಸಂಘಟನೆಯಲ್ಲಿರುವ ಏಶಿಯ, ಆಫ್ರಿಕ ಮತ್ತು ಕೆರಿಬಿಯನ್ ದೇಶಗಳು ಅಲಿಪ್ತ ಚಳವಳಿಯಲ್ಲಿ ಕ್ರಿಯಾಶೀಲವಾಗಿದ್ದವು. ಇಂದಿನ ಸಂಕೀರ್ಣ ಪರಿಸ್ಥಿತಿಯಲ್ಲಿ ಈ ರಾಷ್ಟ್ರಗಳು ಒಂದುಗೂಡಿ ಅಲಿಪ್ತ ಚಳವಳಿಯನ್ನು ಚೇತನಗೊಳಿಸಿದರೆ ಹೆಚ್ಚು ಪ್ರಯೋಜನವಾದೀತು.

ಸೀಯಾರ್ಕೆ
೮೪೯, ೬ನೇ ಕ್ರಾಸ್, ೧ನೇ 'ಎ' ಮೇನ್, ಬನಶಂಕರಿ ೩ನೇ ಹಂತ
೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು- ೮೫

ಉಕ್ಕಿನ ಕತೆ

# ಅದುರು ಗುಡ್ಡದಿಂದ ಬದುಕು ಜಟಕದವರೆಗೆ

■ ಪ್ರೊ॥ ಆರ್. ಕೆ. ಶ್ರೀಕಂಠಕುಮಾರಸ್ವಾಮೀ

*ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ – ಮಂಕುತಿಮ್ಮ*

ಒಂದು ಬಗೆಯ ಕಲ್ಲಿನಿಂದ ಕಬ್ಬಿಣ ತಯಾರಿಸು ವುದು ಸರಿಯಷ್ಟೆ. ವೇದಕಾಲದಷ್ಟು ಹಿಂದೆಯೇ (ಕ್ರಿ. ಪೂ. ಸು. ೨೦೦೦) ಈ ಕಲೆ ಮಾನವನಿಗೆ ಸಿದ್ಧಿಸಿತ್ತು. ಪ್ರಾಚೀನ ಗ್ರಂಥಗಳಲ್ಲಿ ಕಬ್ಬಿಣವನ್ನು 'ಅಶ್ಮಸಾರ' ಎಂದು ಉಲ್ಲೇಖಿಸಿದೆ. ಅಶ್ಮ ಎಂದರೆ ಕಲ್ಲು. ಆದರೆ ಕಲ್ಲಿನಲ್ಲಿ ಕಬ್ಬಿಣ ಹೇಗೆ ಬೆರೆತಿದೆ, ಇದನ್ನು ಬೇರ್ಪಡಿಸುವ ತಂತ್ರ ಏನು ಮುಂತಾದವು ಅಂದು ಪೂರ್ತಿ ಅಪರಿಚಿತ. ಉರಿಯುತ್ತಿರುವ ಇದ್ದಲಿನೊಂದಿಗೆ ಅದುರು ಬೆರೆತಾಗ ಗಟ್ಟಿ ಉಂಡೆಗಳು ಮೈವಡೆಯುವುದೆಂದು ಮಾತ್ರ ಗೊತ್ತಿತ್ತು. ಇವನ್ನೇ ಪುನಃ ಕಾಸಿ ತಟ್ಟಿ ಕುಟ್ಟಿ ಬೇಕಾದ ಆಕಾರಗಳನ್ನು ರೂಪಿಸಿಕೊಳ್ಳುತ್ತಿದ್ದರು.

ಇದ್ದಲು ತಯಾರಿಸಲೆಂದು ಬೆಂಕಿ ಉರಿಸುತ್ತಿದ್ದಾಗ, ಇದು ಅಲ್ಲಲ್ಲ ಸಮೃದ್ಧವಾಗಿ ಹರಡಿದ್ದ ಅದುರಿನ ಮೇಲೆ ಧಗಧಗಿಸುತ್ತಿದ್ದುದು ವಿರಳವಲ್ಲ. ಆಗ ಇದ್ದಲಿನಲ್ಲಿದ್ದ ಇಂಗಾಲಾಂಶ ಅದುರಿನಲ್ಲಿದ್ದ ಕಬ್ಬಿಣ ಆಕ್ಸೈಡನ್ನು ಅಪಕರ್ಷಿಸುತ್ತಿತ್ತು. ಉಳಿಕೆಯಾಗಿ ಗಟ್ಟಿ ಉಂಡೆಗಳು ಚದರಿಕೊಂಡಿರುತ್ತಿದ್ದವು. ಇಂಗಾಲ ಬೆರೆತ ಕಬ್ಬಿಣ ಉಂಡೆಗಳಿವು. ಈ ಉಂಡೆಯೇ ಉಕ್ಕು – ವುಟ್ಸ್ ಉಕ್ಕು (Wootz Steel) ಎಂದು ಹೆಸರು.

ಉಕ್ಕಿನ ಬಿಲ್ಲೆಗಳನ್ನು ಅರಬ್ ದೇಶಗಳಗೆ ರಫ್ತು ಮಾಡುತ್ತಿದ್ದರಂತೆ. ಅವರು ಇವುಗಳಿಂದ ಕತ್ತಿ, ಕಠಾರಿ, ಭರ್ಜಿ ಮುಂತಾದ ಆಯುಧ ತಯಾರಿಸಿ ಮರಳಿಸುತ್ತಿದ್ದರಂತೆ. ಆದರೆ ಇವುಗಳ ಅಲಗಿನ ತೀಕ್ಷ್ಣತೆ ಬಹುಕಾಲ ಉಳಿದಿರುತ್ತಿರಲಿಲ್ಲ. ಉಕ್ಕಿನ ಕತ್ತಿ ಅಥವಾ ಮಚ್ಚನ್ನು ಉಚ್ಚ ತಾಪಕ್ಕೇರಿಸಿ ತತ್‌ಕ್ಷಣ ತಣ್ಣೀರಿನಲ್ಲಿ ಅದ್ದಿದರೆ ಅದು ದೃಢವಾಗುವುದು (hardening) ಎಂದು ಅರಿತಿದ್ದರು. ಆದರೆ ಇಂಥ ದೃಢೀಕೃತ ಆಯುಧ ಮಾತ್ರ ಅತಿ ಭಿದುರ (brittle) ಆಗಿರುತ್ತಿತ್ತು. ಮತ್ತೆ ಇದನ್ನು ತುಸು ಹೊತ್ತು ಕಾಸಿ ತಣಿಯಬಿಟ್ಟರೆ (ಹದಗೊಳಿಸಿಸುವುದು – tempering – ಎಂದು ಹೆಸರು) ಈ ಭಿದುರತ್ವ ಕಡಿಮೆ ಆಗುವುದೆಂದೂ ಗೊತ್ತಿತ್ತು. ಇಂದಿಗೂ ಹಳ್ಳಿಗಳಲ್ಲಿ ಕಮ್ಮಾರರು ಈ ತಂತ್ರ ಅನುಸರಿಸುತ್ತಿರುವುದನ್ನು ಕಾಣಬಹುದು.

೧೭ನೆಯ ಶತಮಾನದ ಔದ್ಯೋಗಿಕ ಕ್ರಾಂತಿ ವೇಳೆ ಉಕ್ಕಿನ ಬಳಕೆ ಅತಿಯಾಗಿ ಬೆಳೆಯಿತು. ಸಹಜವಾಗಿ ಉತ್ಪಾದನೆ ಹೊಸ ಜಾಡು ಅರಸುವುದು ಅನಿವಾರ್ಯವಾಯಿತು. ಅದರು-ಇದ್ದಲು ಉರಿಯುತ್ತಿರುವಾಗ ಈ ಮಿಶ್ರಣಕ್ಕೆ ತಿದಿಯೊತ್ತಿ ಗಾಳಿ ಊದಿದರೆ ಇನ್ನಷ್ಟು ಪ್ರಮಾಣದಲ್ಲಿ ಉಕ್ಕನ್ನು ಉತ್ಪಾದಿಸಬಹುದೆಂದು ತೋರಿತು. ಈ ಕ್ರಮದಲ್ಲಿ ತಾಪ ಅತಿಶಯವಾಗಿ ಏರಿತು, ಮತ್ತು ಅದುರಿನಿಂದ ಬೇರ್ಪಟ್ಟ ಕಬ್ಬಿಣ ಇದ್ದಲಿನಿಂದ ಗರಿಷ್ಠ ಇಂಗಾಲಾಂಶ ಹೀರಿಕೊಂಡು ದ್ರವವಾಗಿ ಹೊಮ್ಮಿತು. ಊದು ಕುಲುಮೆಯ (blast furnace) ಉಗಮಕ್ಕೆ ಇದೇ ನಾಂದಿ. ಅದುರಿನಲ್ಲಿ ಕಬ್ಬಿಣದ ಜೊತೆಗಿರುವ ಸಿಲಿಕಾನ್ ಡೈ ಆಕ್ಸೈಡ್, ಅಲ್ಯೂಮಿನಿಯಮ್ ಆಕ್ಸೈಡ್ ಮುಂತಾದ ಕೆಲವು ಅಲೋಹ ಪದಾರ್ಥಗಳೂ ದ್ರವಿಸಿ ಲೋಹಮಲ ಅಥವಾ ಕಿಟ್ಟ (slag) ರೂಪದಲ್ಲಿ ಬೇರ್ಪಟ್ಟವು. ದ್ರವ ಕಬ್ಬಿಣವನ್ನು ಹೊರಕ್ಕೆ ಹರಿಸಿ ಮರಳಚ್ಚುಗಳಲ್ಲಿ ತಣಿದು ಗಟ್ಟಿಕಟ್ಟಲು ಬಿಡುತ್ತಿದ್ದರು.

ಹೀಗೆ ದೊರೆತ ಲೋಹಕ್ಕೆ ಬೀಡು ಕಬ್ಬಿಣ (pig iron) ಎಂದು ಹೆಸರು. ಬೀಡು ಕಬ್ಬಿಣ ಶೇಕಡಾ ಸುಮಾರು ೪.೧ರಷ್ಟು ಇಂಗಾಲಾಂಶವನ್ನು ಹೀರಿಕೊಂಡಿರುವುದರಿಂದ ಅತಿ ಭಿದುರ. ಕೈ ತಪ್ಪಿ ಬಿದ್ದರೆ ಒಡೆದೇ ಹೋಗುತ್ತಿತ್ತು. ಎಂದೇ ಆಯುಧ ನಿರ್ಮಾಣಕ್ಕೆ ಅನುಪಯುಕ್ತ. ಭಿದುರತ್ವ ನಿವಾರಣೆ ಹೇಗೆ ? ತೆರೆದ ಅಗ್ಗಿಷ್ಟಿಕೆ ಕುಲುಮೆಯೊಳಗೆ (open hearth furnace) ಕಲ್ಲಿದ್ದಲ ಬೆಂಕಿಯಲ್ಲಿ ಬೀಡು ಕಬ್ಬಿಣವನ್ನು ಕಾಸಿದಾಗ ಕಬ್ಬಿಣ ದ್ರವಿಸುತಿತ್ತು. ಮತ್ತು ಇಂಗಾಲಾಂಶ ವಾಯು ಮಂಡಲದ ಆಕ್ಸಿಜನ್ನಿನೊಡನೆ ಸೇರಿ ಅನಿಲವಾಗಿ ಉತ್ಪಾಟನೆ ಆಗುತ್ತಿತ್ತು ಎಂದು ತಿಳಿಯಿತು. ಆದರೆ ಈ ಪ್ರಕ್ರಿಯೆಯಿಂದ ಲಭಿಸಿದ ಉಕ್ಕಿನ ದ್ರವನ ಬಿಂದು (melting point) ಇಂಗಾಲಾಂಶ ಕಡಿಮೆಯಾದಷ್ಟು ವರ್ಧಿಸುತ್ತ ಹೋಯಿತು. ಕಲ್ಲಿದ್ದಲು ಬೆಂಕಿ ಉತ್ಪಾದಿಸಿದ ಶಾಖ ಈ ಉಕ್ಕನ್ನು ದ್ರವಸ್ಥಿತಿಯಲ್ಲಿಡಲು ಸಮರ್ಥ ವಾಗಲಿಲ್ಲ. ಮತ್ತೆ ಆ ಉಕ್ಕನ್ನು ಕುಲುಮೆಯಿಂದ ದೊಡ್ಡ ಚೆಂಡುಗಳಾಗಿ ಹೊರತೆಗೆದು ಇವುಗಳಿಗೆ ಆಕಾರ ಕೊಡುತ್ತಿ ದ್ದರು. ಆದರೆ ಈ ಉಕ್ಕಿನಲ್ಲಿ ಇಂಗಾಲಾಂಶ ತೀರ ಕಡಿಮೆ ಇದ್ದುದರಿಂದ ಇದಕ್ಕೆ ದೃಢೀಕರಣ ಸಂಸ್ಕಾರ ನೀಡಲು ಸಾಧ್ಯವೇ ಆಗಲಿಲ್ಲ. ಉಕ್ಕಿಗೆ ತ್ರಾಣ (strength) ಮತ್ತು ದೃಢತೆ (hardness) ಒದಗುವುದು ಅದರಲ್ಲಿಯ ಇಂಗಾಲಾಂಶದಿಂದಲೇ. ಆದರೆ ಇದರ ಏರಿಕೆಯೊಡನೆ ಭಿದುರತ್ವವೂ ಏರುತ್ತದೆ ! ಹೀಗೆ ಅಗ್ಗಿಷ್ಟಿಕೆ ಕುಲುಮೆಯಿಂದ ಬಂದ ಉಕ್ಕು ಆಯುಧೋಪಕರಣಗಳ ನಿರ್ಮಾಣಕ್ಕೆ ಪ್ರಯೋಜನವಾಗಲಿಲ್ಲ.

ತ್ರಾಣ ಬೇಕು, ಭಿದುರತ್ವ ಬೇಡ – ಈ ಹದ ಸಾಧಿಸಲು ಉಕ್ಕಿನಲ್ಲಿರಬೇಕಾದ ಇಂಗಾಲಾಂಶವೆಷ್ಟು? ಇದನ್ನು ಸಾಧಿಸುವುದು ಹೇಗೆ ? ಪ್ರಯೋಗಗಳು ನಡೆದುವು. ತೆರೆದ ಅಗ್ಗಿಷ್ಟಿಕೆ ಉಕ್ಕನ್ನು ೮೦೦ ಡಿಗ್ರಿ ಸೆಲ್ಸಿಯಸ್ ತಾಪದಲ್ಲಿ ೧೦-೧೫ ದಿವಸ ಇಟ್ಟಾಗ ಇದರ ಮೇಲು ಸ್ತರಗಳು (೫-೨೦ ಮಿ. ಮೀ. ವರೆಗೂ) ಇಂಗಾಲವನ್ನು ಹೀರಿಕೊಳ್ಳುತ್ತಿದ್ದುದು ಕಂಡುಬಂತು ! ಇಂಥ ಉಕ್ಕಿನಿಂದ ಬೇಕಾದ ಸಲಕರಣೆಗಳನ್ನು ತಯಾರಿಸಿ ಇವುಗಳಿಗೆ ದೃಢೀಕರಣ ಸಂಸ್ಕಾರ ನೀಡಬಹುದಿತ್ತು. ಇವುಗಳಲ್ಲಿ ಮೇಲು ಪದರ ಗಟ್ಟಿ

ಒಳ ತಿರುಳು ಮಿದುವಾಗಿದ್ದುದು ಆಯುಧ ನಿರ್ಮಾಪಕರಿಗೆ ವರದಾನವೇ ಆಯಿತು.

೧೮ನೆಯ ಶತಮಾನ. ಇಂಗ್ಲೆಂಡಿನ ಶೆಫೀಲ್ಡ್ ಶ್ರೇಷ್ಠ ಉಕ್ಕು ನಿರ್ಮಾಣ ಕೇಂದ್ರವೆಂದು ಪ್ರಸಿದ್ಧವಾಯಿತು. ಇಲ್ಲಿ ಬೆಂಜಮಿನ್ ಹಂಟ್ಸ್‌ಮನ್ ಎಂಬ ಒಬ್ಬ ಗಡಿಯಾರ ತಯಾರಕನಿದ್ದ. ಈತ ತನ್ನ ಗಡಿಯಾರಗಳ ಕಾರ್ಯವೈಖರಿ ಬಗ್ಗೆ ದೂರು ಬರುತ್ತಿದ್ದುದನ್ನು ಗಮನಿಸಿದ (೧೭೪೨): ಅವು ತೋರಿಸುತ್ತಿದ್ದ ವೇಳೆಗಳಲ್ಲಿ ಹೊಂದಾಣಿಕೆ ಇರಲಿಲ್ಲ– ಏಕರೂಪ ಕಾಲಮಾಪನೆ (uniform time measurement) ಇವುಗಳಿಗೆ ಅಸಾಧ್ಯವೋ ಎಂಬಂತೆ ! ಸ್ಪ್ರಿಂಗುಗಳಲ್ಲಿ ಏಕರೂಪತೆ ಇಲ್ಲದಿರುವುದೇ ಈ ಅಸಾಂಗತ್ಯದ ಕಾರಣ ಎಂದು ತಿಳಿಯಿತು. ಆದರೆ ಎಲ್ಲದರಲ್ಲೂ ಬಳಸಿದ್ದು ಏಕರೂಪ ಸಂಸ್ಕಾರಕ್ಕೆ ಒಳಪಡಿಸಿದ್ದ ಉಕ್ಕನ್ನೇ, ಆದರೂ ಈ ಸ್ಪ್ರಿಂಗುಗಳ ದೃಢತೆಗಳು ವಿಭಿನ್ನವಾಗಿದ್ದವು. ಏಕೆ ? ಉಕ್ಕಿನ ಗಟ್ಟಿಗಳನ್ನು ಇದ್ದಲಿನಲ್ಲಿ ಕಾಸಿದಾಗ ಅವು ವಿಭಿನ್ನ ಪ್ರಮಾಣಗಳಲ್ಲಿ ಇಂಗಾಲಾಂಶವನ್ನು ಹೀರಿಕೊಂಡಿದ್ದವು. ಈ ಕೊರತೆಯನ್ನು ಸರಿಪಡಿಸಲು ಅಂದಿನ ಉಕ್ಕು ತಯಾರಕರಿಗೆ ಸಾಧ್ಯವಾಗಲಿಲ್ಲ.

ಹಾಗಾದರೆ ಇವೇ ಗಟ್ಟಿಗಳನ್ನು ಮೂಸೆಯಲ್ಲಿಟ್ಟು ಕರಗಿಸಿ ಇಂಗಾಲಾಂಶದ ಏಕರೂಪ ವಿತರಣೆ ಸಾಧಿಸಬಹುದಲ್ಲವೇ ? ಹಂಟ್ಸ್‌ಮನ್ನನ ಈ ವಾದವೇನೋ ಸರಿ. ಆದರೆ ಇಲ್ಲಿಯ ದ್ರವನ ಪ್ರಕ್ರಿಯೆಗೆ ಸುಮಾರು ೧೫೦೦ ಡಿಗ್ರಿ ಸೆ. ತಾಪ ಅಗತ್ಯ. ಅಂದು ಬಳಕೆಯಲ್ಲಿದ್ದ ಕಾವು ಜೇಡಿ ಮಣ್ಣಿನ ಮೂಸೆಗಳು ಕೇವಲ ೧೨೫೦ ಡಿಗ್ರಿ ಸೆ. ತಾಪವನ್ನು ಮಾತ್ರ ತಾಳಬಲ್ಲವಾಗಿದ್ದವು. ಹೀಗಾಗಿ ಹೊಸ ಮೂಸೆಗೆ ಅಗತ್ಯವಾಗುವ ಹೊಸ ಮಣ್ಣು ಅರಸುತ್ತ ಹಂಟ್ಸ್‌ಮನ್ ಶೆಫೀಲ್ಡ್ ಆಸುಪಾಸಿನ ಗುಡ್ಡಗಾಡುಗಳಲ್ಲಿ ಅಲೆದ. ಪತ್ತೆ ಆಯಿತು ! ಅದು ಸಿಲಿಕಮಯ ಜೇಡಿಮಣ್ಣು (siliceous clay) ಎಂದು ಮುಂದೊಂದು ದಿನ ತಿಳಿಯಿತು. ಇದರ ದ್ರವನ ಬಿಂದು ೧೭೦೦ ಡಿಗ್ರಿ ಸೆ.

ಮೂಸೆ ಸಿದ್ಧವಾಯಿತು. ಉಕ್ಕಿನ ಗಟ್ಟಿಗಳನ್ನು ಕರಗಿಸಿ ಇಂಗಾಲಾಂಶ ವಿತರಣೆಯಲ್ಲಿ ಏಕರೂಪತೆ ತಂದದ್ದಾಯಿತು. ಈ ಉಕ್ಕಿನಿಂದ ತಯಾರಿಸಿದ ಸ್ಪ್ರಿಂಗುಗಳನ್ನು ಒಳಗೊಂಡ ಗಡಿಯಾರಗಳು ಸಂಗತ ಫಲಿತಾಂಶ ನೀಡಿದುವು. ಅತ್ಯುತ್ಕೃಷ್ಟ ಗುಣಮಟ್ಟದ ಉಕ್ಕು ಇದು. ಎಂದೇ ಇದರ ಉಪಯೋಗ ವ್ಯಾಪಕವಾಯಿತು. ಮುಂದಿನ ಸುಮಾರು ೨೦೦ ವರ್ಷ ಪರ್ಯಂತ (೧೯೨೦ರ ತನಕ) ಬೇರೆ ಯಾವ ಪ್ರಕ್ರಿಯೆಯಿಂದಲೂ ಹಂಟ್ಸ್‌ಮನ್-ಗುಣಮಟ್ಟದ ಉಕ್ಕನ್ನು ತಯಾರಿಸಲು ಸಾಧ್ಯವಾಗಲಿಲ್ಲವೆಂಬುದೇ ಅವನ ಮಹತ್ಸಾಧನೆಗೆ ನಿದರ್ಶನ.

ನಾಗರಿಕತೆಯ ಗಾಲಿ ಉರುಳಿತು. ಯುದ್ಧ ಸಂಖ್ಯೆಗಳು ಏರಿದವು, ವಿಧಾನಗಳು ತೀವ್ರ ನಾಶಕಾರಿಗಳಾದವು. ಸಹಜವಾಗಿ ಉಕ್ಕಿನ ಬೇಡಿಕೆ ಹೆಚ್ಚಿತು. ಈ ವೇಳೆಗೆ (ಸು. ೧೮೪೦) ಊದು ಕುಲುಮೆಗಳು ವ್ಯಾಪಕವಾಗಿ ಬಳಕೆಗೆ ಬಂದು ಭೂರಿ ಪ್ರಮಾಣದಲ್ಲಿ ಬೀಡು ಕಬ್ಬಿಣ ಉತ್ಪಾದನೆ ಸಾಧ್ಯವಾಗಿತ್ತು. ಆದರೆ ಕ್ಷಿಪ್ರಾವಧಿಯಲ್ಲಿ ಅಷ್ಟನ್ನೂ ಉಕ್ಕಾಗಿ ಪರಿವರ್ತಿಸುವುದು ಹೇಗೆ ?

ಇದೇ ಸುಮಾರಿಗೆ ಅಮೆರಿಕದಲ್ಲಿ ಕೆಲ್ಲಿ ಎಂಬ ರಸಾಯನ ವಿಜ್ಞಾನಿ ಊದುಕುಲುಮೆಯ ಉಸ್ತುವಾರಿ ಹೊತ್ತಿದ್ದ. ಈತನ ಗಾಢ ಚಿಂತನೆ ಹರಿವ ಪರಿವಿಶಿಷ್ಟವಾಗಿತ್ತು. ಊದು ಕುಲುಮೆಯಲ್ಲಿ ಗಾಳಿಯನ್ನು ಒಳತೂರಲು ಸುತ್ತಲೂ ರಂಧ್ರಗಳಿವೆ. ಇವು ನುಗ್ಗು ಕಿಂಡಿಗಳು (tueyers). ತೆರೆದುಕೊಂಡಿರುತ್ತಿದ್ದವು. ಇಂಥ ಒಂದು ಕಿಂಡಿ ಮೂಲಕ ಆತ ಕುಲುಮೆಯೊಳಗಿನ ಪ್ರಕ್ರಿಯೆಗಳನ್ನು ಗಮನಿಸುತ್ತಿದ್ದ. ಧಗಧಗಿಸುತ್ತಿರುವ ಇದ್ದಲು ಮೇಲಿಂದ ಸರಿಯುತ್ತಿದೆ, ಇದರ ನಡುವೆ ಅದುರಿನಿಂದ ಬೇರ್ಪಟ್ಟ ಕಬ್ಬಿಣ ದ್ರವಿಸಿ ಹನಿಹನಿಯಾಗಿ ಕೆಳಕ್ಕೆ ಒಸರುತ್ತದೆ. ಕಿಂಡಿ ದ್ವಾರ ಒಳಹೊಕ್ಕ ತಣ್ಣನೆ ಗಾಳಿ ಇದ್ದಲಿನ ಉರಿತವನ್ನು ಪೋಷಿಸುತ್ತಿದೆ. ಜೊತೆಗೇ ಕಬ್ಬಿಣ ಹನಿಗಳ ಮೇಲೆ ಅಪ್ಪಳಿಸುತ್ತಲೂ ಇದೆ. ಹಠಾತ್ತಾಗಿ ಎರಡು ಮೂರು ಹನಿಗಳು ಕಣ್ಣು ಕೋರೈಸುವ ಮಿಂಚು ಬೀರಿದವು ! ಇದರ ಗುಟ್ಟೇನು ? ವಾಸ್ತವವಾಗಿ ತಣ್ಣನೆ ಗಾಳಿ ಬಿಸಿ ಹನಿಗಳಿಗೆ ಬಡಿದಾಗ ಇವು ತಣಿದು ಕಪ್ಪಾಗಬೇಕಲ್ಲವೇ ? ತದ್ವಿರುದ್ಧ ಘಟನೆ ಇಲ್ಲಿ ನಡೆದಿದೆ ! ಕೆಲ್ಲಿಯ ರಸಾಯನವಿಜ್ಞಾನ ಮತಿ ಜಾಗೃತವಾಯಿತು: ಕಬ್ಬಿಣದಲ್ಲಿರುವ ಇಂಗಾಲಕ್ಕೆ ಗಾಳಿಯ ಆಕ್ಸಿಜನ್ ಸೋಂಕಿದಾಗ ದಹನ ಪ್ರಜ್ವಲಿಸಿ, ತಾಪ ಏರಿ, ಮಿಂಚು ಥಳಕುತ್ತದೆ. ಇಂಗಾಲವು ಇಂಗಾಲ ಮಾನಾಕ್ಸೈಡ್ ಅಥವಾ ಡೈ ಆಕ್ಸೈಡ್ ಆಗಿ ಉತ್ಕರ್ಷಿಸಿರುತ್ತದೆ. ಇದೊಂದು ಬಹಿರುಷ್ಣತ (exothermic - ರಾಸಾಯನಿಕ ಕ್ರಿಯೆ ವೇಳೆ ಶಾಖ ಉತ್ಪಾದಿಸುವ) ಪ್ರಕ್ರಿಯೆ. ಬೀಡು ಕಬ್ಬಿಣವನ್ನು ಉಕ್ಕಾಗಿಸುವ ಸಮಸ್ಯೆಗೆ ಪರಿಹಾರ ಮಿಂಚಿತು. ಕೆಲ್ಲಿ ಕಾಡು ಹೊಕ್ಕು ಗುಟ್ಟಾಗಿ ಪ್ರಯೋಗ ತೊಡಗಿದ.

೧೮೫೦-೬೦ರ ಅವಧಿ. ಕೆಲ್ಲಿ ಅಮೆರಿಕದಲ್ಲಿ ಪ್ರಯೋಗಮಗ್ನನಾಗಿದ್ದಾಗಲೆ ಇಂಗ್ಲೆಂಡಿನಲ್ಲಿ ಹೆನ್ರಿ ಬೆಸೆಮರ್ ಎಂಬ ಮೆಕ್ಯಾನಿಕಲ್ ಎಂಜಿನಿಯರನೂ ಇದೇ ಸಮಸ್ಯೆಯಿಂದ ಬಾಧಿತನಾಗಿದ್ದ. ಆದರೆ ಈತ ರಸಾಯನ ವಿಜ್ಞಾನಿಯಾಗಿಲ್ಲದ್ದರಿಂದ ಹೆಚ್ಚು ವಿಶ್ಲೇಷಿಸಲಾರದವನಾಗಿದ್ದ. ಕೆಲ್ಲಿ ಇದರ ಬಗ್ಗೆ ಪ್ರಯೋಗನಿರತನಾಗಿದ್ದಾನೆಂಬ ಸುಳುಹು ಸಿಕ್ಕಿತು. ಇದರ ರಹಸ್ಯ ಶೋಧನೆಗೆ ಕೆಲ್ಲಿಯ ಸ್ನೇಹಿತನಾಗಿದ್ದ ತನ್ನ ಭಾವಮೈದುನನನ್ನು ನಿಯೋಜಿಸಿದ. ಈತ ಅಮೆರಿಕಕ್ಕೆ ತೆರಳಿದ, ಕೆಲ್ಲಿಯ ಪ್ರಯೋಗಗಳನ್ನು ಗಮನಿಸಿದ, ಬೀಡು ಕಬ್ಬಿಣವನ್ನು ಉಕ್ಕಾಗಿಸುವ ಮೂಲಭೂತ ಸೂತ್ರ ಅರಿತ. ಆದರೆ ಪಾಪ ! ಕೆಲ್ಲಿಗೆ ಯುಕ್ತ ಧಾರಕ ರಚನೆ ಇನ್ನೂ ಸಿದ್ಧಿಸಿರಲಿಲ್ಲ.

ಇಷ್ಟು ಮಾಹಿತಿ ಪೂರೈಕೆ ಆದೊಡನೆ ಬೆಸೆಮರನ ಎಂಜನಿಯರಿಂಗ್ ಬುದ್ಧಿ ಕ್ರಿಯಾಶೀಲವಾಯಿತು. ಧಾರಕದ ಆಲೇಖ್ಯ ರೂಪಿಸಿ ಅದನ್ನು ನಿರ್ಮಿಸಿ ಪ್ರದರ್ಶನ ಏರ್ಪಡಿಸಿದ (೧೮೫೬): ತಾನು ರಚಿಸಿದ ಪರಿವರ್ತಕ (converter) ಎಂಬ ವಿಶಿಷ್ಟ ಪಾತ್ರೆಗೆ ಕುಲುಮೆಯಿಂದ ದ್ರವ ಬೀಡು ಕಬ್ಬಿಣ ಸುರಿದು ತಳದಿಂದ ತಣ್ಣನೆ ಗಾಳಿಯನ್ನು ದ್ರವದ ಮೂಲಕ ಬುದ್ಬುದಿಸಿದ. ದ್ರವ ಕಬ್ಬಿಣ ವಾಯುರಂಧ್ರಗಳನ್ನು ಪ್ರವೇಶಿಸದಷ್ಟು ಒತ್ತಡದಲ್ಲಿ ಗಾಳಿಯ ಒಳಹೊಡೆತ ಇರಬೇಕು. ಆಗ ಗಾಳಿಯಲ್ಲಿಯ ಆಕ್ಸಿಜನ್ ಕಬ್ಬಿಣದ ಇಂಗಾಲದ ಜೊತೆ ಬೆರೆತು ಇಂಗಾಲದ ಮಾನಾಕ್ಸೈಡ್ ಅಥವಾ ಡೈ ಆಕ್ಸೈಡ್ ಆಗಿ ವಿಸರ್ಜಿತವಾಗುತ್ತದೆ. ಈ ರಾಸಾಯನಿಕ ಕ್ರಿಯೆಯಲ್ಲಿ ಅತ್ಯಧಿಕ ಶಾಖೋತ್ಪನ್ನವಾಗುವುದು. ಇದರ ಹೆಚ್ಚಿನ ಅಂಶ ಗಾಳಿಯಲ್ಲಿರುವ ನೈಟ್ರೋಜನ್ನನ್ನು ಕಾಸಲು ವ್ಯಯವಾದರೂ ಮಿಗತೆ ಅಂಶ ಉಕ್ಕನ್ನು ದ್ರವಸ್ಥಿತಿಯಲ್ಲಿಡಲು ಸಾಕಾಗುತ್ತದೆ. ನೈಟ್ರೋಜನ್ನಿನ ಅಲ್ಪಾಂಶ ಉಕ್ಕಿನಲ್ಲಿ ವಿಲೀನವಾಗುವ ಸಂಭವ ಉಂಟು. ಉಕ್ಕು ನೈಟ್ರೋಜನ್ ಯುಕ್ತವಾಗಿರುವುದು ಈ ಕಾರಣದಿಂದಲೇ.

ಬೆಸೆಮರ್ ವಿಧಾನದಲ್ಲಿ ೧೫ ಟನ್ ದ್ರವ ಕಬ್ಬಿಣವನ್ನು ಕೇವಲ ೧೦ ಮಿನಿಟುಗಳಲ್ಲಿಯೇ ಉಕ್ಕಾಗಿ ಪರಿವರ್ತಿಸಬಹುದಾಗಿತ್ತು. ದ್ರವ ಉಕ್ಕನ್ನು ಕಬ್ಬಿಣದ ಅಚ್ಚುಗಳಿಗೆ ಹೊಯ್ದು ದೊರೆಯುವ ಪಾಳಗಳನ್ನು (ingots) ಬೇಕಾದ ರೀತಿಯಲ್ಲಿ ಬಳಸಬಹುದು. ಉಕ್ಕು ತಯಾರಿಕೆಯಲ್ಲಿ ಬೆಸೆಮರ್ ವಿಧಾನ ಒಂದು ಪ್ರಮುಖ ಘಟ್ಟ. ಆದರೆ ಇದರಿಂದ ದೊರೆತ ಪಾಳಗಳಲ್ಲಿ ಇಂಗಾಲಾಂಶ ತೀರ ಕಡಿಮೆ ಇದ್ದುದರಿಂದ ಈ ಉಕ್ಕು ಯುದ್ಧೋಪಕರಣಗಳ ತಯಾರಿಕೆಗೆ ನಿಷ್ಪ್ರಯೋಜಕವೆನಿಸಿತು – ಇಂಗಾಲಾಂಶ ಶೇಕಡಾ ೦.೦೫-೦.೧೫. ಮೊದಲ ಬಡಿತಕ್ಕೇ ಈ ಪಾಳಗಳು ಒಡೆದು ಪುಡಿ ಆಗುತ್ತಿದ್ದುವು. ಇಂಗ್ಲೆಂಡಿನಲ್ಲಿ ದೊರೆಯುತ್ತಿದ್ದ ಬೀಡು ಕಬ್ಬಿಣ ಅತ್ಯಧಿಕ ಫಾಸ್ಫರಸ್ ಯುತವಾಗಿದ್ದುದೇ (ಶೇ. ೧.೫-೨) ಇದರ ಕಾರಣ. ಅಲ್ಲದೇ ಬೆಸೆಮರ್ ವಿಧಾನ ಬಲು ಚುರುಕಾಗಿದ್ದುದರಿಂದ ಉಕ್ಕಿನಲ್ಲಿಯ ಇಂಗಾಲಾಂಶವನ್ನು ಸಮರ್ಪಕವಾಗಿ ನಿಯಂತ್ರಿಸಲಾಗಲಿಲ್ಲ.

ಇಂಗ್ಲೆಂಡಿನ ಕೈಗಾರಿಕೋದ್ಯಮಿಗಳು ಬೆಸೆಮರನಲ್ಲಿಗೆ ದೂರು ಒಯ್ದರು. ಸ್ವತಃ ಅವನೇ ಉಕ್ಕಿನ ಪಾಳ ತಯಾರಿಸಿ ಅದನ್ನು ಬಡಿದಾಗ ಅದು ಒಡೆಯಲಿಲ್ಲ! ಮುಂದೆ ತಿಳಿಯಿತು ಇದರ ಕಾರಣ: ಅದೃಷ್ಟವಶಾತ್ ಬೆಸೆಮರ್ ತನ್ನ ಪ್ರಯೋಗಕ್ಕೆ ಸ್ವೀಡನ್ನಿನ ಬೀಡು ಕಬ್ಬಿಣ ಉಪಯೋಗಿಸಿದ್ದ. ಇದರಲ್ಲಿ ಫಾಸ್ಫರಸ್ ಅಂಶ ಶೇಕಡಾ ೦.೦೫ಕ್ಕಿಂತಲೂ ಕಡಿಮೆ ಇತ್ತು. ಇಂಗಾಲಾಂಶ ನಿಯಂತ್ರಣ ಸಮಸ್ಯೆಗೆ ಪರಿಹಾರವೂ ಬೆಸೆಮರನಿಗೆ ತಿಳಿಯಲಿಲ್ಲ. ಏತನ್ಮಧ್ಯೆ ಈತ ತನ್ನ ವಿಧಾನ ಕುರಿತು ಇಂಗ್ಲೆಂಡಿನಲ್ಲಿ ಮಾತ್ರವಲ್ಲ ಅಮೆರಿಕದಲ್ಲಿಯೂ ಸ್ವಾಮ್ಯ ಪಡೆದ. ಮುಗ್ಧ ಕೆಲ್ಲಿಯಾದರೋ ಬಡತನದಲ್ಲಿಯೇ ಬಾಳಬೇಕಾಯಿತು.

ಇಂಗಾಲದ ಸಮಸ್ಯೆಗೆ ರಾಬರ್ಟ್ ಮುಶೆಟ್ ಎಂಬ ರಸಾಯನವಿಜ್ಞಾನಿ ಪರಿಹಾರ ಸೂಚಿಸಿದ: ದ್ರವ ಉಕ್ಕನ್ನು ಅಚ್ಚುಗಳಿಗೆ ಹೊಯ್ಯುವ ಮೊದಲು ಫೆರೋ ಮ್ಯಾಂಗನೀಸನ್ನು ಬೆರೆಸಿದರೆ ಉಕ್ಕಿಗೆ ಮ್ಯಾಂಗನೀಸಂಶದ ಜೊತೆಗೆ ಇಂಗಾಲಾಂಶವೂ ಸೇರುತ್ತದೆ. ಇಂಥ ಉಕ್ಕು ಕೈಗಾರಿಕೆಗಳಿಗೆ ಬಲು ಉಪಯುಕ್ತ. ಈ ಪ್ರಕ್ರಿಯೆಗೆ ಮುಸೆಟ್ ಹಕ್ಕನ್ನೇನೋ ಪಡೆದ. ಆದರೆ ಅವಧಿ ಮುಗಿದಾಗ ಮರು ನೋಂದಣಿ ಮಾಡಲು ಮರೆತ. ಬೆಸೆಮರ್ ಇದನ್ನು ತನ್ನ ಹೆಸರಿನಲ್ಲಿ ನೋಂದಾಯಿಸಿ ಈ ಲಾಭವನ್ನೂ ಗಿಟ್ಟಿಸಿಕೊಂಡ.

ಇತ್ತ ಫಾಸ್ಫರಸ್ ಸಮಸ್ಯೆ ಹಾಗೆಯೇ ಉಳಿದಿತ್ತು. ಲಂಡನ್ ವಿಶ್ವವಿದ್ಯಾಲಯದ ಒಬ್ಬ ಪ್ರಾಧ್ಯಾಪಕ ಸಂಜೆ ತರಗತಿಯಲ್ಲಿ ಇದರ ಬಗ್ಗೆ ಪ್ರಸ್ತಾವಿಸಿದನಂತೆ. ಲಂಡನ್ನಿನ ಅಂಚೆ ಕಚೇರಿಯಲ್ಲಿ ನೌಕರನಾಗಿದ್ದ ಎಸ್.ಜಿ.ತಾಮಸ್ ಎಂಬಾತ ಈ ತರಗತಿಯ ವಿದ್ಯಾರ್ಥಿ – ಅತ್ಯಂತ ಪ್ರತಿಭಾಶಾಲಿ. ಒಡನೆ ಈ ಸಮಸ್ಯೆ ಗ್ರಹಿಸಿದ, ತನ್ನ ತಂಗಿ ಜೊತೆ ನಗರದಿಂದ ೩೨ ಕಿ. ಮೀ. ದೂರದಲ್ಲಿದ್ದ ಹಳ್ಳಿಯ ಮುರುಕು ಮನೆಯಲ್ಲಿ ಪ್ರಯೋಗಮಗ್ನನಾದ – ನಾಲ್ಕು ವರ್ಷಗಳ ತಪಸ್ಸು, ಪರಿಹಾರ ಲಭಿಸಿತು.

ಆ ಪ್ರಕಾರ ಉಕ್ಕಿನಲ್ಲಿರುವ ಫಾಸ್ಫರಸನ್ನು ಕಿಟ್ಟದ

ಮೂಲಕ ತೆಗೆಯಬಹುದು. ಆದರೆ ಇದಕ್ಕೆ ಹೆಚ್ಚು ಕ್ಯಾಲ್ಸಿಯಮ್ ಆಕ್ಸೈಡ್ ಅಂಶವಿರಬೇಕು. ಇದು ಉಕ್ಕಿನಲ್ಲಿಯ ಫಾಸ್ಫರಸ್ ಜೊತೆ ಸಂಯೋಗಿಸಿ ಕ್ಯಾಲ್ಸಿಯಮ್ ಫಾಸ್ಫೇಟ್ ಆಗುತ್ತದೆ. ಉಕ್ಕಿನಲ್ಲಿದು ಲೀನವಾಗದು, ಕಿಟ್ಟದಲ್ಲಿಯೇ ಉಳಿದಿರುತ್ತದೆ. ಉಕ್ಕಿನಿಂದ ಕಿಟ್ಟ ಸುಲಭವಾಗಿ ಬೇರ್ಪಡುತ್ತದೆ. ಹೀಗೆ ಫಾಸ್ಫರಸ್ ನಿವಾರಣಾ ತಂತ್ರ ಸಿದ್ಧಿಸಿತು.

ಒಡನೆ ಇಂಗ್ಲೆಂಡಿನ ಉದ್ಯಮಿಗಳು ಕಾರ್ಯಶೀಲರಾದರು. ಆದರೆ ಪ್ರಥಮ ಪ್ರಯೋಗವೇ ದುರಂತ ಪರ್ಯವಸಾಯಿಯಾಯಿತು: ದ್ರವ ಉಕ್ಕು, ಪಾತ್ರೆಯಲ್ಲಿ ಉಂಟಾದ ದೊಡ್ಡ ರಂಧ್ರದ ಮೂಲಕ, ಸುರಿದುಹೋಯಿತು. ಕೂಡಲೇ ತಾಮಸ್ (ಬೆಸೆಮರನಂತಲ್ಲದೇ) ಕಾರ್ಖಾನೆಗೆ ಹೋಗಿ ಪರಿಸ್ಥಿತಿಯನ್ನು ಪರಿಶೀಲಿಸಿದ: ಹಂಟ್ಸ್‌ಮನ್ ಬಳಸುತ್ತಿದ್ದ ಸಿಲಿಕಯುಕ್ತ ಜೇಡಿಮಣ್ಣಿನಿಂದ ತಯಾರಿಸಲಾಗಿದ್ದ ಬೆಸೆಮರ್ ಪಾತ್ರೆ ಆ ಉಚ್ಚತಾಪವನ್ನು ತಾಳಲು ಶಕ್ತವಾಗಲಿಲ್ಲ. ತಾಮಸನಿಗೆ ಈ ಸೂಕ್ಷ್ಮ ಅರ್ಥವಾಯಿತು. ಅವನು ಇಂಗ್ಲೆಂಡೆಲ್ಲ ಸುತ್ತಾಡಿ ಡಾಲೊಮೈಟ್ ಎಂಬ ಮಣ್ಣನ್ನು ಶೋಧಿಸಿದ. ಇದರಲ್ಲಿ ಕ್ಯಾಲ್ಸಿಯಮ್ ಆಕ್ಸೈಡ್ ಮತ್ತು ಮೆಗ್ನೀಸಿಯಮ್ ಆಕ್ಸೈಡ್ ಇವೆ. ಬೆಸೆಮರ್ ಪಾತ್ರೆಯೊಳಗಡೆಗೆ ಇದನ್ನು ಲೇಪಿಸಿದಾಗ ಯಾವ ತೊಂದರೆಯೂ ಇಲ್ಲದೇ ಕ್ಯಾಲ್ಸಿಯಮ್ ಆಕ್ಸೈಡ್ ಕಿಟ್ಟದ ಜೊತೆ ಫಾಸ್ಫರಸಿನ ಉತ್ಪಾಟನೆಯೂ ಕೈಗೂಡಿತು.

ಬೆಸೆಮರ್ ಉಕ್ಕು ನಿರ್ಮಾಣ ವಿಧಾನ ಅತಿತ್ವರಿತಗತಿಯದಾಗಿದ್ದುದರಿಂದ ಇಂಗಾಲಾಂಶದ ನಿಯಂತ್ರಣ ಕಷ್ಟವಾಯಿತು. ಹಾಗಾಗಿ ಈ ವಿಧಾನ ಹೆಚ್ಚು ಪ್ರಿಯವಾಗಲಿಲ್ಲ. ಉಕ್ಕಿನಲ್ಲಿಯ ಇಂಗಾಲಾಂಶ ಕನಿಷ್ಠ ಪ್ರಮಾಣಕ್ಕೆ ಇಳಿದ ಬಳಿಕ ಅಪೇಕ್ಷಿತ ಮೊತ್ತದಲ್ಲಿ ಅದನ್ನು ಸೇರಿಸಬಹುದಲ್ಲವೇ ಎಂಬ ಪ್ರಶ್ನೆ ಬರಬಹುದು. ಆದರೆ ಇದು ಪ್ರಾಯೋಗಿಕವಲ್ಲ. ಅಲ್ಲದೇ ಇಂಥ ಉಕ್ಕಿನ ಗುಣಮಟ್ಟವೂ ಉತ್ಕೃಷ್ಟವಾಗಿರದು.

ಅದೇ ವೇಳೆ ಇಂಗ್ಲೆಂಡಿನಲ್ಲಿ ಇತರರು ಇಂಗಾಲ ನಿರ್ಮೂಲನೆಗೆ ಬೇರೆ ತಂತ್ರಗಳನ್ನು ಶೋಧಿಸುತ್ತಿದ್ದರು. ಆ ಪೈಕಿ ಫ್ರೆಂಚ್ ದೇಶೀಯರಾಗಿ ಇಂಗ್ಲೆಂಡ್‌ನಲ್ಲಿಯೇ ನೆಲಸಿದ್ದ ಸೀಮನ್ಸ್ ಮತ್ತು ಮಾರ್ಟಿನ್ ಮುಖ್ಯರು. ಸೀಮನ್ಸ್ ಒಂದು ಪ್ರಯೋಗ ಮಾಡಿದ (೧೮೬೦): ತೆರೆದ ಅಗ್ಗಿಷ್ಟಿಕೆ ಕುಲುಮೆಯಲ್ಲಿ ಬೀಡು ಕಬ್ಬಿಣ ಕರಗಿಸಿ ಅದಕ್ಕೆ ಕಬ್ಬಿಣ ಅದುರಿನ ಹೆಂಟೆಗಳನ್ನು ಹಾಕಿ ಕಲಕಿದರೆ ಅದುರಿನಲ್ಲಿರುವ ಕಬ್ಬಿಣ ಆಕ್ಸೈಡ್ ತನ್ನ ಆಕ್ಸಿಜನ್ನನ್ನು ಕಬ್ಬಿಣಕ್ಕೆ ಕೊಟ್ಟು ಇದರಲ್ಲಿರುವ ಇಂಗಾಲವನ್ನು ಇಂಗಾಲ ಮಾನಾಕ್ಸೈಡ್ ಅಥವಾ ಡೈ ಆಕ್ಸೈಡ್ ಅನಿಲವಾಗಿ ಮಾರ್ಪಡಿಸಿ ವಿಸರ್ಜಿಸಬಹುದು. ಇದು ಮಂದಗತಿಯ ವಿಧಾನ. ಎಂದೇ ಇದರಲ್ಲಿ ಇಂಗಾಲ ನಿರ್ಮೂಲನವನ್ನು ನಿಯಂತ್ರಿಸಬಹುದು. ಅಲ್ಲದೇ ನೈಟ್ರೊಜನ್ ಉಕ್ಕಿಗೆ ಜಮೆ ಆಗುವುದೂ ಇಲ್ಲ.

ಆಗ ಅವನಿಗೊಂದು ಸಮಸ್ಯೆ ಎದುರಾಯಿತು: ಬೀಡು ಕಬ್ಬಿಣ ಕರಗಿಸಲು ಕಲ್ಲಿದ್ದಲನ್ನು ಪಕ್ಕದಲ್ಲಿ ಉರಿಸಿ ಶಾಖೋತ್ಪತ್ತಿ ಮಾಡಲಾಗುತ್ತಿತ್ತು. ಕಬ್ಬಿಣದಲ್ಲಿ ಇಂಗಾಲಾಂಶ ಕಡಿಮೆಯಾದಂತೆ ಅದನ್ನು ದ್ರವಸ್ಥಿತಿಯಲ್ಲಿಡಲು ಬೇಕಾಗುವ ಅಧಿಕ ಶಾಖವನ್ನು ಕಲ್ಲಿದ್ದಲು ಉತ್ಪಾದಿಸಲಾರದಾಗಿತ್ತು. ಫಲಿತಾಂಶ: ಉಕ್ಕು ಒಂದು ದೊಡ್ಡ ಗಟ್ಟಿ ಕೆಂಪು ಉಂಡೆಯಾಗಿ ಕುಲುಮೆಯಲ್ಲಿ ನಿಲ್ಲುತ್ತಿತ್ತು. ಇದನ್ನು ಹೊರತೆಗೆಯುವುದು ಕಡುಕಷ್ಟ. ಕಿಟ್ಟವನ್ನಂತೂ ಬೇರ್ಪಡಿಸಲು ಸಾಧ್ಯವೇ ಇರಲಿಲ್ಲ.

ಮುಂದೆ, ಕಲ್ಲಿದ್ದಲಿನಿಂದ ತಯಾರಿಸಿದ ಪ್ರೊಡ್ಯೂಸರ್ ಅನಿಲವನ್ನು ಕುಲುಮೆಯೊಳಗೆ ಉರಿಸಿದ. ತಾಪ ಸಾಕಾಗಲಿಲ್ಲ. ಇನ್ನೊಂದು ಉಪಾಯ ಹೊಳೆಯಿತು: ಪೂರ್ವತಪ್ತ ವಾಯುವಿನಿಂದ (preheated air) ಅನಿಲವನ್ನು ಉರಿಸಿದಾಗ ಅಧಿಕ ತಾಪ ಸಾಧ್ಯ ಎಂದು ತಿಳಿದಿತ್ತು. ಆದರೆ ಗಾಳಿಯನ್ನು ಪೂರ್ವಭಾವಿಯಾಗಿ, ಮಿತವೆಚ್ಚದಲ್ಲಿ, ಬಿಸಿ ಮಾಡುವುದು ಹೇಗೆ ? ಆ ಒಂದು ದಿನ ಸೀಮನ್ಸ್ ಲಂಡನ್ನಿನ ಕ್ಷಯರೋಗ ಚಿಕಿತ್ಸಾಲಯಕ್ಕೆ ಭೇಟಿ ನೀಡಿದ– ಶುಶ್ರೂಷೆ ಪಡೆಯುತ್ತಿದ್ದ ಒಬ್ಬ ಸ್ನೇಹಿತನನ್ನು ನೋಡುವ ಸಲುವಾಗಿ. ಅಲ್ಲಿ ಪ್ರತಿರೋಗಿಯೂ ಒಂದು ಬೆಳ್ಳಿಡಬ್ಬವನ್ನು ತನ್ನ ಮೂಗಿನ ಬಳಿ ಇಟ್ಟುಕೊಂಡು ಅದರ ಮೂಲಕ ಉಸಿರಾಡುತ್ತಿದ್ದ ! ವೈದ್ಯ ವಿವರಿಸಿದ: ರೋಗಿಗಳು ನೇರ ವಾಯುಮಂಡಲದಿಂದ ಶೀತಗಾಳಿ ಉಸಿರಾಡುವುದು ಹಿತವಲ್ಲ; ಡಬ್ಬದೊಳಗೆ ಬೆಳ್ಳಿ ತಂತಿಗಳನ್ನು ಅಳವಡಿಸಿದೆ; ನಿಃಶ್ವಸಿತ ವಾಯು ಈ ತಂತಿಗಳ ಮೂಲಕ ಹೊರಹೋಗುವಾಗ ಇವು ಬಿಸಿ ಆಗುತ್ತವೆ, ಮತ್ತು ಉಸಿರೆಳೆದುಕೊಳ್ಳುವಾಗ ಇವುಗಳ ಮೂಲಕ ಒಳಹೋಗುವ ವಾಯು ಬಿಸಿ ಆಗುತ್ತದೆ.

ತನ್ನ ಕುಲುಮೆಗೆ ಪೂರ್ವತಪ್ತ ವಾಯುವನ್ನು ಇದೇ ತೆರನಾಗಿ ಊಡಬಹುದಲ್ಲವೇ ಎಂಬ ಹೊಳಹು ಸೀಮನ್ಸ್ ಮನದಲ್ಲಿ ಮಿಂಚಿತು. ಕುಲುಮೆಯಲ್ಲಿ ನಿಷ್ಕಾಸ ಅನಿಲದ (exhaust gas) ತಾಪ ಒಳಗಿನಷ್ಟೇ ಇರುತ್ತದೆ. ಇವುಗಳಲ್ಲಿ ನಿಹಿತವಾಗಿರುವ ಶಾಖವನ್ನು ಇಟ್ಟಿಗೆಯಲ್ಲಿ ಶೇಖರಿಸಿ ಮುಂದುವರಿಯುವುದು ಸಾಧ್ಯವೇ ? ಒಡನೆ ಕುಲುಮೆಯ ಒಂದೊಂದು ಪಾರ್ಶ್ವದಲ್ಲಿ ಒಂದೊಂದು ಇಟ್ಟಿಗೆ ಕೊಠಡಿ ಕಟ್ಟಿಸಿದ. ಇವುಗಳಲ್ಲಿ ಕಾವು ಜೇಡಿಮಣ್ಣಿನ ಇಟ್ಟಿಗೆಗಳನ್ನು ಜೇನೆರಿಯಂತೆ ಅನೇಕ ರಂಧ್ರಗಳು ನೇರವಾಗಿ ಬರುವ ರೀತಿ ಅಳವಡಿಸಿದ. ಕುಲುಮೆಯ ಒಂದು ಪಾರ್ಶ್ವದಲ್ಲಿ ಅನಿಲ ಉರಿಯುತ್ತಿರುವಾಗ ಅದರ ನಿಷ್ಕಾಸ ಅನಿಲಗಳು ಎದುರ ತೂತಿನಿಂದ ಹೊರಹೊಮ್ಮಿ ಆ ಪಾರ್ಶ್ವದಲ್ಲಿರುವ ಕೊಠಡಿ ಇಟ್ಟಿಗೆಗಳ ನಡುವಿನ ರಂಧ್ರಗಳಲ್ಲಿ ಹಾದು ಚಿಮಣಿಗೆ ಹೋಗುತ್ತವೆ. ಸಹಜವಾಗಿ ಆ ಇಟ್ಟಿಗೆಗಳು ಕಾಯುತ್ತವೆ. ೧ ಗಂಟೆ ಬಳಿಕ ಅನಿಲ ಉರಿಯುವ ದಿಶೆಯನ್ನು ಬದಲಿಸಿ ಇದಕ್ಕೆ ಬೇಕಾಗುವ ಗಾಳಿಯನ್ನು ಆ ಪಾರ್ಶ್ವದಲ್ಲಿಯೇ ಇರುವ ಕಾದ ಇಟ್ಟಿಗೆಗಳ ಮೂಲಕ ಹಾಯಿಸಬೇಕು. ಈ ತಣ್ಣನೆ ಗಾಳಿ ಶಾಖ ಹೀರಿ ಪೂರ್ವತಪ್ತ ವಾಯು ಆಗುತ್ತದೆ. ಇಲ್ಲಿಯ ನಿಷ್ಕಾಸ ಅನಿಲಗಳು ಇನ್ನೊಂದು ಪಾರ್ಶ್ವದಲ್ಲಿರುವ ಕೊಠಡಿ ಇಟ್ಟಿಗೆಗಳನ್ನು ಕಾಸುತ್ತವೆ. ಈ ತಂತ್ರದಲ್ಲಿ ಗಂಟೆಗೊಂದಾವರ್ತಿ ಅನಿಲದಹನದ ದಿಶೆಯನ್ನು ವಿಪರ್ಯಯಿಸುತ್ತಿದ್ದರೆ (reverse) ಸಾಕು. ಹೀಗೆ ಪೂರ್ವತಪ್ತ ವಾಯುವಿನಿಂದ ದಹಿಸುವ ಅನಿಲ ಉಕ್ಕನ್ನು ದ್ರವಸ್ಥಿತಿಯಲ್ಲಿಡಲು ಅವಶ್ಯವಾದ ಶಾಖವನ್ನು ಸರಾಗವಾಗಿ ಉತ್ಪಾದಿಸುತ್ತಿರುವುದು.

ಈ ವಿಧಾನದಲ್ಲಿ ಇಂಗಾಲ ನಿಯಂತ್ರಣವನ್ನು ಅಪೇಕ್ಷೆಯಂತೆ ಸಾವಕಾಶವಾಗಿ ನಿರ್ವಹಿಸುವುದು ಸಾಧ್ಯ, ತಾಪನಿಯಂತ್ರಣ ಕೂಡ. ನಮ್ಮ ಅನುಕೂಲತೆಗೆ ತಕ್ಕಂತೆ ಬೇರೆ ಬೇರೆ ಪದಾರ್ಥಗಳನ್ನು ಉಕ್ಕಿಗೆ ಸೇರಿಸಬಹುದು. ಇತರ ಅನವಶ್ಯ ಅನಿಲಗಳು ಉಕ್ಕಿನಲ್ಲಿ ಲೀನಿಸುವುದು ಕಡಿಮೆ. ಆದ್ದರಿಂದ ಇದರ ಗುಣಮಟ್ಟ ಉತ್ಕೃಷ್ಟ. ೨೦ನೆಯ ಶತಮಾನದ ಪ್ರಥಮಾರ್ಧದ ತನಕವೂ ಪ್ರಪಂಚದ ಶೇಕಡಾ ೯೫ ಉಕ್ಕು ಈ ಪ್ರಕಾರ ತಯಾರಾಗುತ್ತಿತ್ತು. ಸೀಮನ್ಸ್ ಜೊತೆ ಮಾರ್ಟಿನ್ ಸೇರಿ ಉಕ್ಕಿನ ತ್ಯಾಜ್ಯವಸ್ತುಗಳನ್ನು (scrap) ಕೂಡ ಬೀಡು ಕಬ್ಬಿಣದೊಂದಿಗೆ ಕೂಡಿಸಿ ಕರಗಿಸಬಹುದೆಂದು ತೋರಿಸಿದರು. ಇದರಿಂದ ಉಕ್ಕು ತಯಾರಿಕೆ ವೆಚ್ಚ ಬಹಳಷ್ಟು ತಗ್ಗಿತು.

ಯುದ್ಧ ಭೀತಿ ತಟ್ಟಿರದ ಸ್ವಿಟ್ಜರ್ಲೆಂಡಿನಲ್ಲಿ ರಾಬರ್ಟ್ ಡ್ಯೂರರ್ ಎಂಬಾತ ೧೯೩೯ರಿಂದಲೇ ಬೆಸೆಮರ್ ವಿಧಾನದಲ್ಲಿ ಗಾಳಿಗೆ ಬದಲಾಗಿ ಶುದ್ಧ ಆಕ್ಸಿಜನ್ನನ್ನು ಬಳಸುವುದರ ಬಗ್ಗೆ ಪ್ರಯೋಗನಿರತನಾಗಿದ್ದ. ಬೆಸೆಮರನಿಗೂ ಈ ತಂತ್ರ ತಿಳಿದಿತ್ತು. ಆದರೆ ಈ ಸಂದರ್ಭದಲ್ಲಿ ಸಂಜನಿಸುವ ಅತಿಶಾಖದಿಂದ ಇಟ್ಟಿಗೆಗಳೇ ದ್ರವಿಸಿಬಿಡುತ್ತಿದ್ದುವು. ಡ್ಯೂರರ್ ಇಲ್ಲೊಂದು ಸುಧಾರಣೆ ತಂದ: ತಳದ ಇಟ್ಟಿಗೆಗಳಲ್ಲಿಯ ರಂಧ್ರಗಳ ಮೂಲಕ ಆಕ್ಸಿಜನ್ನನ್ನು ಊಡುವುದರ ಬದಲು ಮೇಲಿನಿಂದ ಧಾರೆಯ (jet) ರೂಪದಲ್ಲಿ ಹಾಯಿಸಬೇಕು. ಪ್ರಯೋಗ ಯಶಸ್ವಿಯಾಯಿತು.

ಮುಂದೆ ೧೯೪೮ರಲ್ಲಿ ಆಸ್ಟ್ರಿಯಾದ ಲಿನ್ಜ್ ಮತ್ತು ಡೋನವಿಟ್ಜ್ ಎಂಬ ಊರುಗಳಲ್ಲಿ ಪುಟ್ಟ ೫ ಟನ್ ಪಾತ್ರೆಗಳಲ್ಲಿ ಮಾಡಿದ ಪ್ರಯೋಗಗಳೂ ಸಫಲವಾದುವು. ಈ ವಿಧಾನದಲ್ಲಿ ಬೀಡು ಕಬ್ಬಿಣ ಉಕ್ಕಾಗಲು ಸುಮಾರು ೪೦-೬೦ ಮಿನಿಟುಗಳು ಬೇಕು. ಇಂಗಾಲಾಂಶ ನಿಯಂತ್ರಣ ಸಾಧ್ಯ. ಬಾಹ್ಯ ಇಂಧನದ ಅಗತ್ಯ ಇಲ್ಲ. ಇದರಲ್ಲಿ ಶುದ್ಧ ಆಕ್ಸಿಜನ್ ಉತ್ಪಾದಿಸುವ ಅಗಾಧ ಶಾಖವನ್ನು ಬಳಸಿಕೊಂಡು ತ್ಯಾಜ್ಯವಸ್ತುಗಳ ಬಳಕೆ ಕೂಡ ಸಾಧ್ಯ. ತೆರೆದ ಅಗ್ಗಿಷ್ಟಿಕೆ ವಿಧಾನದ ಸೌಲಭ್ಯಗಳನ್ನು ಒಳಗೊಂಡಿರುವ ಜೊತೆಯಲ್ಲೇ ಬೆಸೆಮರ್ ವಿಧಾನದ ತೊಂದರೆಗಳಿಂದ ಮುಕ್ತವಾಗಿರುವ ಈ ವಿಧಾನ ಸರ್ವಾದರಣೀಯವಾಯಿತು. ಇಂದು ಪ್ರಪಂಚಾದ್ಯಂತ ಬಹುತೇಕ ಈ ಲಿನ್ಜ್-ಡೋನವಿಟ್ಜ್ ವಿಧಾನವೇ ಬಳಕೆಯಲ್ಲಿರುವುದಾಗಿದೆ.

ಉಕ್ಕಿನ ತಯಾರಿಕೆಯಲ್ಲಿಯ ವಿಕಾಸ ನಾಗರಿಕತೆಯ ಪ್ರಗತಿಗೆ ಹಿಡಿದ ಕನ್ನಡಿ. ಯಾವುದೇ ದೇಶದ ಪ್ರಗತಿ ಮಾನಕ ಅಲ್ಲಿ ಬಳಕೆ ಆಗುತ್ತಿರುವ ಉಕ್ಕಿನ ಪ್ರಮಾಣ ಎನ್ನುವುದುಂಟು. ಉದಾಹರಣೆಗೆ, ವ್ಯಕ್ತಿಯೊಬ್ಬನಿಗೆ ಸ್ವೀಡನ್ನಿನಲ್ಲಿ ೬೦೦ ಕೆಜಿ, ಅಮೆರಿಕದಲ್ಲಿ ೫೦೦ ಕೆಜಿ, ಜಪಾನಿನಲ್ಲಿ ೫೦೦ ಕೆಜಿ, ರಷ್ಯದಲ್ಲಿ ೪೫೦ ಕೆಜಿ ಉಕ್ಕು ವಿನಿಯೋಗವಾಗುತ್ತಿದೆ. ಭಾರತದಲ್ಲಿ ಇದು ಕೇವಲ ೨೫ ಕೆಜಿ – ಕಬ್ಬಿಣ ಅದುರಿನ ಸಾಗರದಲ್ಲಿ ಉಕ್ಕಿಗಿಲ್ಲ ಆಗರ !

ಪ್ರೊ॥ ಆರ್. ಕೆ. ಶ್ರೀಕಂಠಕುಮಾರಸ್ವಾಮೀ
೪೦೮, 'ಲಕ್ಷ್ಮಿ ರಾಮಸ್ವಾಮಿ ಸೌಧ', ೧೦೨೮/೧, ಜಯಲಕ್ಷ್ಮಿ ರಸ್ತೆ, ಚಾಮರಾಜಪುರ, ಮೈಸೂರು - ೫೭೦ ೦೦೫

## ಸುಗ್ಗಿ

ಕಣ್ತೆರೆದರೆ ಹೊಗೆ, ಬೆಂಕಿ
(ತಿಳಿಯದು ಅಳಿದವರ ಅಂಕಿ);
ಎಲ್ಲಿದೆ ಬೆಳಕು ?
ಎಲ್ಲೆಡೆ ಸಾವಿನ ಬೆಳೆ;
ಪ್ರೇತ ಕಳೆ;
ಕಳೇ ಬರಗಳ ಸುಗ್ಗಿ !
ಶಿವನಿಲ್ಲದೆ, ಅಟ್ಟಹಾಸ ಗೈಯುತ್ತಿವೆ
ಭೂತಗಳ ಹಿಗ್ಗಿ !

ಸಿ.ಪಿ.ಕೆ.
ಮೈಸೂರು-೧೨





**ಹಿತ-ಅಹಿತ** ಬಿಡುಗಡೆ: ನವಕರ್ನಾಟಕ ಪ್ರಕಟಿಸಿರುವ ಡಾ॥ ಸಿ. ಆರ್. ಚಂದ್ರಶೇಖರ್ ಅವರ ನೂರನೇ ಕೃತಿ 'ಹಿತ-ಅಹಿತ' ಮತ್ತು ಅವರ ಕೃತಿಗಳ ಸಂಕ್ಷಿಪ್ತ ಮಾಹಿತಿ ನೀಡುವ 'ಕೃತಿ ಪರಿಚಯ' ಫೆಬ್ರವರಿ ೨೧ರಂದು ಬಿಡುಗಡೆಯಾದವು. ಅದೇ ಸಂದರ್ಭದಲ್ಲಿ ಲೇಖಕರನ್ನು ಸನ್ಮಾನಿಸಲಾಯಿತು. ಪ್ರೊ. ಜಿ. ಟಿ. ನಾರಾಯಣರಾವ್ ಕೃತಿ ಬಿಡುಗಡೆ ಮಾಡಿದರು. ಡಾ॥ ಎಸ್. ಚಂದ್ರಶೇಖರ ಶೆಟ್ಟಿ, ಡಾ॥ ಎ. ಚಂದ್ರಮುಖಿ ರೆಡ್ಡಿ, ಡಾ॥ ಸ. ಜ. ನಾಗಲೋಟಿಮಠ, ಲೇಖಕರ ಶ್ರೀಮತಿ ಮತ್ತು ತಂದೆ ತಾಯಿಗಳಲ್ಲದೆ ವೈದ್ಯಕೀಯ ಕ್ಷೇತ್ರದ ಹಲವು ಖ್ಯಾತರು, ಲೇಖಕರು, ಅಭಿಮಾನಿಗಳು, ಓದುಗರು ಸಮಾರಂಭದಲ್ಲಿ ಭಾಗವಹಿಸಿದ್ದರು.



ದು. ನಿಂ. ಬೆಳಗಲಿ ಅನುವಾದಿಸಿ ನವಕರ್ನಾಟಕ ಪ್ರಕಟಿಸಿದ ಶ್ರೀ ಬೀಷ್ಮ ಸಾಹನಿಯವರ ಕಾದಂಬರಿ 'ಮಯ್ಯಾದಾಸನ ವಾಡೆ'ಯನ್ನು ದಿ. ೨೦-೧-೨೦೦೨ರಂದು ಬನಹಟ್ಟಿಯಲ್ಲಿ ದು. ನಿಂ. ಬೆಳಗಲಿ ಸಾಹಿತ್ಯ ಪ್ರತಿಷ್ಠಾನವು ಏರ್ಪಡಿಸಿದ್ದ ಸಮಾರಂಭದಲ್ಲಿ ಕವಿ ಶ್ರೀ ಚನ್ನವೀರ ಕಣವಿ ಅವರು ಬಿಡುಗಡೆ ಮಾಡಿದರು. ಡಾ. ಗುರುಲಿಂಗ ಕಾಪಸೆ, ಶ್ರೀ ಬಾಳಸಾಹೇಬ ಲೋಕಾಪುರ, ಶ್ರೀ ಬಿ. ಎಲ್. ಪಾಟೀಲ, ಶ್ರೀ ಬ. ಗಿ. ಯಲ್ಲಟ್ಟಿ ಅವರು ಉಪಸ್ಥಿತರಿದ್ದರು. ಶ್ರೀ ಬಾಳಾಸಾಹೇಬ ಲೋಕಾಪುರ ಈ ಕಾದಂಬರಿಯ ಕುರಿತು ಮಾತನಾಡಿದರು.



**ರಾಷ್ಟ್ರೀಯ ಪುರಸ್ಕಾರ** : ವಿಜ್ಞಾನವನ್ನು ಜನಪ್ರಿಯಗೊಳಿಸುವ ಕಾರ್ಯಕ್ಕೆ ಭಾರತ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯವು ನೀಡುವ 'ರಾಷ್ಟ್ರೀಯ ಪುರಸ್ಕಾರ'ವನ್ನು ಡಾ॥ ಸಿ. ಆರ್. ಚಂದ್ರಶೇಖರ್ ಅವರು ನವದೆಹಲಿಯಲ್ಲಿ ಕೇಂದ್ರ ಸಚಿವ ಶ್ರೀ ಮುರಳಿ ಮನೋಹರ ಜೋಶಿಯವರಿಂದ ೨೭-೦೨-೨೦೦೨ರಂದು ಪಡೆದರು.

'ಹೊಸತು' ಸಮಾಲೋಚಕ ಬಳಗದ ಸದಸ್ಯರಾದ ಶ್ರೀಯುತರಿಗೆ ಅಭಿನಂದನೆಗಳು.





'ಹೊಸತು'ಗಾಗಿ ಹೊಸ ಎಚ್‌ಎಂಟಿ ಮುದ್ರಣ ಯಂತ್ರ ಖರೀದಿಸಲಾಗಿದ್ದು ಮಾರ್ಚ್ ೯ರಂದು ಇದರ ಉದ್ಘಾಟನೆಯಾಯಿತು. 'ಹೊಸತು' ಬಳಗದ ಹಲವರು ಭಾಗವಹಿಸಿದ್ದರು. ಅದೇ ಸಂದರ್ಭದಲ್ಲಿ 'ಹೊಸತು' ಸಂಪಾದಕ ಬಳಗದ ತಿಂಗಳ ಸಭೆ ಜರುಗಿತು.

# ಮಾಸ್ತಿಯಾದ ಮಹಾಸತಿ ದೇಕಬ್ಬೆ

ಇತ್ತೀಚಿನ ದಿನಗಳಲ್ಲಿ ಪ್ರಾಚೀನವಾದ ಎಷ್ಟೋ ಆಚರಣೆಗಳು ಅರ್ಥ ಕಳೆದುಕೊಳ್ಳುತ್ತಿವೆ. ಇದು ಅನಿವಾರ್ಯವಷ್ಟೇ ಅಲ್ಲದೆ ಅಗತ್ಯವೂ ಹೌದು ಎಂಬ ಬಗ್ಗೆ ಎರಡು ಮಾತಿಲ್ಲ. ಹಿಂದಿನ ಕಾಲದ ಎಲ್ಲಾ ಆಚರಣೆಗಳು ಅರ್ಥಪೂರ್ಣ ಎಂದೇನೂ ಭಾವಿಸಬೇಕಿಲ್ಲ. ಆ ಕಾಲಕ್ಕೆ ಕೆಲವು ಆಚರಣೆಗಳು ಮಹತ್ವ ಪಡೆದಿದ್ದವು ಅಥವಾ ಅರ್ಥ ಪಡೆದಿದ್ದವು. ಈ ಅಭಿಪ್ರಾಯವೂ ಸಹ ಸರ್ವಸಮ್ಮತವಲ್ಲ. ಯಾವುದೇ ಕಾಲದ ಯಾವುದೇ ಆಚರಣೆಯು ಸಮಾಜದ ಎಲ್ಲರ ಅನುಮತಿ ಪಡೆದಿರುವುದಿಲ್ಲ ಮತ್ತು ಅದು ಎಲ್ಲರಿಗೂ ಪ್ರಿಯವಾಗಿರಬೇಕು ಎಂದು ನಿರೀಕ್ಷಿಸುವುದೂ ಸರಿಯಲ್ಲ.

ಭಾರತದಲ್ಲಿ ಸ್ತ್ರೀಯರಿಗೆ ಗೌರವ ಹೆಚ್ಚು. ಅವಳನ್ನು ದೇವತೆಗೆ ಸಮೀಕರಿಸುವುದು ಮೊದಲಿನಿಂದ ಬಂದ ಪದ್ಧತಿ. ಭಾರತೀಯ ಸಮಾಜದಲ್ಲಿ ಮಾತೃದೇವತೆಗೆ ಮಹತ್ವದ ಸ್ಥಾನವಿದೆ. ''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ'' ಎಂಬ ಪ್ರಸಿದ್ಧ ಹೇಳಿಕೆ ಇದೆ. **ಇಂತಹ ಹೇಳಿಕೆಗಳನ್ನು ಗುಮಾನಿಯಿಂದ ನೋಡುವ ಸ್ವಾತಂತ್ರ್ಯವೂ ನಮಗಿದೆ.** ಹೆಣ್ಣನ್ನು ಕೇವಲ ಕಾಮುಕ ದೃಷ್ಟಿಯಿಂದ ನೋಡದೆ ಗೌರವದಿಂದ ಕಂಡ ಉದಾಹರಣೆಗಳೂ ಇವೆ. ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನು ಶುಚಿತ್ವಕ್ಕೆ ಹೆಸರಾದವನು. ಮಧ್ಯಪ್ರದೇಶದ ಜುರ ಎಂಬ ಸಣ್ಣ ಹಳ್ಳಿಯಲ್ಲಿ ದೊರೆತಿರುವ ಒಂದು ಕನ್ನಡ ಶಾಸನವು ಅವನನ್ನು ''ಪರಾಂಗನಾ ಪುತ್ರಕ'' ಎಂದು ಹೊಗಳಿದೆ. ಅಲ್ಲದೆ ಪರಸ್ತ್ರೀಯರನ್ನು ನೋಡಿದಾಗ ಅವನಿಗೆ ''ಬಸಿರೊಳಗಿಳ್ದ ಆಡಿದ'' ನೆನಪಾಗುತ್ತಿತ್ತಂತೆ. ಹೀಗೆ ಹೆಣ್ಣುಗಳನ್ನು ಗೌರವದಿಂದ ಕಂಡ ಸಮಾಜವೇ, ಅವರನ್ನು ತೊತ್ತಿನ ಸೂಳೆಯರನ್ನಾಗಿಯೂ ಮಾಡಿದೆ. ಸಾಮಾನ್ಯವಾಗಿ ಹೆಣ್ಣು ಎಂದ ತಕ್ಷಣ ಆಕೆಯನ್ನು ಭೋಗದ ವಸ್ತುವಾಗಿ ಕಲ್ಪಿಸಿಕೊಳ್ಳುವ ಕ್ಷುಲ್ಲಕ ಮನೋಭಾವ ಕೆಲವು ಜನರಿಗಾದರೂ ಇದೆ. ಆದರೆ ಅವಳನ್ನು ತಾಯಿ, ಅಕ್ಕ ಮತ್ತು ತಂಗಿಯಾಗಿಯೂ ಪ್ರೀತಿ ಮತ್ತು ಗೌರವದಿಂದ ಕಂಡು ರಕ್ಷಿಸುವ ಮನೋಭಾವವೂ ಅನೇಕರಿಗೆ ಇದೆ ಎನ್ನುವುದನ್ನು ಅಲ್ಲಗಳೆಯಲು ಆಗುವುದಿಲ್ಲ.

ಹೆಣ್ಣಿಗೆ ಶೀಲವು ಬಹಳ ಮುಖ್ಯ ಮತ್ತು ಪವಿತ್ರ ಎಂದು ತಿಳಿಯಲಾಗಿದೆ. ಈ ಬಗ್ಗೆ ಯಾವುದೇ ಪ್ರತ್ಯೇಕ ವ್ಯಾಖ್ಯಾನವು ಅವಶ್ಯಕವಿಲ್ಲ ಎಂದು ಭಾವಿಸಲಾಗಿದೆ. ಹೆಣ್ಣು ತನ್ನ ಶೀಲವನ್ನು ರಕ್ಷಿಸಿಕೊಳ್ಳಲು ಆದ್ಯತೆ ನೀಡುತ್ತಾಳೆ ಮತ್ತು ಆ ನಿಟ್ಟಿನಲ್ಲಿ ಪುರುಷನ ನೆರವೂ ಇರುತ್ತದೆ. ಸ್ತ್ರೀಯರ ಮಾನರಕ್ಷಣೆಯಲ್ಲಿ ಪುರುಷ ವಹಿಸಿರುವ ಪಾತ್ರವನ್ನು ಕುರಿತಂತೆ ''ಪೆಣ್ಬುಯ್ಯಲ್'' ಪ್ರಸಂಗಗಳು ದಾಖಲಿಸಿವೆ.

ಹೆಣ್ಣು ತನ್ನ ಶೀಲರಕ್ಷಣೆಯ ವಿಚಾರದಲ್ಲಿ ಅನುಸರಿಸಿದ ಒಂದು ಮುಂಜಾಗರೂಕತಾ ಕ್ರಮವೇ ಸತಿ ಹೋಗುವುದು. ತನ್ನ ಪತಿಯ ಸಾವಿನೊಡನೆ ತನ್ನ ಸಾವನ್ನೂ ಕಂಡುಕೊಳ್ಳುವ ಪದ್ಧತಿಯು ಯಾವುದೇ ನಾಗರಿಕ ಸಮಾಜಕ್ಕೂ ಗೌರವ ತರುವಂತಹುದಲ್ಲ ಎಂಬುದನ್ನು ವಿಚಾರವಂತರಾದ ಎಲ್ಲರೂ ಒಪ್ಪುತ್ತಾರೆ. ವಿಧವೆಯಾದ, ಬದುಕನ್ನು ಇನ್ನೂ ಸರಿಯಾಗಿ ತಿಳಿಯದ, ಹೆಣ್ಣನ್ನು ವಿರೂಪಗೊಳಿಸುವ ಕ್ರೌರ್ಯವನ್ನು ಯಾವುದೇ ಉದಾತ್ತ ನಾಗರಿಕ ಸಮಾಜವು ಸಮರ್ಥಿಸಲು ಸಾಧ್ಯವಿಲ್ಲ. ಆದರೆ ಇದು ನಮ್ಮ ಸಮಾಜದಲ್ಲಿ ಬಹುದೀರ್ಘಕಾಲ ಇದ್ದ ಒಂದು ದುಷ್ಟ



*ಯುದ್ಧಮರಣ ಹೊಂದಿದ ಪತಿಯೊಂದಿಗೆ ನಿಂತ ಮಾಸ್ತಿ (ಕಿತ್ತೂರ ಮ್ಯೂಜಿಯಂ)*

ಸಂಪ್ರದಾಯ ಎನ್ನುವ ಅಭಿಪ್ರಾಯಕ್ಕೆ ಹೆಚ್ಚು ವಿರೋಧ ಇರಲಾರದು. ಗಂಡನ ಸಾವಿನ ನಂತರ ಹೆಣ್ಣಾದವಳು ಜೀವನದಲ್ಲಿ ಎದುರಿಸಬೇಕಾದ ಅನೇಕ ತೊಂದರೆಗಳಿಂದ ಬಿಡುಗಡೆ ಪಡೆಯಲು ಹಾಗೂ ಶೀಲರಕ್ಷಣೆ ಮಾಡಿಕೊಳ್ಳಲು ಸತಿ ಹೋಗಲು ನಿರ್ಧರಿಸುತ್ತಿದ್ದಂತೆ ತೋರುತ್ತದೆ. ಸತಿ ಹೋಗುವುದು ಎಂದರೆ ಸತಿಯಾದವಳು ಗಂಡನ ಸಾವಿನ ನಂತರ ಅವನ ಜೊತೆಗೆ (ಸಹಗಮನ) ಅಥವಾ ಅವನನ್ನು ಅನುಸರಿಸಿ (ಅನುಗಮನ) ಸಾವಿಗೆ ಅಣಿಯಾಗುವುದು. ಇದು ಕಡ್ಡಾಯವಾಗಿರಲಿಲ್ಲ

**ಡಾ॥ ಎಚ್. ಎಸ್. ಗೋಪಾಲ ರಾವ್**

ಎನ್ನುವುದನ್ನು ಲಕ್ಕುಂಡಿಯ ಪ್ರಸಿದ್ಧ ಅತ್ತಿಮಬ್ಬೆಯ ಶಾಸನ ಖಚಿತಪಡಿಸಿದೆ. ಅತ್ತಿಮಬ್ಬೆಯ ಗಂಡ ನಾಗದೇವ ಸತ್ತಾಗ ಅವನ ಕಿರಿಯ ಹೆಂಡತಿ, ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆ ಮಾತ್ರ ಸತಿಹೋದಳು. ಮಗನಾದ ಅಣ್ಣಿಗದೇವನ ರಕ್ಷಣೆಗೆ ಅತ್ತಿಮಬ್ಬೆ ಉಳಿದಳು. ಚಿಕ್ಕ ವಯಸ್ಸಿನ ಹೆಣ್ಣು ಸತಿ ಹೋಗುವುದನ್ನು ತಪ್ಪಿಸಲು ಕುಟುಂಬದ ಮತ್ತು ಊರಿನ ಹಿರಿಯರು ಪ್ರಯತ್ನಿಸುತ್ತಿದ್ದ ಹಲವು ಉದಾಹರಣೆಗಳಿವೆ. ಆದರೆ ತಮ್ಮ ಗಂಡ ಸತ್ತಾಗ, ಸಾವಿನಲ್ಲೂ ಅವನನ್ನು ಹಿಂಬಾಲಿಸಲು ಭಾರತೀಯ ನಾರಿಯರು ಇಚ್ಛಿಸುತ್ತಿದ್ದರು ಎಂದು ತಿಳಿಯಲಾಗಿದೆ. ಇಂತಹ ಒಂದು ಉದಾಹರಣೆಯನ್ನು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ. ಬೆಳತೂರು ಗ್ರಾಮದ ಒಂದು ಶಾಸನವು ದಾಖಲಿಸಿದೆ. ಇಂತಹ ಸತಿ ಪದ್ಧತಿಗೆ ೧. ಸತ್ತವನ ಶವದ ಜೊತೆಗೆ ಅವನಿಗೆ ಪ್ರಿಯವಾದ ವಸ್ತುಗಳನ್ನು ಇಡುವುದು ೨. ಮುಂದಿನ ಜನ್ಮದಲ್ಲಿಯೂ ಗಂಡ-ಹೆಂಡಿರಾಗಿಯೇ ಇರುವುದು ೩. ಮರಣಾನಂತರ ಹೆಂಡತಿ ಬೇರೆಯವರ ಪಾಲಾಗದಿರುವುದು ಇತ್ಯಾದಿ ಕಾರಣಗಳು ಪ್ರೇರಣೆ ಎಂದು ತಿಳಿಯಲಾಗಿದೆ. ಇಂತಹ ಪದ್ಧತಿಯು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿತ್ತು ಎಂದೇನೂ ಭಾವಿಸಬೇಕಾಗಿಲ್ಲ. ಭಾರತದಲ್ಲಿ ರಾಮಾಯಣ ಮತ್ತು ಮಹಾಭಾರತದ ಕಾಲದಲ್ಲೇ ಸತಿಪದ್ಧತಿ ಇತ್ತು ಎನ್ನುವುದು ತಿಳಿದಿದೆ. ಪಾಂಡುವಿನ ಹೆಂಡತಿ ಮಾದ್ರಿ ಮತ್ತು ಕೃಷ್ಣನ ಹೆಂಡತಿಯರಲ್ಲಿ ಕೆಲವರು ತಮ್ಮ ಗಂಡಂದಿರ ಮರಣಾನಂತರ ಅಗ್ನಿಪ್ರವೇಶ ಮಾಡಿದರಂತೆ. ಉತ್ತರ ಭಾರತದಲ್ಲಿ ದಕ್ಷಿಣ ಭಾರತಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಸತಿಪದ್ಧತಿ ಇತ್ತು ಎನ್ನುವುದು ತಿಳಿದಿದೆ. ಕ್ರಿ.ಶ. ೧೦ನೆಯ ಶತಮಾನದ ವೇಳೆಗೆ ಕರ್ನಾಟಕದಲ್ಲಿ ಸತಿಪದ್ಧತಿ ಇದ್ದ ಸುಳಿವುಗಳು ದೊರೆತಿವೆ. ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಬೆನ್ನೂರಿನ ಒಂದು ಶಾಸನದ ಕಾಲ ಕ್ರಿ.ಶ. ೯೭೨. ಸದ್ಯಕ್ಕೆ ದೊರೆತಿರುವ ಸತಿಪದ್ಧತಿಯನ್ನು ಕುರಿತ ಮೊದಲ ಶಾಸನ ಇದು. ಬಿದಿಯಣ್ಣ ಸತ್ತಾಗ ಅವನ ಹೆಂಡತಿ ಜಕ್ಕಬ್ಬೆ ಸತಿ ಹೋದದ್ದನ್ನು ಶಾಸನ ದಾಖಲಿಸಿದೆ. ಜಕ್ಕಬ್ಬೆಯದು ಸಹಗಮನ. ಗಂಡನ ಸಾವಿನ ನಂತರ ಅಥವಾ ಸಾವಿನ ಸುದ್ದಿ ತಿಳಿದ ನಂತರ ಅಣಿಯಾಗಿ ಸಾಯುವುದು ಅನುಗಮನ. ಅಂತಹ ಅನುಗಮನದ ಒಂದು ದಾಖಲೆಯೇ ಪ್ರಸ್ತುತ ಪ್ರಸ್ತಾಪಿಸುತ್ತಿರುವ ಶಾಸನ.

ಬೆಳತೂರಿನ ಬಿನಕಲಮ್ಮನ ಗುಡಿಯ ಬಳಿ ಇರುವ ಶಾಸನವು ಚೋಳ ರಾಜ ರಾಜೇಂದ್ರ ದೇವನ ಆಳ್ವಿಕೆಯ ಆರನೆಯ ವರ್ಷ ಹಾಗೂ ಶಕ ವರ್ಷ ೯೭೩ನೆಯ ಹೇಮಳಂಬಿ ಸಂವತ್ಸರದ ಕಾರ್ತೀಕ ಮಾಸದ ಕೃಷ್ಣಪಕ್ಷ ದ್ವಾದಶಿ ಸೋಮವಾರದಂದು ದಾಖಲಿತವಾಗಿದೆ. ಕ್ರಿ.ಶ. ವರ್ಷಗಳಲ್ಲಿ ಉಕ್ತ ಕಾಲವು ೨೭.೧೦.೧೦೫೭ಕ್ಕೆ ಸರಿಹೊಂದುತ್ತದೆ. ಶಾಸನವು ದೇಕಬ್ಬೆ ಎಂಬ ಹೆಣ್ಣು ಸತಿ ಹೋದ ವಿಷಯವನ್ನು ವಿವರಿಸಿದೆ. ದೇಕಬ್ಬೆಯ ಗಂಡ ಏಚ. ಏಚನು ನವಲೆ ನಾಡ ಅಧಿಪತಿ. ಕುರುವನ್ದ ಕುಲಕ್ಕೆ ಸೇರಿದವನು. ವೀರನಾದ ಏಚನು ವಿನಯ ಚಿಂತಾಮಣಿ ಎನಿಸಿಕೊಂಡ ದೇಕಬ್ಬೆಯನ್ನು ಮದುವೆ ಆಗಿದ್ದ. ದೇಕಬ್ಬೆಯು ನುಗು ನಾಡ ಅಧಿಪ ರವಿಗನ ಮಗಳು. ಈ ವಂಶದವರು ಸಕಳ ಜಗಸ್ತುತರು, ವಚೋಗ್ರಗಣ್ಯರು, ಊರ್ಜಿತ ಪುಣ್ಯರು ಮತ್ತು ವಿಸ್ತಾರ ಚಾರುವೀರರು. ಇಂತಹ ವಂಶದಲ್ಲಿ ರವಿಗ ಹುಟ್ಟಿದ್ದ. ರವಿಗನ ಹುಟ್ಟಿನೊಡನೆ

ಅರಿವು, ಅರಿವಿನೊಡನೆ ಆಯವೂ, ಆಯದೊಡನೆ ಬಾಗವೂ ಹುಟ್ಟಿದವು ಎಂದು ಶಾಸನ ಕವಿ ಹೊಗಳಿದ್ದಾನೆ. ರವಿಗ ಮತ್ತು ಪೊನ್ನಕ್ಕನ ಮಗಳು ದೇಕಬ್ಬೆ.

ಯಾವ ಕಾರಣಕ್ಕೋ ಏಚನು ತನ್ನ ದಾಯಾದಿಗಳೊಡನೆ ಹೋರಾಡಿ, ಅವರಲ್ಲೊಬ್ಬನನ್ನು ಕೊಂದನೆಂಬ ಕಾರಣದಿಂದ ಚೋಳನ ಕಡೆಯವರು ಅವನನ್ನು ಬಂಧಿಸಿ ತಲಕಾಡಿಗೆ ಕರೆದೊಯ್ದರು. ಏಚನ ಅಪರಾಧಕ್ಕೆ ಅಲ್ಲಿ ಮರಣದಂಡನೆಯನ್ನು ವಿಧಿಸಲಾಯಿತು. ಅವನ ಸಾವಿನ ಸುದ್ದಿ ತಿಳಿದ ತಕ್ಷಣ ದೇಕಬ್ಬೆಯು ಸತಿ ಹೋಗುವ ನಿರ್ಧಾರ ಮಾಡಿದಳು. ಈ ಪ್ರಸಂಗವನ್ನು ಶಾಸನ ಕವಿಯು ಒಂದೇ ಪದ್ಯದಲ್ಲಿ ವರದಿ ಮಾಡಿದ್ದಾನೆ. ''ಕಲಿಕಾಲವೇಳನೆನಿಸಿದ ಕಲಿಚಾಗಿಯನಿಱಿದು ಕೊನ್ದಱಿಂಬುದು ಮಾತಂ ಲಲಿತಾಂಗಿ ಕೇಳ್ದ ರವಿಗನ ಕುಲದೀಪಕಿ ಸಾಯಲೆನ್ದು ಕೊಣ್ಡಕೆ ನಡೆದಳ್.'' ಸಾಯುವ ನಿರ್ಧಾರ ದೇಕಬ್ಬೆಯದು. ಅದು ಬೇರೆಯವರ ಬಲವಂತದಿಂದ ತೆಗೆದುಕೊಂಡು ನಿರ್ಧಾರವಾಗಿರಲಿಲ್ಲ. ಬೇರೆಯವರು ಅವಳ ನಿರ್ಧಾರವನ್ನು ಒಪ್ಪದೇ ವಿರೋಧಿಸಿದರು. ತಂದೆ, ತಾಯಿ, ಬಂಧುಗಳೆಲ್ಲರೂ ಸಾಯುವುದು ಬೇಡ ಎಂದು ಬುದ್ಧಿ ಹೇಳಿದರು. ಆದರೆ ದೇಕಬ್ಬೆಯ ನಿರ್ಧಾರವು ಅಚಲವಾಗಿತ್ತು. ''ಸುಗುನಾಡಧಿಪತಿ ರವಿಗನ ಮಗಳಾಗಿಯುಮನ್ತೆ ನವಿಲೆನಾಡಧಿಪತಿಗಾಂ ನೆಗಳೆ ಸತಿಯಾಗಿ ಬಾಳ್ವುದು ಬಗೆದರ್ಪ್ಪೆನೆ ಕೊಟ್ಟ ಕೊಣ್ಡ ಮನೆಯೆಸಮೆಱಿಯಲ್'' ಎಂದು ಎಲ್ಲರ ಮಾತನ್ನು ನಯದಿಂದ ತಳ್ಳಿ ಹಾಕಿ, ಭೂಮಿ, ಹೊನ್ನ ಉಡುಗೆ, ಗೋವು, ಧನ ಇತ್ಯಾದಿಗಳನ್ನು ದಾನ ಮಾಡುತ್ತಾ ದೇಕಬ್ಬೆ ಕೈಮುಗಿದು ಉರಿಯುತ್ತಿದ್ದ ಬೆಂಕಿಯನ್ನು ಪ್ರವೇಶಿಸಿದಳು.




ಹೀಗೆ ಸತಿಹೋದ ''ಶ್ರೀರಮಣಿಗೌರಿ ಸಚಿಧಾರಿಣಿಯಪುತ್ರಿ ರತಿ ಭೂರಮಣಿಯನ್ನದ ಸರೂಪವಾಱಿ ಪೊಳ್ದಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತೆ ಧೃತಶಕ್ತೆ'' ದೇಕಬ್ಬೆಯು ಸತಿಹೋದಳು. ಇಂತಹ ನಾರೀರತ್ನಕ್ಕೆ ಸಮನಾರು ಎಂದು ಶಾಸನ ಕವಿ ಪ್ರಶ್ನಿಸಿದ್ದಾನೆ.

ಮಗಳ ನೆನಪಿಗಾಗಿ ರವಿಗನು ಮಾಸ್ತಿಕಲ್ಲನ್ನು ಹಾಕಿಸಿದ್ದಾನೆ. ಅನುಗಮನವನ್ನು ಕುರಿತ ಈ ಶಾಸನವು ದೇಕಬ್ಬೆಯ ಅಚಲ ನಿರ್ಧಾರವನ್ನು ತಿಳಿಸುತ್ತದೆ; ಜೊತೆಗೆ ಆ ಕಾಲಕ್ಕೆ ಸತಿಹೋಗುವ ಪದ್ಧತಿಯು ಕಡ್ಡಾಯವೇನೂ ಆಗಿರಲಿಲ್ಲ ಎಂದು ಖಚಿತಪಡಿಸುತ್ತದೆ. ಸತಿ ಹೋಗುವುದು ಐಚ್ಛಿಕ ವಿಷಯವಾಗಿತ್ತು. ಸತಿ ಹೋಗುವುದನ್ನು ತಡೆಯುವ ಪ್ರಯತ್ನಗಳೂ ನಡೆಯುತ್ತಿದ್ದುದನ್ನು ಶಾಸನವು ಸ್ಪಷ್ಟಪಡಿಸಿದೆ.

ಕರ್ನಾಟಕದಲ್ಲಿ ಮಾಸ್ತಿ ಕಲ್ಲುಗಳು ವಿರಳವಲ್ಲ. ಒಕ್ಕೈಮಾಸ್ತಿ ಕಲ್ಲುಗಳಾಗಲೀ, ಸತಿಯ ಶಿಲ್ಪಸಹಿತ ಮಾಸ್ತಿಕಲ್ಲುಗಳಾಗಲೀ, ಶಾಸನ ಸಹಿತ ಮಾಸ್ತಿಕಲ್ಲುಗಳಾಗಲಿ, ಶಾಸನರಹಿತ ಮಾಸ್ತಿಕಲ್ಲುಗಳಾಗಲೀ ನಾಡಿನ ಸಾಂಸ್ಕೃತಿಕ ಬದುಕಿನ ಅಧ್ಯಯನಕ್ಕೆ ಸಹಾಯ ಮಾಡುತ್ತವೆ.

ಡಾ|| ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾ||, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨೧೨೩



# ಕಾಡುವ 'ಗುಣಮುಖ'

**ಮೊ**ನ್ನೆ ಶಿವಮೊಗ್ಗೆಯಲ್ಲಿ ಲಂಕೇಶರ 'ಗುಣಮುಖ' ನಾಟಕದ ಪ್ರದರ್ಶನವಿತ್ತು. ತಿಪಟೂರಿನ ಪ್ರೊಥಿಯು (ಪ್ರೊಫೆಶನಲ್ ಥಿಯೇಟರ್ ಯುನಿಟ್) ನ ನಟರಾಜ್ ಹೊನ್ನೆನಳ್ಳಿ ನಿರ್ದೇಶನದಲ್ಲಿ ನೋಡುಗರಿಗೆ ಮೋಡಿ ಹಾಕಿದ ಈ ಪ್ರಯತ್ನದ ಬಗ್ಗೆ ಎರಡು ಮಾತು.

೧

ಇದು ಲಂಕೇಶರ ಕೊನೆಯ ನಾಟಕ. 'ನವ್ಯ' ಮನೋಧರ್ಮದ ಎಲ್ಲ ಸೆಳಕುಗಳನ್ನು ದಾಟಿ 'ಸಮಾಜವಾದಿ' ನೋಟ ಮತ್ತು ನೆಲೆಗೆ ಬದ್ಧವಾಗಿ, ಗಾಂಧಿ, ಬಸವ, ಬುದ್ಧರ ಚಿಂತನೆಗಳಿಂದ ಗಟ್ಟಿಗೊಂಡು ಸಮಾಧಾನ ಚಿತ್ತರಾಗುತ್ತಿದ್ದ ತಿರುವಿನ ಹಂತದಲ್ಲಿ ಲಂಕೇಶ ರಚಿಸಿದ್ದು ಈ ನಾಟಕ. ಹಾಗಾಗಿಯೇ ಇದು ಅವರ ಉಳಿದ ನಾಟಕಗಳಿಗಿಂತ ಹೆಸರು, ವಸ್ತು, ಒಳತೋಟಿ, ಪರಿಣಾಮ ಹಾಗೂ ಭಾಷೆಯ ನೆಯ್ಗೆಯಲ್ಲಿ ಭಿನ್ನವಾಗಿದೆ. ಇದರ ವಸ್ತು ಐತಿಹಾಸಿಕ ಆದರೆ ಕಾಣ್ಕೆ ಸಾಮಾಜಿಕ, ಸಮಕಾಲೀನ ಮತ್ತು ಸಾರ್ವಕಾಲಿಕ. ಇಲ್ಲಿ ನಾಯಕ 'ನಾದಿರ್'ನ ಕಾಯಿಲೆ ಗುಣಮುಖವಾಗುವುದು ಕುತೂಹಲ, ಆಶ್ಚರ್ಯ, ಸಮಾಧಾನ ತರುತ್ತದೆ. ಅವನ ಕಾಯಿಲೆಯ ಮೂಲ ಸ್ಪಷ್ಟವಾದಂತೆ, ನಾಟಕ ತನಗರಿವಿಲ್ಲದಂತೆ ಮತ್ತು ನೋಡುಗನಿಗೆ ತಟ್ಟನೆ ಅರಿವಾಗದಂತೆ ನೀಡುವ ಸಂದೇಶ ಅಥವಾ ವ್ಯಕ್ತಿತ್ವದಲ್ಲಿ ತರಬಹುದಾದ ಬದಲಾವಣೆ ಗಮನ ಸೆಳೆಯುತ್ತದೆ. ಅಧಿಕಾರ ಎಲ್ಲ ರೋಗಗಳ ಮೂಲ; ಮಾನವೀಯತೆ ಕಾಯಿಲೆಗೆ ಪರಿಹಾರ ಎಂಬ ಸರಳ ತಿಳುವಳಿಕೆ ಮಾರ್ಮಿಕವಾಗಿ, ಸಾಂಕೇತಿಕವಾಗಿ ಮತ್ತು ಅರ್ಥಪೂರ್ಣವಾಗಿ ಬಿಂಬಿತವಾಗುತ್ತದೆ. 'ನಾದಿರ್'ನ ಅಧಿಕಾರಲಾಲಸೆ, ಅವನ ದಿವಾನರ ಲಂಚಗುಳಿತನ, ಧರ್ಮಬಾಹಿರ ನಡವಳಿಕೆ, ದೇಸೀ ಒಡೆಯರ ಲಾಲಸೆ, ನಾಯಿಪಾಡುಗಳು ತಟ್ಟನೆ ಕಾಡಲು ಸುರು ಮಾಡುತ್ತವೆ. ಕೊನೆಗೆ 'ನಾದಿರ್' ಪ್ರಬುದ್ಧನಾಗುತ್ತಾನೆ. ತನ್ನ ಕಾಯಿಲೆಯ ಮೂಲ, ನೆಲೆ, ಪ್ರಭಾವ, ಪರಿಣಾಮಗಳನ್ನು ಅರಿಯತೊಡಗುತ್ತಾನೆ. ಮಗುವಾಗತೊಡಗಿದೊಡನೆ ಅವನು ಹಕ್ಕಿಯಾದಂತೆ ಸಂಭ್ರಮಿಸುತ್ತಾನೆ. ಅಲಾವಿಖಾನ್‌ನಂತ ವೈದ್ಯರು ಇಲ್ಲವಾಗುತ್ತಿರುವ ಬಗ್ಗೆ ಖೇದ ಉಂಟಾಗುತ್ತದೆ. ಈ ಸಮಾಜ ಚಲಿಸುತ್ತಿರುವ ನೆಲೆಗೆ ವಿರುದ್ಧವಾದ ಆದರೆ ಬದುಕಿಗೆ ಹತ್ತಿರವಾದ ಮತ್ತು ಬದ್ಧವಾದ ಜೀವನವಿಧಾನವನ್ನು ನಾಟಕ ನೋಡುಗನ ಮುಂದಿಡುತ್ತದೆ. ಲಂಕೇಶರ ಅರಿವಿನ ಪ್ರಬುದ್ಧತೆ ಇಂತಹ ಬದಲಾವಣೆಗೆ ಹಪಹಪಿಸಿ, ಅಭಿವ್ಯಕ್ತಗೊಂಡಿರುವುದು ಕುತೂಹಲ, ಸಂತೋಷಗಳಿಗೆ ಎಡೆನೀಡುತ್ತದೆ.

೨

ಈ ನಾಟಕದ ಪ್ರದರ್ಶನದಲ್ಲಿ ನಿರ್ದೇಶಕರು ಮಾಡಿಕೊಂಡಿರುವ ಬದಲಾವಣೆಗಳು ಅಥವಾ ರಂಗತಂತ್ರಗಳ ಬಗ್ಗೆ ಎರಡು ಮಾತು. ಸಾಹಿತ್ಯ ಕೃತಿಯಾಗಿ ನಾಟಕವೊಂದು ಕಾಣುವ ರೀತಿಯೇ ಬೇರೆ. ಓದುವಾಗ ಇಲ್ಲವೇ ನಾಟಕವನ್ನು ಪಠ್ಯವಾಗಿ ಬೋಧಿಸುವಾಗ; ಅದು ಯಾವ ಪ್ರಕಾರಕ್ಕೆ ಸೇರಿದ ನಾಟಕವೇ ಆಗಿರಲಿ ಪರಿಣಾಮದಲ್ಲಿ ಏರಿಗಿಂತಲೂ 'ಪೇರು' ಜಾಸ್ತಿ. ಆದರೆ ಅದೇ ನಾಟಕ ರಂಗದ ಮೇಲೆ ನೀಡುವ, ಬೀರುವ ಪರಿಣಾಮ ಪ್ರಭಾವಗಳು - ಗರಿಷ್ಠ ಮಟ್ಟದಲ್ಲಿದ್ದು - ಸಾಹಿತ್ಯ ಕೃತಿಯೊಂದು ನೀಡಬಲ್ಲ ಪರಿಮಾಣದಷ್ಟೇ; ಅದಕ್ಕಿಂತಲೂ ಹೆಚ್ಚಿನ ಧನಾತ್ಮಕ ರೂಪದಲ್ಲಿರುತ್ತದೆ.

ಈ ನಾಟಕವನ್ನು ಪ್ರದರ್ಶಿಸಲು ನಿರ್ದೇಶಕರು ಮಾಡಿಕೊಂಡಿರುವ ಬದಲಾವಣೆಗಳು ಹೀಗಿವೆ. ೧) ಕೆಲವು ಅಂಕಗಳನ್ನು ಬಿಟ್ಟಿರುವುದು ೨) ಕೆಲವು ಸಂಭಾಷಣೆಗಳನ್ನು ಕೈಬಿಟ್ಟಿರುವುದು ೩)ಹಾಗೆಯೇ ಕೆಲವು ಮಾತುಗಳನ್ನು ಮೊಟಕುಗೊಳಿಸಿರುವುದು ೪) ಅತ್ಯಂತ ಮುಖ್ಯವಾದ ಪ್ರಯೋಗವೆಂದರೆ ಕೇವಲ ಐವರು ನಟರಿಂದ ಮುಖ್ಯಪಾತ್ರಗಳನ್ನು ಬಿಂಬಿಸಿರುವುದು. ೫) ವೇದಿಕೆಯ ಮೇಲೆಯೇ ರಂಗ ಸಜ್ಜುಗೊಳಿಸುವುದು (ನಾಟಕದ ನಡುನಡುವೆ). ೬) ಸರಳ, ಸಾಂಕೇತಿಕ ವೇಷಭೂಷಣ (ಸೆಂಟ್ ಪ್ರಯೋಗ ಆಕರ್ಷಕವೂ, ಹಾಸ್ಯಭರಿತವೂ, ಅರ್ಥಪೂರ್ಣವೂ ಆಗಿ ಬಳಕೆಯಾಗಿದೆ) ೭) ಸ್ತ್ರೀ ಪಾತ್ರವೇ ಇಲ್ಲದಿರುವುದು !?

ಹಲವಾರು ಪಾತ್ರಗಳು ನಾಟಕದ ವೈಶಿಷ್ಟ್ಯ ಮತ್ತು ಸಾಮಾನ್ಯ ಲಕ್ಷಣ. ಆದರೆ ನಿರ್ದೇಶಕ ಕೆಲವೇ ಪಾತ್ರಧಾರಿಗಳ ಮೂಲಕ ಹಲವಾರು ಪಾತ್ರಗಳನ್ನು ಮೂಡಿಸಿದಾಗ ಒಬ್ಬ ನಟ ಕೆಲವೇ ಕ್ಷಣದಲ್ಲಿ ನೀಡಬಹುದಾದ ಭಿನ್ನ ಅಭಿನಯದ ಅವಕಾಶ, ಸಾಮರ್ಥ್ಯಗಳ ಗಣನೆಯನ್ನು ಬಿಟ್ಟರೆ ನೋಡುಗನಿಗೆ ಇದರಿಂದ ಲಾಭವೇನೂ ಇಲ್ಲ. ಹಾಗಾದ ಮೇಲೆ ಇದು ನಿರ್ದೇಶಕನಿಗೆ ಅನುಕೂಲವಾದ ಮಾರ್ಪಾಟು ಎಂದುಕೊಳ್ಳಬೇಕಾಗುತ್ತದೆ. ದೇಶೀ ಪ್ರಭುವೊಬ್ಬನ ಪಾತ್ರ ನಿರ್ವಹಿಸಿ ಅಪಹಾಸ್ಯಕ್ಕೆ ಗುರಿಯಾಗಿ, ಅವಹೇಳನಕ್ಕೆ ತುತ್ತಾದ ನಟನೊಬ್ಬ ನಂತರ ಅಲಾವಿಖಾನ್ ಪಾತ್ರ ಮಾಡಿ 'ಸೈ' ಎನಿಸಿಕೊಳ್ಳುತ್ತಾನೆ. ಆದರೆ ಇದು 'ಅಭಿನಯ' ವಿಭಾಗಕ್ಕೆ ಸಂದ ಹೊಗಳಿಕೆ ಮಾತ್ರವೇ ವಿನಃ ವಸ್ತು, ಅದರ ಪರಿಣಾಮ; ಅದರ ನಿರ್ವಹಣೆಗೆ ಸಂದಂತಲ್ಲ. ಮತ್ತೊಂದು ಮುಖ್ಯ ಸಂಗತಿಯೆಂದರೆ ನೋಡುಗನಿಗೆ ಕಾಣುವಂತೆಯೇ ರಂಗಸಜ್ಜಿಕೆಯನ್ನು ಅದೇ ನಟರು ಸಿದ್ಧಮಾಡುವುದು; ಪ್ರತೀ ಸನ್ನಿವೇಶದ ನಂತರ. ಇದು ಕೂಡ ಕೇವಲ ಪ್ರಯತ್ನವೆನಿಸುತ್ತದೆ. ಹಾಗಾಗಿ ನಾಟಕದ ಮೌಲ್ಯ, ಪರಿಣಾಮ, ಪ್ರಭಾವಕ್ಕೆ ಯಾವ ಆಯಾಮವೂ ಇದರಿಂದ ದಕ್ಕದು ಎನಿಸುತ್ತದೆ.

ಇಷ್ಟರ ಹೊರತಾಗಿಯೂ ಈ ನಾಟಕವನ್ನು ರಂಗಕ್ಕೆ ತಂದ ಪ್ರಯತ್ನ ಗಮನಾರ್ಹ; ಮುಖ್ಯ ಚಿಂತನಶೀಲ ವಸ್ತುವಿನ ಆಯ್ಕೆ ಮತ್ತು ನಿರ್ವಹಣೆಯೇ ಇಲ್ಲವಾಗುತ್ತಿರುವ ಈ ದಿನಗಳಲ್ಲಿ ಲಂಕೇಶರಂಥ ಸಮಾಜಮುಖಿ, ಬಹುಮುಖಿ ಲೇಖಕರ ಸಾಹಿತ್ಯವನ್ನು ಜನರಿಗೆ ತಲುಪಿಸುವ ಈ ಪ್ರಯತ್ನ ಹೊಗಳಿಕೆಗೆ ಮೀರಿದ್ದು. ಮಾಡಬೇಕಾದ ಪ್ರಯತ್ನವಿದು. ಈ ದಿಸೆಯಲ್ಲಿ ನಟರಾಜ್ ಮತ್ತವರ ಪ್ರೊಥಿಯು ಅಭಿನಂದನಾರ್ಹ.

ತಮ್ಮ ಸಾಹಿತ್ಯ ಮತ್ತು ಪತ್ರಿಕೆಯ ಉತ್ತುಂಗದಲ್ಲಿ ನವ್ಯದ ಮುಖ್ಯ ಹಾಗೂ ಮಾರ್ಗದರ್ಶಿ ಲೇಖಕರಾಗಿದ್ದ ಲಂಕೇಶರು ೧೯೯೦ರ ನಂತರ ಹಿಡಿದ ಹಾದಿಯೇ ಬೇರೆ. ಆವರೆಗೆ ವ್ಯಕ್ತಿ ಮತ್ತು ವ್ಯಕ್ತಿತ್ವ ಮುಖ್ಯವಾಗಿದ್ದ ಅವರ ಬರವಣಿಗೆ ಬದುಕು, ಬದುಕಿನ ಮಾರ್ಗ ಮತ್ತು ಬದುಕುವ ಮಾರ್ಗದ ಶೋಧನೆಗೆ ಇಳಿದದ್ದು ಗಮನಾರ್ಹ. ಹಾಗೆಯೇ ವೈಯಕ್ತಿಕ ಏಳ್ಗೆಗಿಂತ ಸಾಮೂಹಿಕ ಮತ್ತು ಸಾಮುದಾಯಿಕ ಆರೋಗ್ಯ ಮುಖ್ಯ: ಆ ಮೂಲಕ ಸಮಾಜ ನೆಮ್ಮದಿಯಾಗಿರಬಲ್ಲದು ಎಂಬ ಚಿಂತನೆ ಅವರ ಈ ನಾಟಕ ಸೇರಿದಂತೆ ಇತ್ತೀಚಿನ ಕತೆ, ಲೇಖನಗಳಲ್ಲಿ ಕಂಡುಬರುತ್ತದೆ. ಹಾಗಾಗಿಯೇ ತಮ್ಮ ಕೊನೆ ಕೊನೆಯ ದಿನಗಳಲ್ಲಿ ಲಂಕೇಶರು ಪ್ರಪಂಚದ ಇನ್ನಿತರ ಸಾಂಸ್ಕೃತಿಕ ಮಹತ್ವದ ಲೇಖಕರಾದ ವಾಲೆ ಸೊಯಂಕ, ಚಿನುವಾ ಅಚಿಬೆ, ಅರ್ನೆಸ್ಟ್ ಹೆಮ್ಮಿಂಗ್ವೆ, ಟಾಲ್‌ಸ್ಟಾಯ್ ಮೊದಲಾದ ಮೂರನೇ ವಿಶ್ವದ (ಹಿಂದುಳಿದ ದೇಶಗಳ) ಸಾಹಿತಿಗಳಂತೆ ತಮ್ಮ ದೇಶೀ ಸಂಸ್ಕೃತಿಯನ್ನು, ಅದರ ಗಟ್ಟಿನೆಲೆಯನ್ನು, ಅದರ ವೈವಿಧ್ಯತೆ ಹಾಗೂ ಸಮಕಾಲೀನತೆಯನ್ನು, ಅದರೊಂದಿಗೆ ಬದುಕಿನ ಅದಮ್ಯ ಚೇತನವನ್ನು ತಮ್ಮ ಸಾಹಿತ್ಯದ ಮೂಲಕ ನೀಡಿದರು. ಆ ನೆಲೆಯಲ್ಲಿ 'ಗುಣಮುಖ' ನಾಟಕ ಒಂದು ಸಾಹಿತ್ಯಕೃತಿಯಾಗಿ ಹಾಗೂ ರಂಗಪ್ರದರ್ಶನವಾಗಿ ಬಹುವಾಗಿ ಕಾಡುತ್ತದೆ. ಈ ಕಾಡುವ ಗುಣ ಮನುಕುಲದ ಓಟಕ್ಕೆ ವ್ಯಂಗ್ಯವೆಂಬಂತೆ ಬಂದು ನಿಡು ಉಸಿರನ್ನೂ ಹೊರಹೊಮ್ಮಿಸುತ್ತದೆ.

*(ಚಿತ್ರ: ಶಶಿ ಸಂಪಳ್ಳಿ, ಶಿವಮೊಗ್ಗ)*

**ಡಾ|| ಎಸ್. ಪ್ರಸಾದಸ್ವಾಮಿ**
ಮುಖ್ಯರು, ಕನ್ನಡ ವಿಭಾಗ, ಸರ್. ಎಂ. ವಿ. ಸರ್ಕಾರಿ ವಿಜ್ಞಾನ ಕಾಲೇಜು, ಭದ್ರಾವತಿ-೫೭೭ ೩೦೨.

# ಹಳ್ಳಿಯ ಖಗೋಳ ವಿಜ್ಞಾನಿ ರಾಧಾ ಗೋವಿಂದ ಚಂದ್ರ



**ಹೊ**ರದೇಶದ ವಿಜ್ಞಾನಿಗಳ ಹೆಸರುಗಳನ್ನು ನಾವು ಕೇಳಿದ್ದೇವೆ. ಐನ್‌ಸ್ಟೈನ್, ಡಾರ್ವಿನ್, ರುದರ್ ಫರ್ಡ್ ಹೀಗೆ ಹಿಂದಿನ ಮತ್ತು ಇಂದಿನ ಅನೇಕ ಮಂದಿ ವಿಜ್ಞಾನಿಗಳ ಹೆಸರುಗಳ ಪರಿಚಯ ನಮಗಿದೆ. ನಮ್ಮ ದೇಶದಲ್ಲೇ ಜನಿಸಿ, ಖಗೋಳ ವಿಜ್ಞಾನದಲ್ಲಿ ಅಪಾರ ಕೆಲಸ ಮಾಡಿ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ ರಾಧಾ ಗೋವಿಂದ ಚಂದ್ರರ ಹೆಸರಿನ ಪರಿಚಯವೇ ನಮಗೆ ಇಲ್ಲದಿರುವುದು ಸೋಜಿಗ. ಅವರನ್ನು ಖಗೋಳ ವಿಜ್ಞಾನಿ ಎನ್ನಬಹುದೇ ಎಂಬುದು ಗೊತ್ತಿಲ್ಲ. ಆದರೆ ಖಗೋಳ ವಿಜ್ಞಾನಕ್ಕೆ ಅವರ ಮಹತ್ತರ ಕೊಡುಗೆಯಿಂದ ಅವರು ವಿಶ್ವ ವಿಖ್ಯಾತರಾಗಿದ್ದರು.

ರಾಧಾ ಗೋವಿಂದ ಚಂದ್ರ ಅವರು ಈಗ ಬಾಂಗ್ಲಾದೇಶದಲ್ಲಿರುವ ಜೆಸ್ಸೂರ್ ಬಳಿಯ ಬಾಗ್ಜಾರ್ ಎಂಬ ಗ್ರಾಮದಲ್ಲಿ ೧೮೭೮ ಜುಲೈ ೧೬ರಂದು ಜನಿಸಿದರು. ತಾಯಿ ಚಂದ್ರಮುಖಿ. ತಂದೆ ಗೋರಾಚಂದ್. ರಾಧಾ ಗೋವಿಂದರು ತಮ್ಮ ಬಾಲ್ಯವನ್ನು ಆ ಹಳ್ಳಿಯಲ್ಲಿಯೇ ಕಳೆದರು. ಅವರಿಗೆ ವಿಶ್ವವಿದ್ಯಾನಿಲಯದ ಪದವಿ ಇರಲಿಲ್ಲ. ಆಗಿನ ಕಾಲದ ಎಂಟ್ರೆನ್ಸ್ ಪರೀಕ್ಷೆಯನ್ನೂ ಮುಗಿಸಲಿಲ್ಲ. ಮೂರು ಬಾರಿ ಪ್ರಯತ್ನಿಸಿದರೂ ಆ ಪರೀಕ್ಷೆ ಯಲ್ಲಿ ತೇರ್ಗಡೆಯಾಗಲಿಲ್ಲ. ಅವರಿಗೆ ೨೧ ವರ್ಷಗಳಾಗಿದ್ದಾಗ ಕೊನೆಯ ಬಾರಿ ಪ್ರಯತ್ನಿಸಿ ಆಗಲೂ ಸಾಧ್ಯವಾಗದಿದ್ದುದರಿಂದ ವಿದ್ಯಾಭ್ಯಾಸವನ್ನು ಅಲ್ಲಿಗೇ ಕೈಬಿಟ್ಟರು. ಅವರಿಗೆ ಖಗೋಳ ವಿಜ್ಞಾನದಲ್ಲಿ ಆಸಕ್ತಿ ಹುಟ್ಟಲು ಕಾರಣ, ಅಕ್ಷಯ ಕುಮಾರ್ ದತ್ತ ಅವರು ಬರೆದ "ವಿಶ್ವ ಎಷ್ಟು ದೊಡ್ಡದು !" (ಬ್ರಹ್ಮಾಂಡ್ ಕಿ ಪ್ರಖಂಡ್) ಎಂಬ ಪುಸ್ತಕ. ಬಂಗಾಳೀ ಭಾಷೆಯ ಈ ಪುಸ್ತಕವನ್ನು ಬಾಲ್ಯದಲ್ಲಿಯೇ ಓದಿ, ಅದರಿಂದ ಪ್ರಭಾವಿತರಾಗಿ ಗ್ರಹಗಳು, ನಕ್ಷತ್ರಗಳು ಮುಂತಾದ ಆಕಾಶಕಾಯಗಳ ಬಗ್ಗೆ ಅವರಿಗೆ ಅಪಾರ ಆಸಕ್ತಿಯುಂಟಾಯಿತು. ಅನಂತರ ಒಂದು ಚಿಕ್ಕ ಬೈನಾಕ್ಯುಲರ್ ಕೊಂಡು ಅದರಿಂದ ರಾತ್ರಿಯ ಆಕಾಶವನ್ನು ವೀಕ್ಷಿಸಲು ಪ್ರಾರಂಭಿಸಿದರು. ವಿವಾಹವಾದ ನಂತರ ಜೆಸ್ಸೂರಿನ ಕಲೆಕ್ಟರ್‌ರ ಕಚೇರಿಯಲ್ಲಿ ಹದಿನೈದು ರೂಪಾಯಿ ಸಂಬಳದ ಒಂದು ಕೆಲಸಕ್ಕೆ ಸೇರಿದರು.

ಶಾಂತಿನಿಕೇತನದಲ್ಲಿ ವಿಜ್ಞಾನ ಬೋಧಕರಾಗಿದ್ದ ಜಗದಾನಂದ ರೇ ಅವರು ರಾಧಾ ಗೋವಿಂದರಿಗಿದ್ದ ಖಗೋಳ ವೀಕ್ಷಣೆಯ ಆಸಕ್ತಿಯನ್ನು ಗುರುತಿಸಿ ಅವರ ಈ ಹವ್ಯಾಸಕ್ಕೆ ಬಹಳ ಪ್ರೋತ್ಸಾಹ ನೀಡಿದರು. ಅಲ್ಲದೆ ಪಾಶ್ಚಿಮಾತ್ಯ ದೇಶಗಳ ಖಗೋಳ ವಿಜ್ಞಾನಿಗಳ ಪರಿಚಯ ಮಾಡಿಸಿದರು. ಜಗದಾನಂದ ರೇಯವರ ಸಹಾಯವಿಲ್ಲದಿದ್ದರೆ ಅವರು ಯಾವುದಾದರೂ ಕಚೇರಿಯಲ್ಲಿ ಕಾರಕೂನರಾಗಿಯೇ ಜೀವನವನ್ನು ಮುಗಿಸುತ್ತಿದ್ದರು.

ಸ್ವಯಂ ಶಿಕ್ಷಣ ಪಡೆದು, ಒಬ್ಬಂಟಿಗರಾಗಿ, ಧೂಮಕೇತುಗಳು, ಉಲ್ಕಾಪಾತಗಳು ಮತ್ತು ಗ್ರಹಣಗಳು ಮುಂತಾದ ಖಗೋಳ ಘಟನೆಗಳನ್ನು ಆಸಕ್ತಿಯಿಂದ ವೀಕ್ಷಿಸಲು ಪ್ರಾರಂಭಿಸಿದರು. ೧೯೧೦ರಲ್ಲಿ ಗೋಚರಿಸಿದ ಹ್ಯಾಲೀ ಧೂಮಕೇತುವಿನ ಬಗೆಗೆ ಬಹಳ ಆಸಕ್ತಿವಹಿಸಿ, ಅವರ ಬಳಿ ಇದ್ದ ಸಾಮಾನ್ಯ ಬೈನಾಕ್ಯುಲರ್‌ನಿಂದಲೇ ವೀಕ್ಷಣೆ ನಡೆಸಿ, 'ಧೂಮಕೇತು' ಎಂಬ ಬೆಂಗಾಲೀ ಪುಸ್ತಕವನ್ನು ಬರೆದರು. ಒಂದು ಟೆಲಿಸ್ಕೋಪನ್ನು ಇಟ್ಟು ಕೊಳ್ಳಬೇಕೆಂಬ ಜಗದಾನಂದ ರೇ ಅವರ ಸಲಹೆಯಿಂದ ಪ್ರೇರಿತರಾಗಿ, ತಾವು ಪಡೆಯುತ್ತಿದ್ದ ಅಲ್ಪ ವೇತನದಲ್ಲಿ ೧೫೦ ರೂಪಾಯಿ ತೆತ್ತು ಮೂರು ಅಂಗುಲದ ಒಂದು ಟೆಲಿಸ್ಕೋಪನ್ನು ಲಂಡನ್ನಿನಿಂದ ತರಿಸಿಕೊಂಡರು.

ಟೆಲಿಸ್ಕೋಪಿನ ನೆರವಿನಿಂದ ರಾಧಾ ಗೋವಿಂದ ಅವರು ಮಾಡಿದ ಸಾಧನೆಗಳು ಗಮನಾರ್ಹ. ೧೯೧೮ರ ಜೂನ್ ೭ರಂದು ಅಕ್ವಿಲಾ ನಕ್ಷತ್ರ ಪುಂಜದಲ್ಲಿ, ಆಗ ಲಭ್ಯವಿದ್ದ ನಕ್ಷೆಗಳಲ್ಲಿ ಇಲ್ಲದಿದ್ದ ಒಂದು ಹೊಸ ನಕ್ಷತ್ರವನ್ನು ವೀಕ್ಷಿಸಿದರು. ಇದನ್ನು ನೋಡಿದ ಭಾರತೀಯರಲ್ಲಿ ಇವರೇ ಮೊದಲಿಗರು. ತಾವು ಕಂಡ ಈ ನಕ್ಷತ್ರದ ಬಗೆಗೆ ಅವರು ಜಗದಾನಂದ ರೇ ಅವರಿಗೆ ಬರೆದರು. ರೇ ಅವರು ಈ ವಿಷಯವನ್ನು ತಕ್ಷಣ ಹಾರ್ವರ್ಡ್ ವೀಕ್ಷಣಾಲಯಕ್ಕೆ ತಿಳಿಸುವಂತೆ ಹೇಳಿದರು. ಹೀಗೆ ಅವರಿಗೆ ಹಾರ್ವರ್ಡ್‌ನ ಪಿ.ಸಿ. ಪಿಕರಿಂಗ್ ಅವರ ಪರಿಚಯವಾಯಿತು.

**ಜೀವೂಬಾಯಿ ಲಕ್ಷ್ಮಣರಾವ್**

ಸಮಕಾಲೀನ ಪಾಶ್ಚಿಮಾತ್ಯ ಖಗೋಳ ವಿಜ್ಞಾನಿಗಳು ರಾಧಾ ಗೋವಿಂದರ ವೀಕ್ಷಣೆಗಳಿಗೆ ಬಹಳ ಮಹತ್ವ ನೀಡಿದ್ದಾರೆಂಬುದು ಅವರ ಬಳಿ ಇರುವ ದಾಖಲೆಗಳಿಂದ ತಿಳಿದುಬರುತ್ತದೆ. ಪಶ್ಚಿಮ ದೇಶಗಳ ವೀಕ್ಷಣಾಲಯಗಳಿಗೆ ಅವರ ಕೊಡುಗೆಗಳೆಲ್ಲಾ ಬಹುಮಟ್ಟಿಗೆ ಚಂಚಲ ತಾರೆಗಳನ್ನು (variable stars) ಕುರಿತಂಥವು. ಕೆಲವು ನಕ್ಷತ್ರಗಳ ಪ್ರಕಾಶವು ಸ್ಥಿರವಾಗಿರುವುದಿಲ್ಲ. ಅದು ಬದಲಾಗುತ್ತಿರುತ್ತದೆ. ಹಾಗೆ ಬದಲಾಗುವ ಅವಧಿ ಕೆಲವು ಗಂಟೆಗಳ ಕಾಲದಿಂದ ಕೆಲವು ವರ್ಷಗಳವರೆಗೂ ಇರಬಹುದು. ಆ ಸಮಯಗಳ ಅಳತೆಯು ಖಗೋಳ ವಿಜ್ಞಾನಕ್ಕೆ ಬಹಳ ಉಪಯುಕ್ತವಾದುದು. ಚಂಚಲ ತಾರೆಗಳ ಬಗೆಗೆ ರಾಧಾ ಗೋವಿಂದರ ಕೊಡುಗೆಯಿಂದ ಆ ನಕ್ಷತ್ರಗಳ ವರ್ಗೀಕರಣಕ್ಕೆ ಬಹಳ ಸಹಾಯವಾಗಿದೆ.

ಬ್ರಿಟಿಷ್ ಆಸ್ಟ್ರೋನಾಮಿಕಲ್ ಅಸೋಸಿಯೇಷನ್ನಿನವರು ರಾಧಾ ಗೋವಿಂದ ಅವರಿಗೆ ಬರೆದಿರುವ ಒಂದು ಪತ್ರದಲ್ಲಿ "ಚಂಚಲ ತಾರೆಗಳ ಬಗೆಗೆ ನೀವು ಮಾಡಿರುವ ಅತ್ಯುತ್ತಮ ವೀಕ್ಷಣೆಗಳೂ, ನೀವು ನೀಡಿರುವ ಸೂಚನೆಗಳೂ, ಚಂಚಲ ತಾರೆಗಳ ಬಗೆಗೆ ಕೆಲಸ ಮಾಡುವ ನಮ್ಮ ಈ ವಿಭಾಗದ ಖಗೋಳ ವಿಜ್ಞಾನಿಗಳಿಗೆ ಬಹಳ ಅಮೂಲ್ಯವಾಗಿವೆ. ಇದೇ ಬಗೆಯ ಉತ್ಸಾಹಪೂರಿತ ನೆರವು ಮುಂದೆಯೂ ನಮಗ ನಿಮ್ಮಿಂದ ಸಿಕ್ಕುತ್ತದೆ ಎಂದು ಆಶಿಸುತ್ತಿದ್ದೇವೆ" ಎಂದು ಬರೆದಿದ್ದಾರೆ.

ಅದೇ ರೀತಿ ಅಮೆರಿಕದ ಹಾರ್ವರ್ಡ್ ವೀಕ್ಷಣಾಲಯದ ನಿರ್ದೇಶಕರಾದ ಜಗದ್ವಿಖ್ಯಾತ ಖಗೋಳ ವಿಜ್ಞಾನಿ ಹೆರಾಲ್ಡ್ ಷ್ಯಾಪ್ಲೀ ಅವರು ೧೯೫೦ರ ಡಿಸೆಂಬರ್ ೧೨ರಂದು ಬರೆದಿರುವ ಒಂದು ಪತ್ರದಲ್ಲಿ "ಹಾರ್ವರ್ಡ್‌ನ್ನು ಕೇಂದ್ರ ಕಾರ್ಯಸ್ಥಾನವಾಗಿ ಮಾಡಿಕೊಂಡಿರುವ ಚಂಚಲ ತಾರಾ ವೀಕ್ಷಕರ ಅಮೆರಿಕನ್ ಅಸೋಸಿಯೇಷನ್ ಮುಖ್ಯ ವಿದೇಶೀ ದಾತೃಗಳಲ್ಲೊಬ್ಬರಾದ ನಿಮಗೆ ನಮಿಸುತ್ತದೆ" ಎಂದು ಬರೆದಿದ್ದಾರೆ.

ರಾಧಾ ಗೋವಿಂದ ಅವರಿಗೆ ಅವರ ವೀಕ್ಷಣ ಕಾರ್ಯದಲ್ಲಿ ಅನುಕೂಲವಾಗಲೆಂದು ೧೯೨೬ರಲ್ಲಿ ಹಾರ್ವರ್ಡ್ ವೀಕ್ಷಣಾಲಯದವರು ೬.೨೫ ಅಂಗುಲದ ಒಂದು ಟೆಲಿಸ್ಕೋಪನ್ನು ಅಮೆರಿಕದಿಂದ ನೇರವಾಗಿ ಅವರ ಹಳ್ಳಿಗೇ ತಲುಪುವಂತೆ ಕಳಿಸಿದರು. ವಯಸ್ಸಾದ ಮೇಲೆ ವೀಕ್ಷಣೆಯ ಕೆಲಸ ಸಾಧ್ಯವಿಲ್ಲದಾದಾಗ ಆ ದೂರದರ್ಶನವನ್ನು ಅವರು ಬೆಂಗಳೂರಿನಲ್ಲಿರುವ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋ-ಫಿಸಿಕ್ಸ್ ನಿರ್ದೇಶಕರಾಗಿದ್ದ ದಿವಂಗತ ಎಂ. ಕೆ. ವಿ. ಬಪ್ಪು ಅವರಿಗೆ ಕೊಟ್ಟರು. ರಾಧಾ ಗೋವಿಂದರ ನಿಸ್ವಾರ್ಥ ದುಡಿಮೆಯ ಕುರುಹಾಗಿ ಅದು ಇನ್ನೂ ಅಲ್ಲಿದೆ.

ಇದಾದ ಎರಡು ವರ್ಷಗಳ ತರುವಾಯ ಫ್ರಾನ್ಸ್ ಸರ್ಕಾರದ ಶಿಕ್ಷಣ ಇಲಾಖೆಯು ವಿಜ್ಞಾನಕ್ಕೆ ಅವರ ಕೊಡುಗೆಯನ್ನು ಅರಿತು OFFICER D' ACADEMIE REPUBLIC FRANCAISE ಎಂಬ ಪದವಿಯನ್ನಿತ್ತು ಗೌರವಿಸಿತು. ಕಲ್ಕತ್ತೆಯಲ್ಲಿದ್ದ ಫ್ರೆಂಚ್ ಕಾನ್ಸುಲೇಟ್

(೬೧ನೇ ಪುಟಕ್ಕೆ)

*Infinite in All Directions*
*Imagined Worlds*
By : Freeman Dyson

## ಎಂ. ಎ. ಸೇತುರಾವ್

**ಈ** ಎರಡು ಪುಸ್ತಕಗಳ ಕರ್ತೃ ಫ್ರೀಮನ್ ಡೈಸನ್. ಇವರು ಭೌತ ವಿಜ್ಞಾನದ ಪ್ರಾಧ್ಯಾಪಕರು. ಅಮೆರಿಕಾದ ಪ್ರತಿಷ್ಠಿತ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್‌ಡ್ ಸ್ಟಡೀಸ್‌ನಲ್ಲಿ ಬೋಧಿಸುತ್ತಿದ್ದರು. ಮೊದಲನೆಯ ಪುಸ್ತಕ ಡೈಸನ್ ಅವರು ಸ್ಕಾಟ್ಲೆಂಡಿನ ಅಬರ್ಡೀನ್ ನಗರದಲ್ಲಿ ನೀಡಿದ ಗಿಫರ್ಡ್ ಉಪನ್ಯಾಸಗಳನ್ನು ಆಧರಿಸಿದ್ದು. ಎರಡನೆಯ ಪುಸ್ತಕ ಜೆರೂಸಲೇಮ್ ಹೀಬ್ರು ವಿಶ್ವವಿದ್ಯಾಲಯದಲ್ಲಿ ೧೯೯೫ರಲ್ಲಿ ನೀಡಿದ ಉಪನ್ಯಾಸಗಳ ಸಂಗ್ರಹ. ಡೈಸನ್ ಅನೇಕ ವಿವಾದಾತ್ಮಕ ವಿಷಯಗಳನ್ನು ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. Infinite in All Directions ಎಂಬ ಪುಸ್ತಕದ ೧೭ ಅಧ್ಯಾಯಗಳಲ್ಲಿ ಪ್ರಸ್ತುತವಾಗಿರುವ ಗ್ಲೋಬಲ್ ತಂತ್ರಜ್ಞಾನ ಮತ್ತು ಗ್ಲೋಬಲ್ ಧೋರಣೆಗಳನ್ನೊಳಗೊಂಡ ಹಲವಾರು ವಿಷಯಗಳನ್ನು ಚರ್ಚಿಸಿದ್ದಾರೆ. ಡೈಸನ್ ಅವರ ಅಭಿಪ್ರಾಯಗಳನ್ನು ನಾವು ಒಪ್ಪದಿರಬಹುದು. ಅವರು ನಮೂದಿಸಿರುವ ವಿಪುಲ ಗ್ರಂಥಸೂಚಿಯನ್ನು ಗಮನಿಸಿದರೆ ಅವರ ಪಾಂಡಿತ್ಯದ ಅರಿವುಂಟಾಗುವುದು. ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯಗಳನ್ನು ಅನುಮೋದಿಸದಿರುವುದು ವಿಜ್ಞಾನದ ಇತಿಹಾಸದಲ್ಲಿ ಸಾಕಷ್ಟು ಕಾಣಬರುತ್ತದೆ. ಇದೊಂದು ವಿಜ್ಞಾನದ ವೈಶಿಷ್ಟ್ಯತೆ. ಧಾರ್ಮಿಕ ಗುರುಗಳನ್ನು ಟೀಕೆ ಟಿಪ್ಪಣಿಗೆ ಒಳಪಡಿಸುವುದೆಂದರೆ ಸ್ವಲ್ಪ ಕಷ್ಟವೇ ಸರಿ! ನಮ್ಮ ಸುತ್ತಮುತ್ತಲಿನ ವಿದ್ಯಮಾನಗಳನ್ನು ಗ್ರಹಿಸಲು ವಿಜ್ಞಾನ ಮತ್ತು ಧರ್ಮ (ರಿಲಿಜನ್) ಎರಡು ಕಿಂಡಿಗಳು ಎಂಬ ಡೈಸನ್ ಅವರ ನಿರೂಪಣೆ ಅವರ ದೃಷ್ಟಿಕೋನವನ್ನು ಬಯಲು ಮಾಡುತ್ತದೆ. ಸತ್ಯಾನ್ವೇಷಣೆಗೆ ಶ್ರದ್ಧೆ ಮತ್ತು ಆಸಕ್ತಿ ಅಗತ್ಯವಿಲ್ಲವೆಂಬ ವಿವಾದಾಸ್ಪದವಾದ ಅಭಿಪ್ರಾಯವನ್ನು ಅವರು ಮಂಡಿಸಿದ್ದಾರೆ. ಹಾಗಾದರೆ, ಎಲ್ಲ ಸಂಶೋಧನೆಗಳಿಗೂ ಆಕಸ್ಮಿಕಗಳೇ ಕಾರಣವೆಂದರ್ಥವೇ? ಅಂದ ಮೇಲೆ, ವೈಜ್ಞಾನಿಕ ಸಂಶೋಧನೆಗಳು ಫಲಿಸಲು 'ಅದೃಷ್ಟ'ವೇ ಕಾರಣವೇ ?

ವೈವಿಧ್ಯತೆಯನ್ನು ಪ್ರತಿಪಾದಿಸುವಾಗ ಡೈಸನ್ ಮಂಡಿಸುವ ವಾದ ವಿಚಿತ್ರವಾಗಿದೆ. ಅವರ ಪರಿಕಲ್ಪನೆಯಂತೆ ವೈವಿಧ್ಯತೆಯೆಂದರೆ ವಾಸ್ತವತಾವಾದ ಮತ್ತು ಆದರ್ಶ ತತ್ವಜ್ಞಾನವೆರಡನ್ನು ಅನುಮೋದಿಸುವುದೇ ಆಗಿದೆ. ವಸ್ತುನಿಷ್ಠ ಸತ್ಯವನ್ನು ನಂಬದ ಡೈಸನ್ ಸಹಜವಾಗಿಯೇ ಇಂಥ ಪರಿಕಲ್ಪನೆಗೆ ತುತ್ತಾಗಿದ್ದಾರೆ. ''ವಾಸ್ತವತಾವಾದ ಎಂಬುದೇನೆಂದು ನನಗೆ ಅರ್ಥವೇ ಆಗುವುದಿಲ್ಲ'' – ಇದು ಅವರ ಹೇಳಿಕೆ ಎಂದರೆ ಅಚ್ಚರಿಯಾಗಬಹುದು. ಹೀಗೆ, ವಾಸ್ತವತಾವಾದದ ಬಗ್ಗೆ ಸಂದೇಹ ವ್ಯಕ್ತಪಡಿಸಿದ ಡೈಸನ್ 'ವೈಜ್ಞಾನಿಕ ಮಾನವೀಯತೆ' (ಸೈಂಟಿಫಿಕ್ ಹ್ಯೂಮನಿಸಮ್)ಯನ್ನು ಬೆಂಬಲಿಸಿರುವುದು ಸಮಾಧಾನದ ವಿಷಯವಾಗಿದೆ.

ವಿಜ್ಞಾನ ಮತ್ತು ಧರ್ಮಗಳನ್ನು ಕಲಬೆರಕೆ ಮಾಡುವ ಡೈಸನ್‌ರ ವಿಚಾರಪೂರಿತ ಜನಪ್ರಿಯ ವಿಜ್ಞಾನ ಲೇಖನಗಳು ಮೆಚ್ಚತಕ್ಕವು. ಅವರು ಜೀವದ ಹುಟ್ಟು, ತಂತ್ರಜ್ಞಾನದ ಆರಂಭ ಮತ್ತು ವ್ಯಾಪ್ತಿ, ೨೦ನೇ ಶತಮಾನದ ವೈಜ್ಞಾನಿಕ ಬೆಳವಣಿಗೆ, ಆಕಾಶಕಾಯಗಳ ಸೃಷ್ಟಿ, ತಾರಾಸಮರ, ವಿಶ್ವಶಾಂತಿ ಮುಂತಾದ ವಿಷಯಗಳನ್ನು ಕುರಿತು ಪ್ರೌಢ ಲೇಖನಗಳನ್ನೇ ಬರೆದಿದ್ದಾರೆ. ಸಂದರ್ಭಾನುಸಾರ ಜೆ. ಬಿ. ಎಸ್. ಹಾಲ್ಡೇನ್ ಮತ್ತು ಜೆ. ಡಿ. ಬರ್ನಾಲ್ ಅವರ ಅಭಿಪ್ರಾಯಗಳನ್ನು ಉದ್ಧರಿಸಿರುವುದು ಸೂಕ್ತವಾಗಿದೆ.

ಒಂದು ಅಧ್ಯಾಯದಲ್ಲಿ ಡೈಸನ್ ವಿಶ್ವದ ಉಗಮ ಮತ್ತು ಅಂತ್ಯವನ್ನು ಕುರಿತು ವ್ಯಾಖ್ಯಾನ ಮಾಡಿದ್ದಾರೆ. ವಿಶ್ವದ (ಬ್ರಹ್ಮಾಂಡದ) ಉಗಮದ ಮೊದಲ ಮೂರು ನಿಮಿಷಗಳ ಪ್ರಕ್ರಿಯೆಯನ್ನು ಸ್ಟೀವನ್ ವೈನ್‌ಬರ್ಗ್ ಸರಳವಾಗಿ ವಿವರಿಸಿರುವುದನ್ನು ಡೈಸನ್ ಶ್ಲಾಘಿಸಿದ್ದಾರೆ. ಬ್ರಹ್ಮಾಂಡದ ಅಂತಿಮ ನಾಶದ ಬಗ್ಗೆ ವಿಚಾರ ಮಾಡುವ ಅವರು ವೈಜ್ಞಾನಿಕ ಸಂಶೋಧನೆಗಳನ್ನು ನಡೆಸುವಾಗ 'ಮೌಲ್ಯ'ಗಳ ಚಿಂತನೆ ಅವಶ್ಯಕವೆಂಬ ತಮ್ಮ ಧೋರಣೆಯನ್ನು ಪ್ರತಿಪಾದಿಸಿದ್ದಾರೆ. ಬ್ರಹ್ಮಾಂಡದ ಅಂತಿಮ ನಾಶವನ್ನು ಚರ್ಚಿಸುವಾಗ ಬದುಕಿನ ಅರ್ಥ ಮತ್ತು ಉದ್ದೇಶಗಳ ಬಗ್ಗೆ ಗಮನಹರಿಸಿರುವುದು ಸ್ವಲ್ಪ ಗೊಂದಲವನ್ನುಂಟು ಮಾಡುವುದು ಸಹಜವೇ ಸರಿ. ಜಾಕಿಸ್ ಮಾನಡ್ ಮತ್ತು ಥಾಮಸ್ ಹಕ್ಸ್‌ಲಿ ಅವರನ್ನು ಉದ್ಧರಿಸುವಾಗ ಇವರ ತೀಕ್ಷ್ಣವಾದ ವಿಚಾರವಂತಿಕೆಯನ್ನು ಡೈಸನ್ ಮರೆತಂತಿದೆ. ಮಾನಡ್ ಹೇಳುವಂತೆ, ''ಜ್ಞಾನದ ಸಂಗಡ ಮೌಲ್ಯಗಳನ್ನು ಬೆರೆಸುವುದು ನಿಷಿದ್ಧ ಮತ್ತು ಕಾನೂನು ಬಾಹಿರ.'' ಡೈಸನ್ ಅವರ ಧಾರ್ಮಿಕ ಭಾವನೆಗಳನ್ನು ಮತ್ತು ''ಮೌಲ್ಯ''ಗಳನ್ನು ಓದಿದವರಿಗೆ ''ತಾರಾಸಮರ'' ಮತ್ತು ಪರಮಾಣು ಶಸ್ತ್ರಾಸ್ತ್ರಗಳ ಬಗ್ಗೆ ಅವರ ವಿರೋಧ ಒಂದು ರೀತಿ ಸಮಾಧಾನ ತರುತ್ತದೆ. ಆದರೆ, ಕಾರ್ಲ್ ಸಗಾನ್ ಮತ್ತಿತರ ಪ್ರಖ್ಯಾತ ವಿಜ್ಞಾನಿಗಳು ಮಂಡಿಸಿರುವ 'ನ್ಯೂಕ್ಲಿಯರ್ ಛಳಿಗಾಲ'ವೆಂಬ ಪರಿಕಲ್ಪನೆಯನ್ನು ಅವರು ನಂಬಲು ಸಿದ್ಧರಿಲ್ಲ. ಇದೊಂದು ಅರೆಬೆಂದ ವೈಜ್ಞಾನಿಕ ಪರಿಕಲ್ಪನೆಯಾದರೂ 'ನ್ಯೂಕ್ಲಿಯರ್ ಆಯುಧಗಳ ವಿರುದ್ಧ ಹೋರಾಟಕ್ಕೆ ಪುಷ್ಟಿಯನ್ನು ನೀಡುತ್ತದೆ'ಯೆಂದು ಅವರ ಅಭಿಪ್ರಾಯ.



ತಂತ್ರಜ್ಞಾನ ಮನುಕುಲಕ್ಕೆ ಲಭಿಸಿದ ಅತ್ಯಂತ ಮಹತ್ತಾದ ವರವೆಂದು ಅವರ ನಿಶ್ಚಿತವಾದ ವಾದವಾಗಿದೆ. ''ತಂತ್ರಜ್ಞಾನ ಮನುಕುಲಕ್ಕೇ ದೊರಕಿದ ದೇವರ ಕೊಡುಗೆ. ಅದು ಎಲ್ಲ ನಾಗರಿಕತೆಯ, ಕಲಾನೈಪುಣ್ಯ ಹಾಗೂ ವಿಜ್ಞಾನಗಳ ಮಾತೃ'' ಎಂಬ ಅವರ ಹೇಳಿಕೆ ಗಮನಾರ್ಹ. ತಂತ್ರಜ್ಞಾನದ ವರ್ಗಾವಣೆಯನ್ನು ತಡೆಹಿಡಿಯುವವರು ಮಾಹಿತಿ ಹರಡಲು ಕಂಟಕರಾಗಿ ಜನತೆಗೆ ಶತ್ರುಗಳಾಗುತ್ತಾರೆ. ತಂತ್ರಜ್ಞಾನ ಈ ಭೂಗ್ರಹದ ಸಂಪತ್ತಾದ ನೀರು ಮತ್ತು ಗಾಳಿಯಂತೆ ಎಲ್ಲರಿಗೂ ಸಿಗಬೇಕಾದದ್ದು. ಆದರೆ, ಗ್ಯಾಟ್ ಒಪ್ಪಂದದಲ್ಲಿ ನಿರೂಪಿಸಿರುವ 'ಬೌದ್ಧಿಕ ಆಸ್ತಿಯ ಹಕ್ಕು' (Intellectual Property Rights) ಮಾಹಿತಿ ತಂತ್ರಜ್ಞಾನದ ಪ್ರಸರಣಕ್ಕೆ ಸಹಾಯಕವಾಗಿದೆಯೇ ?

೨೧ನೆಯ ಶತಮಾನದಲ್ಲಿ ಫಲಿಸಬಹುದಾದ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯನ್ನು ಡೈಸನ್ ಊಹಿಸಿರುವುದು ಓದುಗರಿಗೆ ಉತ್ಸಾಹ ಮೂಡಿಸಬಹುದು. ಅಣುಜೀವ ವಿಜ್ಞಾನ, ವ್ಯೋಮ ಭೌತ ವಿಜ್ಞಾನ ಮತ್ತು ನರಶರೀರ ವಿಜ್ಞಾನಗಳಲ್ಲಿ ಅಭೂತಪೂರ್ವ ಸಂಶೋಧನೆಗಳು ಬೆಳಕಿಗೆ ಬರಬಹುದೆಂಬ ಭವಿಷ್ಯವಾಣಿಯನ್ನು ಅವರು ನುಡಿದಿದ್ದಾರೆ. ಜೆನೆಟಿಕ್ ಇಂಜಿನಿಯರಿಂಗ್ ತಂತ್ರಜ್ಞಾನ ಪ್ರಪಂಚದ ಅನೇಕ ಪ್ರದೇಶಗಳನ್ನು ಆರ್ಥಿಕೋನ್ನತಿಗೆ ಏರಿಸಬಹುದೆಂಬ ಕನಸು ಅವರದು. ಕೇವಲ ಉತ್ಪನ್ನದ ಆಧಿಕ್ಯವನ್ನು ಮಾತ್ರ ಗಮನದಲ್ಲಿಟ್ಟುಕೊಂಡರೆ ಸ್ವಾಭಾವಿಕ ಪರಿಸರ ಏನಾಗಬಹುದು ? ಜೆನೆಟಿಕ್ ಇಂಜಿನಿಯರಿಂಗ್ ಕ್ರಾಂತಿ ದೇಶ ದೇಶಗಳ ನಡುವೆ ಸಮಾನತೆಯನ್ನು ತರುವುದೆಂಬುದು ಅವರ ಅನಿಸಿಕೆ. ಈ ಸಮಾನತೆ ಕೇವಲ ತಂತ್ರಜ್ಞಾನಗಳ ವರ್ಗಾವಣೆಯಿಂದ ಸಾಧ್ಯವಾಗದು. ಜನತೆಯ ಹೋರಾಟವೂ ಅಗತ್ಯ.

"Infinite in All Directions" ಶೀರ್ಷಿಕೆಯ ಡೈಸನ್ ಲಿಖಿತ ಪುಸ್ತಕ ಅವರ ಪ್ರತಿಭೆಯನ್ನು ಪರಿಚಯಿಸುತ್ತೆ. ಅವರ ಭವಿಷ್ಯವಾಣಿಯೆಲ್ಲ ನಿಜವಾಗಲಾರದು. ಆದರೆ ಮಾನವನ ಪ್ರಗತಿಗೆ ಹಲವಾರು ತಂತ್ರಜ್ಞಾನ ಆವಿಷ್ಕಾರಗಳು ಕೊಡುಗೆಯನ್ನು ನೀಡಬಹುದು.

"Imagined Worlds" ಜೆರೂಸಲೇಮ್‌ನಲ್ಲಿ ಡೈಸನ್ ಮಾಡಿದ ಹಾರ್ವರ್ಡ್ ಉಪನ್ಯಾಸಗಳನ್ನು ಆಧರಿಸಿದ ಪುಸ್ತಕ. ಕತೆಗಳು, ವಿಜ್ಞಾನ, ತಂತ್ರಜ್ಞಾನ, ವಿಕಾಸ ಮತ್ತು ನೈತಿಕತೆ (ಎಥಿಕ್ಸ್) ಎಂಬ ಐದು ಅಧ್ಯಾಯಗಳಲ್ಲಿ ವಿಷಯದ ನಿರೂಪಣೆಯಾಗಿದೆ. ಮೊದಲನೆಯ ಪುಸ್ತಕದಲ್ಲಿ ವ್ಯಕ್ತಪಡಿಸಿರುವ ಭಾವನೆಗಳನ್ನು ಮತ್ತೆ ವಿಜ್ಞಾನಿ ಡೈಸನ್ ಉಚ್ಚರಿಸಿದ್ದಾರೆ. ಸತ್ಯಾಂಶಗಳನ್ನು ಹೊರಗೆಡಹಲು ವಿಜ್ಞಾನಕ್ಕೆ ಮಾತ್ರ ಸಾಧ್ಯ ಎಂಬುದನ್ನು ಅವರು ಒಪ್ಪದೆ ಈ ಕೆಲಸವನ್ನು ಧರ್ಮಗಳೂ ಮಾಡುತ್ತವೆ ಎಂದು ಹೇಳಿದ್ದಾರೆ. ಅನೇಕ ಸಂದರ್ಭಗಳಲ್ಲಿ ಪ್ರತಿಷ್ಠಿತ

ಧರ್ಮಗಳು ಆಚರಣೆಯಲ್ಲಿ ಕ್ರೌರ್ಯವನ್ನು ಎಸಗಿರುವುದುಂಟು ಎಂದು ಹೇಳಿದ ಡೈಸನ್ ''ವಿಜ್ಞಾನ''ವೂ ಹಲವೊಮ್ಮೆ ಕ್ರೂರವಾಗಿ ವರ್ತಿಸಿದೆ ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಒಂದು ಮೂಲಭೂತ ಪ್ರಶ್ನೆ ಏಳುವುದು ಸಹಜ. ''ವಿಜ್ಞಾನ''ವೇ ಕ್ರೂರವಾಗಿ ವರ್ತಿಸಿದೆಯೇ ಅಥವಾ ಅದನ್ನು ಬಳಸುವವರು ಹಿಂಸಾಚಾರಕ್ಕೆ ತೊಡಗುವರೆ ? ವಿಜ್ಞಾನ ವಾಸ್ತವಿಕ ಸಂಗತಿಗಳನ್ನು ಸ್ಪಷ್ಟವಾಗಿ ತಿಳಿಯಲು ಒಂದು ವಿಧಾನವಷ್ಟೆ. ವಿಜ್ಞಾನದ ಬಳಕೆ ತಂತ್ರಜ್ಞಾನದಲ್ಲಿದೆ. ತಂತ್ರಜ್ಞಾನಗಳು ಮಾನವನ ಉನ್ನತಿಗೆ ಕಾರಣವಾಗ ಬಹುದು ಅಥವಾ ಮಾರಕವಾಗಬಹುದು. ವಿಜ್ಞಾನದ ಕ್ರೂರ ಆಚರಣೆಯ ಬಗ್ಗೆ ಕಟುವಾಗಿ ಟೀಕಿಸಿರುವ ಡೈಸನ್ ವಿಜ್ಞಾನದ ಬೆಳವಣಿಗೆಯಾಗದಿದ್ದರೆ ಸಮಾನತೆಯ ಭಾವನೆ ಮಾನವ ಚರಿತ್ರೆಯಲ್ಲಿ ಅಂಕುರಿಸುತ್ತಿರಲಿಲ್ಲವೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ, ಅವರ ಅನಿಸಿಕೆಗಳಲ್ಲಿ ವಿರೋಧಾಭಾಸಗಳನ್ನು ಗುರುತಿಸಬಹುದು.

''ವಿಜ್ಞಾನ ನನ್ನ ಕ್ಷೇತ್ರ, ಆದರೆ ವಿಜ್ಞಾನ ಕಥನ (ಫಿಕ್ಷನ್) ನನ್ನ ಕನಸಿನ ಹರವು'' ಎಂದು ಹೇಳಿಕೊಂಡ ಡೈಸನ್ ಸಹಜವಾಗಿಯೇ ಪ್ರಸಿದ್ಧ ವಿಜ್ಞಾನ ಕಥನಗಾರನಾದ ಎಚ್. ಜಿ. ವೆಲ್ಸ್ ಕೃತಿಗಳನ್ನು ಮೆಚ್ಚಿಕೊಂಡಿದ್ದಾರೆ. ವೆಲ್ಸ್ ಬರೆದ 'ಟೈಮ್ ಮೆಷೀನ್' ಎಂಬ ಪುಸ್ತಕ ವಿಶ್ವವಿಖ್ಯಾತವಾಗಿದ್ದುಂಟು. ಈ ಯಂತ್ರದಲ್ಲಿ ಪ್ರಯಾಣ ಮಾಡುವ ವೃದ್ಧ ಯುವಕನಾಗಿ ಹಿಂತಿರುಗುತ್ತಾನೆ ಎಂದು ವಿವರಿಸಿದ ವೆಲ್ಸ್, ಐನ್‌ಸ್ಟೀನ್ ಅವರ ಸಾಪೇಕ್ಷವಾದವನ್ನು ಊಹಿಸಿದ್ದಂತೆ ತೋರುತ್ತದೆ. ವೆಲ್ಸ್ ಜೀವ ವಿಜ್ಞಾನಿಯಾಗಿದ್ದರೂ ಅವನ ಕಾಲದ ನಂತರ ಬರಲಿದ್ದ ಅಣು ಜೀವ ವಿಜ್ಞಾನದ ಆವಿಷ್ಕಾರಗಳ ಬಗ್ಗೆ ಯೋಚಿಸಿರಲಿಲ್ಲವೆಂದು ಕಾಣುತ್ತದೆ. ಅವರ 'ಟೈಮ್ ಮೆಷೀನ್' ಗತಕಾಲದ ಹಾಗೂ ಭವಿಷ್ಯತ್ತಿನ ಪ್ರಪಂಚದ ಸಂಗತಿಗಳನ್ನು ಸಂಖ್ಯಾಕಲನ ವಿಜ್ಞಾನದ ವಿಶ್ಲೇಷಣೆಗಳಿಗಿಂತ ಸೊಗಸಾಗಿ ಚಿತ್ರಿಸುತ್ತದೆ ಎಂಬ ಭಾವನೆಯನ್ನು ಡೈಸನ್ ವ್ಯಕ್ತಪಡಿಸಿದ್ದಾರೆ. ತಂತ್ರಜ್ಞಾನ ಮತ್ತು ಸಾಮಾಜಿಕ ವ್ಯವಹಾರಗಳ ನಡುವಿನ ಅಂತರಕ್ರಿಯೆಯನ್ನು ಗಗನದಲ್ಲಿ ಮಾನವನ ಹಾರಾಟದ ಪ್ರಯತ್ನಗಳ ಇತಿಹಾಸದಿಂದ ತಿಳಿಯಲು ಸಾಧ್ಯ. ಇದನ್ನು ಪ್ರಸಿದ್ಧ ಕಾದಂಬರಿಕಾರನಾದ ನೆವಿಲ್ ಷುಟೆಯ ಕೃತಿಗಳಿಂದ ಮನದಟ್ಟುಮಾಡಿಕೊಳ್ಳ ಬಹುದೆಂಬ ಅಭಿಪ್ರಾಯವನ್ನು ಡೈಸನ್ ಹೊಂದಿದ್ದಾನೆ. ನೆವಿಲ್ ಷುಟೆ ವೈಮಾನಿಕ ಇಂಜಿನಿಯರ್ ಆಗಿದ್ದು ವಿಮಾನಗಳ ಹಾಗೂ ಗಾಳಿಯಲ್ಲಿ ತೇಲುವ ಜಹಜುಗಳ ಮಾದರಿಗಳನ್ನು ಕಟ್ಟಿದ್ದ. ಮಾನವನ ಸಾಹಸ ಪ್ರವೃತ್ತಿಯಿಂದ ವಿಮಾನಗಳ ಜನನವಾಯಿತು. ಸಾಮ್ರಾಜ್ಯ ಕಟ್ಟುವ ಕನಸುಗಳಿಂದ ತೇಲುವ ಜಹಜುಗಳು (airships) ನಿರ್ಮಾಣವಾದುವು. ತೇಲುವ ಜಹಜುಗಳ ವಿಕಾಸದಲ್ಲಿ ರಾಜಕೀಯ ವ್ಯಕ್ತಿಗಳ ಪಾತ್ರ ಪ್ರಮುಖವಾಗಿತ್ತು. ಎರಡು ರೀತಿಯ ವೈಜ್ಞಾನಿಕ ಕ್ರಾಂತಿಗಳನ್ನು ಡೈಸನ್ ಗುರುತಿಸಿದ್ದಾರೆ. ಈ ವಿಂಗಡನೆ ಅಷ್ಟೇನೂ ಸಮರ್ಥನೀಯವಲ್ಲವೆಂದು ಕಾಣುತ್ತದೆ. ಹೊಸ ಹತ್ಯಾರುಗಳಿಂದ ಮತ್ತು ಹೊಸ ಪರಿಕಲ್ಪನೆಗಳಿಂದ ಸೃಷ್ಟಿಯಾದ ವೈಜ್ಞಾನಿಕ ಕ್ರಾಂತಿಗಳನ್ನು ಕುರಿತು ಅವರು ವಿಶ್ಲೇಷಿಸಿದ್ದಾರೆ. ಥಾಮಸ್ ಕುಹ್ನ್ 'ವೈಜ್ಞಾನಿಕ ಕ್ರಾಂತಿಗಳ ಒಳರಚನೆ' ಎಂಬ ಪುಸ್ತಕದಲ್ಲಿರುವ




ಹಲವು ವಿಷಯಗಳನ್ನು ಡೈಸನ್ ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ ಕುಹ್ನ್ ಗುರುತಿಸಿರುವ ಎರಡು ವಿಧದ ವೈಜ್ಞಾನಿಕ ಕ್ರಾಂತಿಗಳ ಬಗ್ಗೆ ಚರ್ಚೆ ನಡೆಸಿದ್ದಾರೆ. ಪರಿಕಲ್ಪನೆ ಪ್ರಚೋದಿತ ಕ್ರಾಂತಿ ಒಂದು, ಹತ್ಯಾರು ಪ್ರಚೋದಿತ ಕ್ರಾಂತಿ ಮಗದೊಂದು. ಇವುಗಳಿಗೆ ಸೂಕ್ತ ಉದಾಹರಣೆಗಳನ್ನು ನೀಡಿ ಇಂಥ ಕ್ರಾಂತಿಗಳನ್ನು ಡೈಸನ್ ಅಧ್ಯಯನ ಮಾಡಿದ್ದಾರೆ. ಈ ಎರಡು ವಿಧದ ಕ್ರಾಂತಿಗಳು ಪರಸ್ಪರ ವಿಭಿನ್ನ ಎಂದು ಹೇಳುವುದು ಅಷ್ಟೇನೂ ಸರಿಯಲ್ಲ. ಇವು ಪರಸ್ಪರ ಅಂತರಕ್ರಿಯೆಗೊಳಗಾಗಿರುವುದು ವಿಜ್ಞಾನದ ಇತಿಹಾಸದಿಂದ ನಮಗೆ ಸ್ಪಷ್ಟವಾಗುತ್ತದೆ. ಕೋಪರ್ನಿಕಸ್, ನ್ಯೂಟನ್, ಡಾರ್ವಿನ್, ಫ್ರಾಯ್ಡ್ ಮತ್ತು ಐನ್‌ಸ್ಟೈನ್ ಹೆಸರುಗಳಲ್ಲಿ ಪ್ರಸಿದ್ಧವಾದ ಕ್ರಾಂತಿಗಳನ್ನು 'ಪರಿಕಲ್ಪನೆ ಪ್ರಚೋದಿತ' ಕ್ರಾಂತಿಗಳ ಸಾಲಿಗೆ ಸೇರಿಸಲಾಗಿದೆ. ಟೆಲಿಸ್ಕೋಪ್ ಆವಿಷ್ಕಾರಕ್ಕೆ ಗೆಲಿಲಿಯೊ ಕ್ರಾಂತಿ ಕಾರಣವಾಯಿತು. X-ಕಿರಣ ವಿವರ್ತನ ಕ್ರಿಕ್-ವಾಟ್ಸನ್ ಅವರ ಜೀನ್ ಕ್ರಾಂತಿಗೆ ಮೂಲಕಾರಣ ವಾಯಿತು. ಇವೆರಡೂ ''ಹತ್ಯಾರು ಪ್ರಚೋದಿತ'' ಕ್ರಾಂತಿಗಳಿಗೆ ದಾರಿ ಮಾಡಿದವು ಎಂದು ಕುಹ್ನ್ ಹಾಗೂ ಡೈಸನ್ ಪ್ರತಿಪಾದಿಸಿದ್ದಾರೆ. ಹಳೆಯ ಸಂಗತಿಗಳನ್ನು ಹೊಸ ವಿಧಾನಗಳಲ್ಲಿ ವಿವರಿಸುವುದು ''ಪರಿಕಲ್ಪನೆ ಪ್ರಚೋದಿತ'' ಕ್ರಾಂತಿ. ಹತ್ಯಾರು ಪ್ರಚೋದಿತ ಕ್ರಾಂತಿ ಇನ್ನೂ ವಿವರಿಸಬೇಕಾದ ಹೊಸ ಸಂಗತಿಗಳನ್ನು ಆವಿಷ್ಕರಿಸುವುದು. ವಿಜ್ಞಾನದ ಎಲ್ಲ ಕ್ಷೇತ್ರಗಳಲ್ಲಿ ಹೊಸ ಹತ್ಯಾರುಗಳನ್ನು ಮತ್ತು ಸಂಶೋಧನೆಗಳನ್ನು ಮಾಡಲು ಸಾಕಷ್ಟು ಅವಕಾಶಗಳಿರುತ್ತವೆ. ಅವುಗಳಲ್ಲಿ ಹಲವನ್ನು ಸಾಧಿಸಲು 'ನೆಪೋಲಿಯನ್ ರೀತಿ' ಶಿಸ್ತು ಅಗತ್ಯವಿರುತ್ತದೆ. ಮತ್ತು ಹಲವು ಟಾಲ್‌ಸ್ಟಾಯ್ ಮಾದರಿ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತವೆ.

ಮುಂದಿನ ಶತಮಾನದಲ್ಲಿ ಜೀವ ವಿಜ್ಞಾನ ಅತ್ಯಂತ ಪ್ರಮುಖ ವಿಜ್ಞಾನ ಶಾಖೆಯಾಗುತ್ತದೆಂಬ ಡೈಸನ್ ಯೋಚನೆ ಇಂದು ನಿಶ್ಚಿತವಾಗಿದೆ. ಆದರೆ, ಬಹಳ ಕ್ಲಿಷ್ಟವಾಗಿರುವ ಸಮಸ್ಯೆಯೆಂದರೆ ''ಜೀವಿಯ ಉಗಮ''. ಈ ಕ್ಷೇತ್ರದಲ್ಲಿ ಪರಿಶ್ರಮಿಸಿರುವ ವಿಜ್ಞಾನಿಗಳು ಜೆ. ಬಿ. ಎಸ್. ಹಾಲ್ಡೇನ್, ಓಪರಿನ್ ಮತ್ತು ಜೆ. ಡಿ. ಬರ್ನಾಲ್. ಎಚ್. ಜಿ. ವೆಲ್ಸ್, ನಂತರ ಜೆ. ಬಿ. ಎಸ್. ಹಾಲ್ಡೇನ್, ಡೈಸನ್ ದೃಷ್ಟಿಯಲ್ಲಿ ವಿಜ್ಞಾನ ಕಥನಾಗಾರದಲ್ಲಿ ಅಗ್ರಸ್ಥಾನ ಪಡೆಯುತ್ತಾನೆ. ಹಾಲ್ಡೇನ್ ಅವರ ಕೃತಿ ''ಡೆಡಲಸ್ ಅಥವಾ ಭವಿಷ್ಯತ್ತಿನಲ್ಲಿ ವಿಜ್ಞಾನ'' ಡೈಸನ್ ಅವರ ಮೆಚ್ಚುಗೆಯ ಪುಸ್ತಕ. ಈ ಪುಸ್ತಕವನ್ನು ಐನ್‌ಸ್ಟೈನ್ ಅವರಿಂದ ಪಡೆದನೆಂದು ಅವನು ಹೇಳಿಕೊಂಡಿದ್ದಾನೆ. ನೈತಿಕತೆಯು ವಿಜ್ಞಾನದ ಬೆಳವಣಿಗೆಗೆ ಸರಿಸಮಾನವಾಗಿಲ್ಲದಿದ್ದರೆ ಮನುಕುಲಕ್ಕೆ ವಿಪರೀತ ಸಂಕಟದ ಪರಿಸ್ಥಿತಿಯಾಗಬಹುದೆಂಬ ವಾದವನ್ನು ಹಾಲ್ಡೇನ್ ಮಂಡಿಸಿದ್ದಾನೆ. ಈ ವಾದವನ್ನು ಡೈಸನ್ ಸಂಪೂರ್ಣವಾಗಿ, ಹಾಲ್ಡೇನ್‌ಗಿಂತ ಮಿಗಿಲಾಗಿ ಒಪ್ಪಿರುವುದು ನಮಗೆ ಅರ್ಥವಾಗುತ್ತದೆ. ಅನ್ವಯಿಕ ವಿಜ್ಞಾನ ಹಾಗೂ ತಂತ್ರಜ್ಞಾನವನ್ನು ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ ವಿನಾಶ ಖಂಡಿತವೆಂದು ಹಾಲ್ಡೇನ್ 'ಡೆಡಲಸ್' ಪುಸ್ತಕದಲ್ಲಿ ಪ್ರತಿಪಾದಿಸಿದ್ದಾನೆ. ಇಲ್ಲಿ ನಾವು ಗಮನಿಸಬೇಕಾದದ್ದು ತಂತ್ರಜ್ಞಾನದ ದುರುಪಯೋಗ. ಎರಡನೆಯ ಮಹಾಯುದ್ಧದಲ್ಲಿ ಮತ್ತು ವಿಯಟ್‌ನಾಮ್ ಯುದ್ಧದಲ್ಲಿ ಬಳಸಿದ ಮಾರಕಾಸ್ತ್ರಗಳು ಇದಕ್ಕೆ ಉದಾಹರಣೆ. ''ವಿಪರೀತದ ತಂತ್ರಜ್ಞಾನ ಬಡವರ ಮತ್ತು ಶ್ರೀಮಂತರ ನಡುವಿನ ಕಂದರವನ್ನು ಹೆಚ್ಚಿಸಿ, ಶಿಕ್ಷಣದಿಂದ ಹೊರತಾದ ಯುವಜನಾಂಗಕ್ಕೆ ಕೆಲಸಗಳು ದುರ್ಲಭವಾಗಿ ತಾಯಂದಿರು ಮತ್ತು ಮಕ್ಕಳು. ಮನೆಮಠವಿಲ್ಲದೆ ನಿರಾಶೆಗೆ ಬಲಿಯಾಗುತ್ತಾರೆ'' ಎಂದು ಡೈಸನ್ ಉದ್ಗಾರವೆತ್ತಿದ್ದಾರೆ. ಆದರೆ, ವಿಜ್ಞಾನವನ್ನಾಗಲಿ, ತಂತ್ರಜ್ಞಾನವನ್ನಾಗಲಿ ಸಾರಾಸಗಟಾಗಿ ದೂರುವಂತಿಲ್ಲವಷ್ಟೆ. ನಿಜಕ್ಕೂ, ಕಂಪ್ಯೂಟರ್ ತರಬೇತಿ ಪಡೆದ ಮತ್ತು ಉನ್ನತ ಶಿಕ್ಷಣ ಪಡೆದ ಯುವಜನಾಂಗವೇ ಒಂದು ವಿಶಿಷ್ಟ 'ಜಾತಿ' ನಿರ್ಮಿಸಿಕೊಳ್ಳುತ್ತಿದೆ. ಹಾಲ್ಡೇನ್ ನಿರಾಶಾವಾದಿಯಲ್ಲ. 'ಡೆಡಲಸ್' ಪುಸ್ತಕದ ಅಂತಿಮ ಸಂದೇಶ ಹೀಗಿದೆ. ಸಾಕಷ್ಟು ಧೈರ್ಯ ಮತ್ತು ನೈತಿಕ ಮುಂದಾಳತ್ವ ಉಳ್ಳ ಸಾಮಾನ್ಯ ಜನರು ತಂತ್ರಜ್ಞಾನದ ದುಷ್ಪರಿಣಾಮಗಳನ್ನು ತಡೆದಿಟ್ಟು ಸಾರ್ವಜನಿಕರ ಒಳಿತಿಗೆ ಅದನ್ನು ಬಳಸುವ ಶಕ್ತಿ ಹೊಂದಿರುತ್ತಾರೆ ಎಂದು ಹಾಲ್ಡೇನ್ ಅಭಿಪ್ರಾಯಪಟ್ಟಿದ್ದಾರೆ.

ತಂತ್ರಜ್ಞಾನ ಮುಂಬರುವ ಶತಮಾನಗಳಲ್ಲಿ ಯಾವ ಮಟ್ಟಕ್ಕೆ ಏರುತ್ತದೆಯೆಂಬುದನ್ನು ಡೈಸನ್ ವಿಜ್ಞಾನದ ಕಥನರೂಪದಲ್ಲಿ ಕನಸು ಕಂಡಿದ್ದಾರೆ. ಡಿನೋಸಾರ್‌ಗಳ ಜ್ಯುರಾಸಿಕ್ ಪಾರ್ಕ್ ಕಲ್ಪನಾ ಚಿತ್ರವಾಗಿರಬಹುದು. ಸದ್ಯದಲ್ಲಿ ಮಕ್ಕಳ ಆಟಕ್ಕೆ ಪ್ಲಾಸ್ಟಿಕ್ ಡಿನೊಸಾರ್‌ಗಳು ಮಾರುಕಟ್ಟೆಯಲ್ಲಿವೆ. ಮುಂದೊಂದು ದಿನ ನಮ್ಮ ಮೊಮ್ಮಕ್ಕಳ ಸಂತತಿಯ ವರ್ಷಗಳಲ್ಲಿ ಜೆನೆಟಿಕ್ ಇಂಜಿನಿಯರಿಂಗ್ ತಾಂತ್ರಿಕತೆಯಿಂದ ಜೀವಂತ ಡಿನೋಸಾರ್‌ಗಳು ಆಟದ ಸಾಮಾನುಗಳಾಗಬಲ್ಲವು ! ಡೈಸನ್ ಎಚ್. ಜಿ. ವೆಲ್ಸ್‌ಗಿಂತ ಅದ್ಭುತವಾದ ಕನಸುಗಳನ್ನು ಕಾಣುತ್ತಿದ್ದಾರೆ. ನೂರಿನ್ನೂರು ವರ್ಷಗಳ ನಂತರ ಚಂದ್ರ ಮತ್ತು ಮಂಗಳ ಗ್ರಹಗಳಿಗೆ ಮಾನವರು ವಲಸೆ ಹೋಗಬಹುದೆಂಬ ಆಶಾವಾದವನ್ನು ಡೈಸನ್ ವ್ಯಕ್ತಪಡಿಸಿದ್ದಾರೆ. ಗ್ರಹಗಳ ಮೇಲೆ ವಾಸ ಮಾಡಲು ಸೂಕ್ತವಾದ ಜೀನ್ ಮಾರ್ಪಾಟಾದ ಸಸ್ಯ ಮತ್ತು ಪ್ರಾಣಿಗಳು ಮುಂದಿನ ಶತಮಾನಗಳಲ್ಲಿ ಲಭ್ಯವಾಗ

ಬಹುದು ! ಭೂಮಿಯ ಗುರುತ್ವಾಕರ್ಷಣೆಯಿಂದ ತಪ್ಪಿಸಿಕೊಂಡು ಬ್ರಹ್ಮಾಂಡದಲ್ಲಿ ಜೀವಿಸುವ ಮಾನವ ಸುಮಾರು ೧೦೦೦ ವರ್ಷಗಳ ನಂತರ ವಿಜ್ಞಾನದ ಚಿನ್ನದ ಯುಗವನ್ನು ತಲುಪಬಹುದು. ಮಾನಸಿಕವಾಗಿ, ದೈಹಿಕವಾಗಿ ಮನುಷ್ಯ ಹೊಸ ಬಾಳನ್ನು ಕಂಡುಕೊಳ್ಳಬಹುದೆಂಬ ಕನಸನ್ನು ಡೈಸನ್ ಕಾಣುತ್ತಿದ್ದಾರೆ. ನ್ಯೂಟನ್ ಮತ್ತು ಐನ್‌ಸ್ಟೈನ್ ಕಂಡ ಬ್ರಹ್ಮಾಂಡಗಳನ್ನು ಮೀರಿ Alice in Wonderland ಬರೆದ ಲೂಯಿ ಕೆರೋಲ್‌ನ ಬ್ರಹ್ಮಾಂಡವನ್ನು ಮಾನವ ಸೇರಬಹುದು. ಈ ಬ್ರಹ್ಮಾಂಡದಲ್ಲಿ ಮಾನವನ ಹಳೆಯ ವೈಷಮ್ಯಗಳು ಮಾಯವಾಗಿ ಸೌಹಾರ್ದಮಯ ವಾತಾವರಣ ಸೃಷ್ಟಿಯಾಗಬಹುದು.

೧೯ನೆಯ ಶತಮಾನದ ಹಾಗೂ ೨೦ನೆಯ ಶತಮಾನದ ಮೊದಲ ಐವತ್ತು ವರ್ಷಗಳಲ್ಲಿ ಆದ ವೈಜ್ಞಾನಿಕ ಪ್ರಗತಿ ಇಡೀ ಸಮಾಜಕ್ಕೆ ಉಪಯುಕ್ತವಾಗಿದ್ದು ಸಂಪತ್ತು ಶ್ರೀಮಂತರಿಗೆ ಮತ್ತು ಬಡವರಿಗೆ ಲಭಿಸಿತು. ವಿದ್ಯುದ್ದೀಪ, ಟೆಲಿಫೋನ್, ಶೀತಕ, ರೇಡಿಯೋ, ದೂರದರ್ಶನ, ಕೃತಕ ನೂಲು, ಪ್ರತಿಜೀವಕಗಳು, ವಿಟಮಿನ್‌ಗಳು, ಚುಚ್ಚುಮದ್ದುಗಳು, ಎಲ್ಲರಿಗೂ ದೊರಕುವಂತಾದುವು. ಅದರಿಂದ ಸ್ವಲ್ಪಮಟ್ಟಿಗಾದರೂ ಶ್ರೀಮಂತರಿಗೂ ಬಡವರಿಗೂ ಇರುವ ಅಂತರ ಕಡಿಮೆಯಾಯಿತು (ಡೈಸನ್ ಅವರ ಅಭಿಪ್ರಾಯದಂತೆ). ೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಈ ಸಮತೋಲನ ಬದಲಾಯಿಸಿತು. ಸಾಮಾನ್ಯ ಜನರ ಸಮಸ್ಯೆಗಳಿಗೆ ಸಂಬಂಧವಿರದ ಗಹನವಾದ ವಿಷಯಗಳನ್ನು ವಿಜ್ಞಾನ ತನ್ನ ವ್ಯಾಪ್ತಿಗೆ ತಂದಿತು. ಕಣಭೌತವಿಜ್ಞಾನ, ಅತ್ಯಂತ ಕಡಿಮೆ ಉಷ್ಣತೆಯನ್ನು ಸಾಧಿಸುವ ತಂತ್ರಜ್ಞಾನ, ನಮ್ಮ ಗೆಲಾಕ್ಸಿಯಿಂದ ಹೊರಗಿರುವ ಆಕಾಶಕಾಯಗಳ ಪರಿಶೀಲನೆ ಮುಂತಾದುವವನ್ನು ಇಲ್ಲಿ ಉದಾಹರಿಸಬಹುದು. ಈ ಮಾದರಿ ವಿಜ್ಞಾನ ಮತ್ತು ತಂತ್ರಜ್ಞಾನಗಳಿಂದ ಉದ್ಧಾರವಾಗಿರುವವರೆಂದರೆ ವಿಜ್ಞಾನಿಗಳು ಮತ್ತು ಇಂಜಿನಿಯರುಗಳು ಮಾತ್ರ. ಇದರಿಂದಾಗಿ ವಿಜ್ಞಾನಿಗಳು ಸಾಮಾನ್ಯ ಜನರ ಬದುಕಿನ ಸಮಸ್ಯೆಗಳಿಂದ ದೂರವಾಗಿದ್ದಾರೆ. ಇಂಜಿನಿಯರ್‌ಗಳು, ಅನ್ವಯಿಕ ವಿಜ್ಞಾನಿಗಳು, ತಾತ್ಕಾಲಿಕ ಲಾಭದ ದೃಷ್ಟಿಯನ್ನೇ ಪ್ರಧಾನವಾಗಿಟ್ಟುಕೊಂಡಿರುತ್ತಾರೆ. ಈ ನ್ಯೂನತೆಗೆ ಪರಿಹಾರ ವಿಜ್ಞಾನಿಗಳ ಸಾಮಾಜಿಕ ಜವಾಬ್ದಾರಿಯಿಂದ ಮತ್ತು ನೈತಿಕ ಧೋರಣೆಯಿಂದ ದೊರಕಬಹುದು. ಫ್ರೀಮನ್ ಡೈಸನ್ ತನ್ನ ಎರಡು ಪುಸ್ತಕಗಳಲ್ಲಿ ಕಲ್ಪನೆಯ ಕುದುರೆಯ ಬೆನ್ನೇರಿ ನಾಗಾಲೋಟದಿಂದ ಓಡಿದರೂ ಹಲವು ವಿಷಯಗಳಲ್ಲಿ ವಾಸ್ತವಿಕ ಲೋಕಕ್ಕೆ ಹಿಂತಿರುಗುವರು. ಪರಮಾಣು ಶಕ್ತಿ ಮತ್ತು ಪರಮಾಣು ಬಾಂಬುಗಳನ್ನು ಕುರಿತಾದ ಅವರ ನಿಲುವು, ವಿಜ್ಞಾನಿಗಳ ಸಾಮಾಜಿಕ ಜವಾಬ್ದಾರಿಯನ್ನು ಗುರುತಿಸುವುದು, ಜೀವನ ಸೌಲಭ್ಯಗಳಿಂದ ವಂಚಿತರಾದ ಸಾಮಾನ್ಯ ಜನತೆಯ ಬಗ್ಗೆ ಕಳಕಳಿ – ಇಂಥ ಧೋರಣೆಗಳು ಶ್ಲಾಘನೀಯ. ಇವರ ಪುಸ್ತಕಗಳು ಸೂಕ್ಷ್ಮ ಚಿಂತನೆಗೆ ಪ್ರೇರೇಪಿಸುತ್ತವೆ.

ಎಂ. ಎ. ಸೇತುರಾವ್
ನಂ. ೪೨೧೯, ಸುಬ್ರಮಣ್ಯನಗರ, ಬೆಂಗಳೂರು - ೫೬೦ ೦೨೧

## ಸಾದರ ಸ್ವೀಕಾರ

**ನಮ್ಮ ಹೆಮ್ಮೆಯ ಸಾಹಿತಿ**
**ಯು. ಆರ್. ಅನಂತಮೂರ್ತಿ** *ಮಾನಸ*
ಪುಟ : ೮೮ ಬೆಲೆ ರೂ. ೨೨
**ತನುಮನ ಪ್ರಕಾಶನ,** ತೃಪ್ತಿ 'ಜಿ' ಬ್ಲಾಕ್, ೨ನೇ ತಿರುವು, ರಾಮಕೃಷ್ಣನಗರ, ಮೈಸೂರು-೫೭೦೦೨೩

**ಸ್ತ್ರೀ ಸಂವೇದನೆ** (ಲೇಖನ ಸಂಗ್ರಹ) *ಬಿ. ಎಂ. ರೋಹಿಣಿ*
ಪುಟ : ೭೩ ಬೆಲೆ ರೂ. ೩೦
**ಹೇಮಂತ ಪ್ರಕಾಶನ,** ದೇರಬೈಲು, ಮಂಗಳೂರು -೬

**ಗಿಲ್ ಗಿಲ್ ಗಿಡ್ಡ !** (ಮಕ್ಕಳ ಕಥೆಗಳು) *ಕಂಚ್ಯಾಣಿ ಶರಣಪ್ಪ*
ಪುಟ : ೪೦ ಬೆಲೆ ರೂ. ೨೫
**ಗ್ರಾಮೀಣ ಪ್ರತಿಭಾ ಪ್ರಕಾಶನ**
ವಿವೇಕನಗರ (ಪ) ವಿಜಾಪುರ - ೫೮೬೧೦೧

**ನೆಟ್‌ವರ್ಕ್ ಮಾರ್ಕೆಟಿಂಗ್ ಮೂಲಕ ಸುಖ ಜೀವನ** *ಚಿಕ್ಕಮಗಳೂರು ಧ್ರುವ ಹರೀಶ್*
ಪುಟ : ೧೭೬ ಬೆಲೆ ರೂ. ೮೦
**ವ್ಯಕ್ತಿತ್ವ ವಿಕಾಸ ಅಧ್ಯಯನ ಕೇಂದ್ರ,** ಬೆಂಗಳೂರು-೭೯

**ಅಕ್ಕಡಿ ಕಾಳು** (ಲೇಖನ ಸಂಗ್ರಹ)
*ತೋಟದ ಮನೆ ಚನ್ನಬಸವಯ್ಯ*
ಪುಟ : ೮೦ ಬೆಲೆ ರೂ. ೩೫
**ಹೊಂಬಾಳೆ ಪ್ರಕಾಶನ**
ಹುಳಿಯಾರು

---

*(೫೮ನೇ ಪುಟದಿಂದ)*

ಜನರಲ್ ಅವರು ರಾಧಾ ಗೋವಿಂದ ಅವರಿಗೆ ಬರೆದ ಪತ್ರದಲ್ಲಿ, ''ಮಾನ್ಯರೇ, ೨೬-೩-೨೮ರ ನನ್ನ ಪತ್ರಕ್ಕೆ ಸಂಬಂಧಿಸಿದಂತೆ ನಮ್ಮ ದೇಶದ ಶಿಕ್ಷಣ ಸಚಿವಾಲಯವು ತಮಗೆ 'ಆಫೀಸರ್ ದ ಅಕಾಡೆಮೀ' ಪ್ರಶಸ್ತಿಯನ್ನು ನೀಡಲು ನಿರ್ಧರಿಸಿರುವ ವಿಷಯವನ್ನು ತಮಗೆ ಈ ಮೂಲಕ ತಿಳಿಸುವ ಗೌರವ ನನ್ನ ಪಾಲಿಗೆ ಬಂದಿದೆ.... ಇದರೊಂದಿಗೆ ಸಂಬಂಧಪಟ್ಟ ಗೌರವಾಧಿಕಾರ ಪತ್ರವನ್ನೂ ಪದಕವನ್ನೂ ಕಳುಹಿಸುತ್ತಿದ್ದೇನೆ... ಲಯಾನ್ ವೇಧ ಶಾಲೆಗೆ ತಾವು ಸಲ್ಲಿಸಿರುವ ಸೇವೆಯನ್ನು ಗುರುತಿಸಿ ತಮಗೆ ನೀಡಲಾಗುತ್ತಿರುವ ಈ ಪ್ರಶಸ್ತಿಗಾಗಿ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ದಯವಿಟ್ಟು ಸ್ವೀಕರಿಸಿ'' ಎಂದಿದ್ದಾರೆ.

ಬ್ರಿಟಿಷ್ ಆಸ್ಟ್ರನಾಮಿಕಲ್ ಅಸೋಸಿಯೇಷನ್, ಹಾರ್ವರ್ಡ್ ಕಾಲೇಜ್ ಅಬ್ಸರ್ವೇಟರಿ, ಅಮೆರಿಕನ್ ಮೀಟಿಯರ್ ಸೊಸೈಟಿ, ಅಮೆರಿಕನ್ ಮ್ಯೂಸಿಯಮ್ ಆಫ್ ನ್ಯಾಚುರಲ್ ಹಿಸ್ಟರಿ, ಫ್ರಾನ್ಸ್‌ನ ಲಯಾನ್ ಅಬ್ಸರ್ವೇಟರಿ ಮುಂತಾದ ವೈಜ್ಞಾನಿಕ ಸಂಸ್ಥೆಗಳು ಅವರಿಗೆ ಗೌರವ ಸದಸ್ಯತ್ವವನ್ನು ನೀಡಿದ್ದವು.

ರಾಧಾ ಗೋವಿಂದ ಅವರು ಗಣನೀಯ ಕೆಲಸ ಮಾಡಿದ ಇನ್ನೊಂದು ಕ್ಷೇತ್ರ, ಕ್ಯಾಲೆಂಡರ್ ಸುಧಾರಣೆ. ಈ ಬಗ್ಗೆ ಅವರು ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಕ್ಯಾಲೆಂಡರ್ ಪರಿಷ್ಕರಣದಲ್ಲಿ ಆಸಕ್ತಿ ಇದ್ದ ಎನ್. ಸಿ. ಲಾಹಿರಿ, ಮೇಘನಾದ ಸಹಾ ಮುಂತಾದ ಖ್ಯಾತ ವಿಜ್ಞಾನಿಗಳೊಡನೆ ಇವರಿಗೆ ನಿಕಟ ಸಂಪರ್ಕವಿತ್ತು.

ರಾಧಾ ಗೋವಿಂದರು ತಮ್ಮ ಜೀವನದ ಹೆಚ್ಚು ಸಮಯವನ್ನು ತಮ್ಮ ಹುಟ್ಟೂರಿನಲ್ಲಿಯೇ ಕಳೆದರು. ಸ್ವಾತಂತ್ರ್ಯಾನಂತರ ಅವರು ತಮ್ಮ ಕುಟುಂಬದೊಡನೆ ಭಾರತಕ್ಕೆ ಬಂದರು. ಅದರಿಂದ ಅವರ ಖಗೋಳ ವೀಕ್ಷಣೆಗೆ ತೊಂದರೆಯುಂಟಾಯಿತು.




ರಾಧಾ ಗೋವಿಂದ ಅವರು 1975ರ ಏಪ್ರಿಲ್ ಮೂರರಂದು ತಮ್ಮ 97ನೆಯ ವಯಸ್ಸಿನಲ್ಲಿ ಮರಣ ಹೊಂದಿದರು. ಬೆಂಗಾಲಿಯಲ್ಲಿ ಬರೆದ ಅವರ ವೈಜ್ಞಾನಿಕ ಲೇಖನಗಳು ಅನೇಕ ನಿಯತಕಾಲಿಕಗಳಲ್ಲಿ ಹಂಚಿಹೋಗಿವೆ. ಖಗೋಳ ವಿಜ್ಞಾನದ ಬಗ್ಗೆ ಅವರು ಬರೆದ ಪುಸ್ತಕಗಳು ಇನ್ನೂ ಹಸ್ತಪ್ರತಿಯಾಗಿಯೇ ಉಳಿದಿವೆ. ಅಂತರರಾಷ್ಟ್ರೀಯ ಮನ್ನಣೆ ಪಡೆದ ಹಳ್ಳಿಯ ಈ ಖಗೋಳ ವಿಜ್ಞಾನಿಯ ಬರಹಗಳನ್ನು ಒಟ್ಟುಗೂಡಿಸಲು ಇನ್ನೂ ಯಾವ ಪ್ರಯತ್ನವೂ ನಡೆದಿಲ್ಲ. ಔಪಚಾರಿಕ ತರಬೇತಿಯಾಗಲಿ, ವಿಶ್ವವಿದ್ಯಾನಿಲಯದ ಪದವಿಯಾಗಲಿ, ಸುಸಜ್ಜಿತ ವೇಧಶಾಲೆಯಾಗಲಿ ಇಲ್ಲದಿದ್ದರೂ, ಶ್ರದ್ಧೆಯಿಂದ, ತಾಳ್ಮೆಯಿಂದ ಕೆಲಸ ಮಾಡಿದರೆ ಪ್ರತಿಫಲ ದೊರಕುತ್ತದೆ ಎಂಬುದನ್ನು ರಾಧಾ ಗೋವಿಂದ ಚಂದ್ರ ಅವರು ತೋರಿಸಿದ್ದಾರೆ.

ಆಧಾರ : DREAM 2047. September 2001. Monthly bulletin of Vigyan Prasar.

ಜೀವೂಬಾಯಿ ಲಕ್ಷ್ಮಣರಾವ್
'ಮೈತ್ರಿ', ೧೨ನೇ ಮೇನ್ ರಸ್ತೆ, ಸರಸ್ವತಿಪುರಂ
ಮೈಸೂರು-೫೭೦ ೦೦೯

# ಇರುವುದೆಲ್ಲವ ಬಿಟ್ಟು




''**ಹೊ**ಲ್ದಾಗ ಬೆಳಿ ಇಲ್ಲಾ, ದನಕರಕ್ಕ ಮೇವಿಲ್ಲ, ಕೇಳಿದಷ್ಟು ಹಣಕ್ಕೆ ದನ ಮಾರಾಕ ಕೊಟ್ಟು ಗುಳೆ ಹೋಕ್ತೀವ್ರಿ.'' - ''ಹಿಂಗ್ ಮಳಿ ಹೋದ್ರ ನೇಣು ಹಾಕೋದು ಒಂದ ಬಾಕಿ ಉಳಿದೈತ್ರಿ.'' ರಾಜ್ಯದಲ್ಲಿ ಬಹುತೇಕ ಬರಪೀಡಿತ ಜನರ ಅಂತರಾಳದ ಮಾತಿವು.

ಬರಗಾಲದ ಮೂಲ ಹುಡುಕುತ್ತಾ ಹೋದಾಗ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ಬಹುತೇಕ ಯೋಜನೆಗಳು ಪರಿಸರ ವಿನಾಶಕ್ಕೆ ಕಾರಣವಾಗಿರುವುದು ತಿಳಿಯುತ್ತದೆ. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕೃಷಿ, ರಸ್ತೆ, ಗಣಿಗಾರಿಕೆ ಇತ್ಯಾದಿ ಕೆಲಸಗಳಿಗಾಗಿ ಸರಕಾರದ ಸಹಕಾರದಿಂದಲೇ ಸಹ್ಯಾದ್ರಿ ಪರ್ವತ ಪ್ರದೇಶದಲ್ಲಿ ೨,೧೨,೬೮೮ ಹೆಕ್ಟೇರ್ ಅರಣ್ಯವನ್ನು ಕಡಿಯಲಾಗಿದೆ. ಕೈಗಾದಿಂದ - ನರೇಂದ್ರದವರೆಗೆ ವಿದ್ಯುತ್ ಲೈನ್ ಹಾಕಲು ಸುಮಾರು ೭೦,೦೦೦ಕ್ಕೂ ಮಿಕ್ಕಿ ವಿವಿಧ ಜಾತಿ ಮರಗಳನ್ನು ನೆಲಕ್ಕುರುಳಿಸಲು ಖಾಸಗಿ ಕಂಪನಿಯೊಂದು ಸಜ್ಜಾಗಿ ನಿಂತಿದೆ.

ಅದೇ ರೀತಿಯಾಗಿ ಪರಂಪರಾಗತವಾಗಿ ಬಂದ ನೀರಿನ ಸಂಗ್ರಹಣೆ ಮತ್ತು ಪೂರೈಕೆಯನ್ನು ಮೂಲೆ ಗುಂಪಾಗಿಸಿ ಕೆರೆ-ಬಾವಿಗಳನ್ನು ಹೂಳು ತುಂಬಲು ಬಿಟ್ಟಿದ್ದೇವೆ (ರಾಜ್ಯ ಸರ್ಕಾರ ಕೆರೆಗಳ ಹೂಳೆತ್ತಲು ಕ್ರಮ ಕೈಗೊಂಡಿರುವುದು ಸ್ತುತ್ಯಾರ್ಹ). ರಾಜ್ಯ ಸರ್ಕಾರ ೧,೭೫,೦೦೦ ಕೈಪಂಪುಗಳನ್ನು ನಿರ್ಮಿಸಿ, ಅಂತರ್ಜಲ ಕುಡಿಕೆ ಹೊನ್ನಿನಂತೆ ಸಂಗ್ರಹಿಸಿಟ್ಟ ನಿಧಿ ಎಂಬುದನ್ನು ಮರೆತು ಕುಡಿವ ನೀರಿಗೆ ಶಾಶ್ವತ ಪರಿಹಾರ ಒದಗಿಸಿದಂತೆ ವರ್ತಿಸಿತು. ಆದರೆ ಬಹುತೇಕ ಕೈಪಂಪುಗಳು ಇಂದು ಬಂದಾಗಿವೆ.

ಇವೆಲ್ಲಕ್ಕೂ ಕೇವಲ ಸರ್ಕಾರವನ್ನು ದೂಷಿಸಿ ಫಲವಿಲ್ಲ. ಅವರನ್ನೆಲ್ಲಾ ಅಲ್ಲಿಗೆ ಕಳಿಸಿದವರೂ ನಾವೇ ಅಲ್ಲವೇ. ಜನರ ಕರ್ತವ್ಯದತ್ತ ಗಮನಹರಿಸೋಣ.

ಬರಗಾಲದ ನಿವಾರಣೆಗಾಗಿ ಮಧ್ಯಪ್ರದೇಶದ ಚಿಪ್ಪಾ, ರಾಜಾಸ್ಥಾನದ ಪಾಲ್‌ಪಾನ್, ಮಹಾರಾಷ್ಟ್ರದ ರಾಳೆಗಣಸಿದ್ಧಿ ಮತ್ತು ಸುತ್ತಮುತ್ತಲಿನ ಜನತೆ ಕೈಗೊಂಡ ಕ್ರಮವನ್ನು ಅವಲೋಕಿಸಿದಾಗ ನಮ್ಮ ದಾರಿ ಸುಗಮವಾಗುತ್ತದೆ.

ಮಧ್ಯಪ್ರದೇಶದ ಚಿಪ್ಪಾ ಒಂದು ಸಾವಿರ ಜನಸಂಖ್ಯೆ ಇರುವ ಪುಟ್ಟ ಗ್ರಾಮ. ಸುತ್ತಲೂ ಬೆಟ್ಟಗಳಿಂದಾವೃತವಾಗಿದೆ. ಬೇಸಿಗೆ ಬಂತೆಂದರೆ ನೀರಿದ್ದೆಡೆಗೆ ಅನ್ನ, ಆಶ್ರಯ ಅರಸಿ ಊರಿಗೆ ಊರೇ ವಲಸೆ ಹೋಗುವುದು ಸಾಮಾನ್ಯವಾಗಿತ್ತು.

೧೯೯೬ರಿಂದೀಚೆಗೆ ರಾಜೀವ್‌ಗಾಂಧಿ ನೀರು ಸಂರಕ್ಷಣಾ ಘಟಕ ಹಾಗೂ ಲೋಕ ಕಲ್ಯಾಣ ಪರಿಷತ್‌ನವರ ಮಾರ್ಗದರ್ಶನದಲ್ಲಿ ಚಿಪ್ಪಾದ ಜನತೆ ಕಟ್ಟೆ ಪುರಾಣ ಕೈಬಿಟ್ಟು ಪಕ್ಕದ ಬೆಟ್ಟಗಳಲ್ಲಿ ೩-೪ ಮೀಟರ್ ಅಂತರಗಳಲ್ಲಿ ಇಂಗು-ಬಚ್ಚಲು (ಟ್ರೆಂಚ್)ಗಳನ್ನು ಕಡಿದರು. ಅವಕಾಶವಿದ್ದಾಗಲೆಲ್ಲಾ ಸಸಿಗಳನ್ನು ನೆಡುವುದು ಮಕ್ಕಳಂತೆ ಪಾಲಿಸುವುದು ನಿತ್ಯದ ಕರ್ಮವಾಯಿತು. ಮಳೆ ನೀರು ಹರಿದು ಹೋಗದಂತೆ ಒಡ್ಡುಗಳನ್ನು, ಕೃಷಿ ಹೊಂಡಗಳನ್ನು ನಿರ್ಮಿಸಿದರು. ಹಾಳು ಬಾವಿ, ಕೆರೆಗಳನ್ನು ಸ್ವಚ್ಛಗೊಳಿಸಿ ಮಳೆ ನೀರು ಬಿಟ್ಟರು.

ಕಳೆದ ವರ್ಷ ಸುತ್ತಲ ಗ್ರಾಮಗಳಲ್ಲಿ ಕ್ಷಾಮ ತಲೆದೋರಿದರೂ, ಇಲ್ಲಿಯ ಅಂತರ್ಜಲಕ್ಕೆ ಯಾವುದೇ ತೊಂದರೆಯಾಗಿಲ್ಲ. ಹುಣಿಸೆ, ಮಾವು, ಬೇವು, ತೇಗ, ಸುಬಾಬುಲ್ ಮುಂತಾದ ಮರಗಳು ನಾಲ್ಕೈದು ವರ್ಷಗಳಲ್ಲಿ ಸಮೃದ್ಧವಾಗಿ ಬೆಳೆದು ನಿಂತಿವೆ. ಬೇಸಿಗೆಯಲ್ಲಿ ನೀರಿಗಾಗಿ ಪರದಾಡಬೇಕಿಲ್ಲ, ತಾವೇ ಸ್ವತಃ ಗೋಧಿ, ಜೋಳ, ಸೋಯಾಬೀನ್ ವಿಪುಲವಾಗಿ ಬೆಳೆಯುತ್ತಾರೆ. ವರಮಾನದಲ್ಲಿ ಸಾಕಷ್ಟು ಹೆಚ್ಚಳವಾಗಿದೆ.

'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ' ಎಂಬ ಅಡಿಗರ ವಾಣಿಯಂತೆ, ನಾವು ವರುಣನ ಕೃಪೆಗಾಗಿ ಅನ್ನಸಂತರ್ಪಣೆ, ಕತ್ತೆ ಮೆರವಣಿಗೆ, ಗುರ್ಜಿಪೂಜೆ, ಯಜ್ಞಯಾಗಾದಿಗಳನ್ನು ಮಾಡುತ್ತಾ, ಅಜ್ಜ ನೆಟ್ಟ ಆಲದ ಮರಕ್ಕೆ ಜೋತು ಬೀಳದೆ ಮಾನವ ಸಂಪನ್ಮೂಲ ನಷ್ಟವಾಗದಂತೆ ನಮ್ಮೂರಿನ ಅಭಿವೃದ್ಧಿಗೆ ನಾವು ಶ್ರಮಿಸುವುದು ಒಳ್ಳೆಯದಲ್ಲವೆ.

ರವಿ. ಸೋ. ದೇವರಡ್ಡಿ
ಶಿಕ್ಷಕರು, ಹೊನ್ನಹಮ್ಮಿಗಿ - ೫೮೨ ೧೧೮

# ಕಾಯಕ ಮೌಲ್ಯ

**ನ**ಮ್ಮ ದೇಶದಲ್ಲಿ ಈ ಹೊತ್ತು ಸಾಯಕ್ಕೆ ಪುರಸ್ಕಾರವೇ ಹೊರತು ಕಾಯಕಕ್ಕಲ್ಲ! ಆಲಸ್ಯ ಮತ್ತು ಜಡತೆ ಇಂದು ರಾಷ್ಟ್ರೀಯ ಸಮಸ್ಯೆಯಾಗಿದೆ. ಕಷ್ಟಪಟ್ಟು ಕೆಲಸ ಮಾಡುವುದು, ಮೈಮುರಿದು ದುಡಿಯುವುದು, ಬೆವರು ಸುರಿಸುವುದು ಯಾರಿಗೂ ಇಷ್ಟವಿಲ್ಲ. ಈ ಕಾಯಕ ಶ್ರದ್ಧೆಯ ಅಭಾವವೇ ನಮ್ಮ ಸಮಾಜ ಹಿಂದುಳಿದಿರುವುದಕ್ಕೆ ಒಂದು ಮುಖ್ಯ ಕಾರಣ. ನಮ್ಮಲ್ಲಿ ಸಂಪನ್ಮೂಲಗಳಿಗೆ ಕೊರತೆಯಿಲ್ಲ; ಜನಸಂಪತ್ತಂತೂ ಅಪಾರವಾಗಿದೆ. (ಜನಸಂಖ್ಯಾ ಸ್ಫೋಟವೇ ಎಲ್ಲ ಸಮಸ್ಯೆಗಳ ತಾಯಿಬೇರೆಂಬುದು ಪೂರ್ತಿ ನಿಜವಲ್ಲ). ಆದರೆ ಐಷಾರಾಮ ಪ್ರವೃತ್ತಿ ಪ್ರಗತಿಗೆ ಕಂಟಕಪ್ರಾಯವಾಗಿದೆ.

ಪ್ರಾಚೀನ ಭಾರತದಲ್ಲಿ ಪರಿಸ್ಥಿತಿ ಹೀಗಿರಲಿಲ್ಲ. ''ಕುರ್ವನ್ನೇವೇಹ ಕರ್ಮಾಣಿ ಜಿಜೀ ವಿಷೇಚ್ಛತಂ ಸಮಾಃ'' (ಕರ್ಮ ಮಾಡುತ್ತಲೇ ಇಲ್ಲಿ ನೂರು ವರ್ಷ ಬದುಕೋಣ) ಎಂಬುದು ಉಪನಿಷತ್ತಿನ ಒಂದು ಉಕ್ತಿ. ಇದರಲ್ಲಿರುವ ಜೀವನೋತ್ಸಾಹ, ಕರ್ಮಾಸಕ್ತಿ ಎರಡೂ ಆಶ್ಚರ್ಯ ಕರ. ಕರ್ಮ ಪ್ರವೃತ್ತಿಗೂ ದೀರ್ಘಾಯುಷ್ಯಕ್ಕೂ ನಂಟು ಎಂಬುದನ್ನೂ ಗಮನಿಸಬೇಕು.

ಭಾರತೀಯರು ಸೋಮಾರಿಗಳಾದುದು ಬಹುಶಃ ಮಧ್ಯಯುಗದಲ್ಲಿ; ಆ ಅವಧಿಯಲ್ಲೇ ಭಾರತೀಯ ಸಮಾಜ ಅವನತಿಗೊಂಡಿತು. ಅದಕ್ಕೆ ನಾನಾ ಕಾರಣಗಳು; ವೈಚಾರಿಕತೆ ಲುಪ್ತವಾದದ್ದು ಅವುಗಳಲ್ಲೊಂದು.

೧೨ನೆಯ ಶತಮಾನದ ಕರ್ನಾಟಕದಲ್ಲಿ ಶಿವಶರಣರು ಕಾಯಕವನ್ನೊಂದು ಮಹಾ ಮೌಲ್ಯವನ್ನಾಗಿಸಿದರು. ಅವರ ದೃಷ್ಟಿಯಲ್ಲಿ ಆಧ್ಯಾತ್ಮಕ ಮತ್ತು ಸಾಮಾಜಿಕ ಸರ್ವೋದಯದ ಅಡಿಪಾಯ, ಕಾಯಕ. ಎಲ್ಲರೂ ಕಾಯಕ ಮಾಡಬೇಕು, ಕಾಯಕಗಳಲ್ಲಿ ತಾರತಮ್ಯವಿಲ್ಲ ಎಂಬುದು ಶರಣರ ನಿಲುವು. ಅಷ್ಟೇ ಅಲ್ಲ, ಕಾಯಕ ''ಸತ್ಯಶುದ್ಧ''ವಾಗಿರಬೇಕು ಎಂದು ಅವರು ಹೇಳುತ್ತಾರೆ. ''ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾದರೂ ಕಾಯಕದೊಳಗು !'' ಎಂಬುದು ಆಯ್ದಕ್ಕಿ ಮಾರಯ್ಯನ ಮಹತ್ವದ ಮಾತು. ಲಿಂಗವೂ ಕಾಯಕ ಮಾಡಬೇಕು ಎಂಬುದು ಮಾತ್ರವಲ್ಲದೆ, ಕಾಯಕವಿದ್ದಲ್ಲಿ ಲಿಂಗವಿರುತ್ತದೆ ಅಥವಾ ಬರುತ್ತದೆ ಎಂದು ಇದರ ಅಭಿಪ್ರಾಯ. ದೇವರ ಹೆಸರಿನಲ್ಲಿ ಬೊಜ್ಜು ಬೆಳೆಸಿಕೊಳ್ಳುವ ಚಾಳಿಗೆ ಸಂಪೂರ್ಣ ವ್ಯತಿರಿಕ್ತವಾಗಿದೆ, ದೇವರೂ ಕಾಯಕ ನಿರತನಾಗಬೇಕು ಎಂಬ ಈ ನಿರೀಕ್ಷೆ ಮತ್ತು ಒತ್ತಾಯ !

ಹಿಂದಿನ ಕಾಲದಲ್ಲಿ ಕಾಯಕಕ್ಕೆ ಪ್ರಾಶಸ್ತ್ಯವಿತ್ತು ಎಂಬುದಕ್ಕೆ ಇಲ್ಲಿ ಒಂದು ಮೂರ್ತ ನಿದರ್ಶನವನ್ನು ಕೊಡಬಹುದು. ರನ್ನನ ಜೈನ ಧಾರ್ಮಿಕ ಕಾವ್ಯವಾದ 'ಅಜಿತಪುರಾಣ'ದಲ್ಲಿ ಸಗರ ಪ್ರಕರಣವೊಂದು ವೈದಿಕ ಸಂಪ್ರದಾಯದ ಸಗರ ಕಥೆಗೆ ಭಿನ್ನವಾಗಿ ಬರುತ್ತದೆ. ಸಗರನಿಗೆ ಅರುವತ್ತು ಸಾವಿರ ಮಂದಿ ಪುತ್ರರು. ಅವರೊಮ್ಮೆ ತಂದೆಯಲ್ಲಿಗೆ ಬಂದು, ''ನಮಗೆ ಕೆಲಸವನ್ನು ಹೇಳು !'' ಎಂದು ಕೇಳುತ್ತಾರೆ. ಸಗರ ''ನಿಮಗೆಂಥ ಕೆಲಸ ? ಏನು ಕೆಲಸವಿದ್ದರೂ ಮಾಡಿಕೊಡಲು ನನ್ನಲ್ಲಿ ಚಕ್ರ ರತ್ನವಿದೆ. ನೀವು ನನ್ನೊಡನೆ ಸಾಮ್ರಾಜ್ಯ ಸುಖವನ್ನನುಭವಿಸುತ್ತ ಇರಿ !'' ಎನ್ನುತ್ತಾನೆ. ಸಗರ ಪುತ್ರರು ಸುಮ್ಮನಿರದೆ ''ನಮ್ಮೆರಡು ತೋಳುಗಳು ವ್ಯರ್ಥವಾಗಬಾರದು. ಏನಾದರೂ ಕೆಲಸ ಹೇಳು !'' ಎಂದು ಪ್ರತಿನಿತ್ಯ ತಂದೆಯನ್ನು ಕಾಡುತ್ತಾರೆ. 'ಅಜಿತ ಪುರಾಣ'ಕ್ಕೆ ಮೂಲವಾದ ಸಂಸ್ಕೃತ 'ಉತ್ತರ ಪುರಾಣ'ದಲ್ಲಿ ಅವರು ಈ ಮಾತುಗಳನ್ನೂ ಆಡುತ್ತಾರೆ. ''ದುಡಿಯದೆ ತಿಂದು ನಾವು ಪಾಪ ಕಟ್ಟಿಕೊಳ್ಳಲಾರೆವು... ಬೆವರು ಸುರಿಸದೆ ನಾವು ಊಟ ಮಾಡುವುದಿಲ್ಲ!'' (ಮುಂದಿನ ಕತೆ ಇಲ್ಲಿ ಅಪ್ರಸ್ತುತ).

ಕಾಡಿ, ಬೇಡಿ ಕೆಲಸ ಮಾಡುವ ಈ ಪ್ರವೃತ್ತಿಯೆಲ್ಲಿ ? ಏನಾದರೂ ಉಪಾಯ ಹೂಡಿ ಕೆಲಸ ತಪ್ಪಿಸಿಕೊಳ್ಳುವ ಇಂದಿನ ಮೈಗಳ್ಳತನವೆಲ್ಲಿ ? ದೇಶ ಇಂಥ ದುರವಸ್ಥೆಗಿಳಿಯಿತೇಕೆ ? ಕಾಯಕಕ್ಕೆ ಮತ್ತೆ ಗೌರವ ಸಲ್ಲುವುದು ಯಾವಾಗ ?

ಡಾ|| ಸಿ. ಪಿ. ಕೃಷ್ಣಕುಮಾರ್
೨೨೬೫/೧೯, 'ಭಾರತಿ', ೬ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ವಿನಾಯಕನಗರ, ಮೈಸೂರು-೫೭೦ ೦೧೨

**HOSATHU** Kannada Monthly / April 2002 Rs. 10

RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14

ಕನ್ನಡದಲ್ಲೊಂದು ಅಪೂರ್ವ ಸಾಧನೆ

*ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ*

## ನವಕರ್ನಾಟಕ

# ಜ್ಞಾನ-ವಿಜ್ಞಾನ ಕೋಶ

ಜ್ಞಾನ-ವಿಜ್ಞಾನ ತಂತ್ರಜ್ಞಾನದ ಸರಳ ಸಚಿತ್ರ ನಿರೂಪಣೆ

*ಪ್ರಧಾನ ಸಂಪಾದಕರು*

**ಪ್ರೊ॥ ಎಂ. ಎ. ಸೇತುರಾವ್**

**ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್**

ಜನಪ್ರಿಯ ಎರಡನೇ ಮುದ್ರಣ




**ಡೆಮ್ಮಿ ¼ ಆಕಾರದ 740 ಪುಟಗಳು**
**(ವಿಷಯ ಸೂಚಿ ಸೇರಿ)**

ಸಲಹಾ ಮಂಡಳಿ ಸದಸ್ಯರು : ಪ್ರೊ॥ ಜೆ. ಆರ್. ಲಕ್ಷ್ಮಣರಾವ್, ಪ್ರೊ॥ ಅಡ್ಯನಡ್ಕ ಕೃಷ್ಣಭಟ್
ಶ್ರೀ ಕೊಳ್ಳೇಗಾಲ ಶರ್ಮ, ಡಾ॥ ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್

*ನಾಲ್ಕು ಸಂಪುಟಗಳಲ್ಲಿ... 33 ಪರಿಣತ ವಿಜ್ಞಾನ ಲೇಖಕರ*

- 824 ಲೇಖನಗಳು
- 1,586 ವರ್ಣಚಿತ್ರಗಳು
- 150 ವಿಜ್ಞಾನಿಗಳ ಪರಿಚಯ
- 328 ಮಾಹಿತಿ ಅಂಕಣಗಳು
- 31 ನಿಮಗೆ ತಿಳಿದಿರಲಿ ಅಂಕಣಗಳು
- ನೊಬೆಲ್ ಪ್ರಶಸ್ತಿ ವಿಜೇತರು




**ಹೊಸತು**

**ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 250/- ನೀಡಿ ಜ್ಞಾನ-ವಿಜ್ಞಾನ ಕೋಶದ ಬೆಲೆಯ ಮೇಲೆ 20% ರಿಯಾಯಿತಿ ಪಡೆಯಿರಿ**




**4 ಸಂಪುಟಗಳ**
**ಒಟ್ಟು ಬೆಲೆ : ರೂ. 1800**

*ಕೆಲವು ಅಭಿಪ್ರಾಯಗಳು*

ಅನೇಕ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಈಗ ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ನೆನಪಿಗಾಗಿ ಇನ್ನೊಂದು ದೊಡ್ಡ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಅದೇ ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ. ಕರ್ನಾಟಕದ ಮಟ್ಟಿಗಂತೂ ಖಾಸಗಿ ನೆಲೆಯಲ್ಲಿ ಇದು ಪ್ರಥಮ ಪ್ರಯತ್ನ. *-ಕರ್ಮವೀರ, 10-5-98*

ವಿಜ್ಞಾನ ಮಾಹಿತಿಗಳ ವಾಹಿನಿಯ ನಡುವೆ ಅಲ್ಲಲ್ಲಿ ನೀಡಿರುವ 'ನಿಮಗೆ ತಿಳಿದಿರಲಿ' ವಿಭಾಗವು ಅನೇಕ ಸಾರ್ವತ್ರಿಕ ಆಸಕ್ತಿಯ ವಿಷಯಗಳ ಪರಿಚಯ ನೀಡುವುದರ ಜೊತೆಗೆ ಆ ವಿದ್ಯಮಾನಗಳ ಹಿಂದೆ ಅಡಗಿರುವ ಮೂಲ ವೈಜ್ಞಾನಿಕ ತತ್ವಗಳನ್ನು ತಿಳಿಸಿಕೊಡುತ್ತದೆ. ಇದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಆಸಕ್ತಿದಾಯಕ. *-ಕನ್ನಡಪ್ರಭ, 26-4-98*

ಇದೊಂದು ಮರಿ ವಿಶ್ವಕೋಶ. ಕನ್ನಡದಲ್ಲಿ ವಿಜ್ಞಾನ ವಾಙ್ಮಯ ಸಾಕಷ್ಟು ಪ್ರೌಢ ಸ್ಥಿತಿ ಐದಿರುವುದಕ್ಕೆ ಮಾನಕ.... ಕನ್ನಡದ ಹಿರಿಮೆ ಗರಿಮೆ ಬಗ್ಗೆ ಕೃತಾರ್ಥತೆ, ನವಕರ್ನಾಟಕದವರ ಬಗ್ಗೆ ಕೃತಜ್ಞತೆ. - ಜಿ. ಟಿ. ನಾರಾಯಣರಾವ್, ವೆಬ್‌ಸೈಟ್‌ನಲ್ಲಿ

ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲಿ ಮೈಲುಗಲ್ಲಾದ ನಿಮ್ಮ ಪ್ರಯತ್ನವನ್ನು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಅಭಿನಂದಿಸುತ್ತದೆ ಮತ್ತು ಶುಭ ಹಾರೈಸುತ್ತದೆ. - ಡಾ॥ ಡಿ. ಕೆ. ಮಹಾಬಲರಾಜು, ಡಾ॥ ಎ. ಟಿ. ಪಾಟೀಲ್




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ : 5159, ಬೆಂಗಳೂರು - 560 001

ದೂರವಾಣಿ/ಫ್ಯಾಕ್ಸ್ : 2203580/81/82 e-mail : nkp@bgl.vsnl.net.in

website : www.navakarnatakabooks.com

*ಶಾಖೆಗಳು* : ಬೆಂಗಳೂರು - ಮಂಗಳೂರು - ಮೈಸೂರು - ಗುಲ್ಬರ್ಗಾ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna